# ಸಮಗ್ರ ದಾಸ ಸಾಹಿತ್ಯ

ಸಂಪುಟ : ೨೦



## ಸಿಂದಗಿ ಸಂಪ್ರದಾಯದ ಹಾಗೂ ಇತ
## ಸಂತ ಕವಿಗಳ ಕೀರ್ತನೆಗಳು

ಸಮಗ್ರ ದಾಸ ಸಾಹಿತ್ಯ

ಸಂಪುಟ : ೨೦

# ಸಿಂದಗಿ ಸಂಪ್ರದಾಯದ ಹಾಗೂ ಇತರ ಸಂತ ಕವಿಗಳ ಕೀರ್ತನೆಗಳು

*ಸಂಪಾದಕರು*

ಪ್ರೊ. ಬಿ.ಆರ್. ಕುಲಕರ್ಣಿ

ಕರ್ನಾಟಕ ಸರ್ಕಾರ

ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ

ಬೆಂಗಳೂರು

**SAMAGRA DASA SAHITYA VOLUME - 20** :
*Sindagi Sampradayada haagu Itara Santakavigala Keertanegalu,*
Edited by Prof. B.R. Kulkarni and published by Sri. Y.K. Muddukrishna, Director, Directorate of Kannada and Culture, Kannada Bhavana, J.C. Road, Bangalore - 560 002.

ಪುಟಗಳು : 84 + ೩೧೧


ಪ್ರಥಮ ಮುದ್ರಣ : ೨೦೦೩
ಪ್ರತಿಗಳು : ೧೨೫೦

ಬಿಡಿ ಪ್ರತಿ ಬೆಲೆ : ರೂ. ೬೦=೦೦
ಸಮಗ್ರ ಸಂಪುಟಗಳ ಬೆಲೆ : ರೂ. ೨೪೦೦=೦೦

ಮುದ್ರಣ ನಿರ್ವಹಣೆ :
ಮೈಸೂರು ಸೇಲ್ಸ್ ಇಂಟರ್‌ನ್ಯಾಷನಲ್ ಲಿಮಿಟೆಡ್
೩೬, ಕನ್ನಿಂಗ್‌ಹ್ಯಾಂ ರಸ್ತೆ
ಬೆಂಗಳೂರು – ೫೬೦ ೦೫೨

ಮುದ್ರಕರು :
ಮೆ. ಡಾಟ್ಸ್
೧೨೪, ಸುಲ್ತಾನ್‌ಪೇಟೆ
ಬೆಂಗಳೂರು – ೫೬೦ ೦೫೩

# ಸಮಗ್ರ ದಾಸಸಾಹಿತ್ಯ ಪ್ರಕಟಣ ಯೋಜನೆ

# ಮುನ್ನುಡಿ

ಹರಿದಾಸ ಸಾಹಿತ್ಯ ಕನ್ನಡ ಸಂಸ್ಕೃತಿ ಪರಂಪರೆಯ ಮಹತ್ವಪೂರ್ಣ ಭಾಗವಾಗಿದೆ. ದೇಶೀಯತೆ ಹಾಗೂ ಗೇಯತೆಗಳೆರಡನ್ನೂ ಮೇಳವಿಸಿಕೊಂಡು, ಕನ್ನಡ ಸಾಹಿತ್ಯವಾಹಿನಿಗೆ ಇದು ಹೊಸತನವನ್ನು ನೀಡಿದೆ. ಮನುಜಮತ, ಸಾಹಿತ್ಯಪಥ ಹಾಗೂ ಭಕ್ತಿಸಿದ್ಧಾಂತದ ತ್ರಿವೇಣಿಯಾಗಿರುವ ಈ ಪ್ರಜಾಸಾಹಿತ್ಯವನ್ನು ಪ್ರಜೆಗಳಿಗೆ ಮುಟ್ಟಿಸುವುದು ಪ್ರಜಾಸತ್ತಾತ್ಮಕ ಸರಕಾರದ ಆದ್ಯ ಕರ್ತವ್ಯವಾಗಿದೆ.

ಕನ್ನಡ ಭಾಷಿಕಶಕ್ತಿಯ ವಿವಿಧ ಆಯಾಮಗಳನ್ನು ಸೆಳೆದು ತೋರಿರುವ ಸಾಹಿತ್ಯ–ಸಂಗೀತಗಳ ಸಾಮರಸ್ಯವನ್ನು ಮೆರೆದಿರುವ ಈ ಸಾಹಿತ್ಯ ಕನ್ನಡ ಸಾಹಿತ್ಯಕ್ಕೆ ಜಾಗತಿಕ ಮಹತ್ವವನ್ನು ತಂದುಕೊಟ್ಟಿದೆ ಎಂದರೆ ಅತಿಶಯೋಕ್ತಿಯಾಗಲಾರದು. ಮಾನವಾನುಕಂಪ, ಸಮಾಜಸುಧಾರಣೆ, ಲೋಕದ ಡೊಂಕುಗಳನ್ನು ನಗೆ ವಿಡಂಬನೆಗಳ ಮೂಲಕ ತಿದ್ದುವ ಕೌಶಲ ದಾಸಸಾಹಿತ್ಯದ ಪ್ರಮುಖ ಲಕ್ಷಣವಾಗಿದೆ.

ಆಧ್ಯಾತ್ಮಿಕ ಸಾಧನೆ, ಅನುಭವ – ಅನುಭಾವಗಳು ದಾಸಸಾಹಿತ್ಯದ ಪ್ರಮುಖ ಅಂಶವಾದರೂ, ಸುತ್ತಮುತ್ತಲಿರುವ ಜೀವನದ ಕಡೆಗೆ, ಮಾನವ ಸ್ವಭಾವದ ಕಡೆಗೆ ಕಣ್ಣು ಹರಿಸಿದ ಹರಿದಾಸರು ಸಾತ್ತ್ವಿಕ ಜೀವನ ನಿರ್ವಹಣೆಗೆ, ಮಾನವನ ಮೇಲ್ಮೆಗೆ, ನೈತಿಕ ಆಚರಣೆಗೆ ಒತ್ತು ನೀಡಿದವರು.

ಹರಿದಾಸ ಸಾಹಿತ್ಯ ಅಪಾರವಾದುದು ಹಾಗೂ ವೈವಿಧ್ಯವಾದುದು. ಈ ವಿಪುಲ ಸಾಹಿತ್ಯರಾಶಿಯನ್ನು ಒಂದೆಡೆ ಕ್ರೋಢೀಕರಿಸಿ, ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯವನ್ನು ಕನ್ನಡ ಜನತೆಗೆ ನೀಡುತ್ತಿದೆ.

ಈ ಯೋಜನೆಗೆ ದುಡಿದ ಸಂಪಾದಕ ಮಂಡಳಿಯ ಶ್ರದ್ಧೆ ಹಾಗೂ ಮಾರ್ಗದರ್ಶನವನ್ನು, ವಿವಿಧ ಸಂಪುಟಗಳ ಸಂಪಾದಕರಾಗಿ ನಾಡಿನ ಅನೇಕ ವಿದ್ವಾಂಸರು ತೋರಿರುವ ಆಸಕ್ತಿ ಹಾಗೂ ನೆರವನ್ನು ಮತ್ತು ಈ ಸಂಪುಟದ ಸಂಪಾದಕರ ಶ್ರಮವನ್ನು ಸ್ಮರಿಸುತ್ತ ಕನ್ನಡ ಜನತೆಯ ಕೈಗೆ ಈ ಮೌಲಿಕ ಪ್ರಕಟಣೆಗಳನ್ನು ಸಂತೋಷದಿಂದ ಅರ್ಪಿಸುತ್ತೇನೆ.

ಎಸ್. ಎಂ. ಕೃಷ್ಣ
ಮುಖ್ಯಮಂತ್ರಿಗಳು
ಕರ್ನಾಟಕ ಸರ್ಕಾರ

# ಎರಡು ಮಾತು

ಕನ್ನಡ ಸಾಹಿತ್ಯದ ತವನಿಧಿಗಳಲ್ಲಿ ದಾಸಸಾಹಿತ್ಯವೂ ಒಂದು. ಕರ್ನಾಟಕದ ಸಾಹಿತ್ಯ, ಸಂಗೀತ, ಸಂಸ್ಕೃತಿಗಳನ್ನು ಪ್ರಭಾವಪೂರ್ಣವಾಗಿ ಸಮೃದ್ಧಿಗೊಳಿಸಿದವರು ಹರಿದಾಸರು. ಬದುಕಿನಲ್ಲಿ ನಿಷ್ಠೆ, ಸಾಹಿತ್ಯದಲ್ಲಿ ಬದುಕಿನ ತತ್ತ್ವಗಳನ್ನು ಅಡಗಿಸಿ ಜನಸಾಮಾನ್ಯರನ್ನು ಉನ್ನತ ಜೀವನದತ್ತ ಉದ್ದೀಪಿಸುವ ಮಹಾಕಾಯಕದಲ್ಲಿ ತೊಡಗಿದವರು ಹರಿದಾಸರು. ಕನ್ನಡ ಸಾಹಿತ್ಯಕ್ಕೆ ಅಪೂರ್ವ ಕೊಡುಗೆಯಾಗಿರುವ ಹರಿದಾಸ ಸಾಹಿತ್ಯ ಸಮಾಜದ ಮೌಢ್ಯವನ್ನು ಬಯಲಿಗೆಳೆದು, ಜಾತಿ, ಮತ, ಪಂಥಗಳನ್ನು ಮೀರಿ ನಿಂತ ಮಾನವೀಯ ಮೌಲ್ಯಗಳನ್ನು ಸಾಹಿತ್ಯದ ಮೂಲಕ ಅಭಿವ್ಯಕ್ತಿಸಿತು.

ಹರಿದಾಸ ಸಾಹಿತ್ಯಕ್ಕೆ ಪ್ರೇರಣೆ ಭಕ್ತಿಯಾದರೂ, ಕರ್ನಾಟಕ ಸಂಗೀತಕ್ಕೆ ಸಮೃದ್ಧಿಯನ್ನು ನೀಡಿದವರು ಹರಿದಾಸರು. ಗ್ರಾಮ್ಯ ಮತ್ತು ದೇಶ್ಯ ಶಬ್ದಗಳು ಸಾಹಿತ್ಯದ ಮುದ್ರೆಯನ್ನು ಪಡೆದ ಭಾಷೆಗೊಂದು ಪರಿಪಕ್ವತೆಯನ್ನು ತಂದುಕೊಟ್ಟವರು. ಇಂಥ ಸಾಹಿತ್ಯ ಸಂಪತ್ತನ್ನು ರಕ್ಷಿಸುವುದು ಮತ್ತು ಪ್ರಸಾರ ಮಾಡುವುದು ನಮ್ಮ ಕರ್ತವ್ಯ. ಈ ದೃಷ್ಟಿಯಿಂದ ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯ ಪ್ರಕಟಣ ಯೋಜನೆಗೆ ಸಮಿತಿಯೊಂದನ್ನು ರಚಿಸಿದ್ದು, ಇದರಲ್ಲಿ ನಾಡಿನ ಅನೇಕ ವಿದ್ವಾಂಸರು ಸಂಪುಟ ಸಂಪಾದಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಈ ಸಂಪುಟಗಳು ಹೊರಬರಲು ಕಾರಣರಾದ ಸಂಪಾದಕ ಮಂಡಳಿಯ ಸದಸ್ಯರಿಗೆ ಹಾಗೂ ಈ ಸಂಪುಟದ ಸಂಪಾದಕರಿಗೆ ನನ್ನ ಕೃತಜ್ಞತೆಗಳು.

ದಾಸರು ತಮ್ಮ ಸಾಹಿತ್ಯದಲ್ಲಿ ಸಾರ್ವಕಾಲಿಕ ಮೌಲ್ಯಗಳನ್ನು ಉಳಿಸಿ ಹೋಗಿದ್ದಾರೆ. ನಮ್ಮ ಸಾಮಾಜಿಕ ಜೀವನವನ್ನು ರೂಪಿಸುವಲ್ಲಿ ಈ ಕೀರ್ತನೆಗಳು ಮೌಲಿಕವಾದುವು. ಕನ್ನಡ ಜನತೆ ಈ ಕೃತಿಯ ಪ್ರಯೋಜನವನ್ನು ಪಡೆದರೆ ಪಟ್ಟ ಶ್ರಮ ಸಾರ್ಥಕವಾಗುತ್ತದೆ.

**ರಾಣಿ ಸತೀಶ್**

ಕನ್ನಡ ಮತ್ತು ಸಂಸ್ಕೃತಿ ಸಚಿವರು

# ಯೋಜನೆಯನ್ನು ಕುರಿತು

ಕನ್ನಡ ಸಾಹಿತ್ಯ ಚರಿತ್ರೆಯ ಸಿರಿವಂತಿಕೆಯಲ್ಲಿ ಕೀರ್ತನ ಸಾಹಿತ್ಯದ ಕೊಡುಗೆ ವಿಪುಲವಾದುದು ; ವೈಶಿಷ್ಟ್ಯಪೂರ್ಣವಾದುದು. ಈ ಸಮಗ್ರ ಸಾಹಿತ್ಯದ ಸಂಗ್ರಹ ಮತ್ತು ಪ್ರಕಾಶನದ ಕಾರ್ಯ ಪೂರ್ಣವಾಗಿ ಆಗಿರಲಿಲ್ಲ. ಇದನ್ನು ಮನಗಂಡ ಸರ್ಕಾರ ಸಮಗ್ರ ಸಾಹಿತ್ಯ ಪ್ರಕಟಣೆಯ ಕಾರ್ಯವನ್ನು ಕೈಗೆತ್ತಿಕೊಂಡಿತು.

ಸುಮಾರು ಒಂದು ನೂರ ಮೂವತ್ತೊಂಬತ್ತು ಜನ ದಾಸರ ಸುಮಾರು ಹದಿನಾರು ಸಾವಿರ ಕೀರ್ತನೆಗಳ ಬೃಹತ್ ಸಾಹಿತ್ಯ ಸಾಮಗ್ರಿ ದೊರಕಿತು. ಹೀಗೆ ಸಾಂಪ್ರದಾಯಿಕ ರೀತಿಯಲ್ಲಿ ಸಂಗ್ರಹಿಸಿ, ಸಂಪಾದಿಸಿದ ಕೀರ್ತನ ಸಾಹಿತ್ಯವನ್ನು ಸಂಪುಟಗಳಲ್ಲಿ ಮುದ್ರಿಸುವುದು ಕಷ್ಟವೇನಾಗಿರಲಿಲ್ಲ. ಆದರೆ, ಅದನ್ನು ಮಾಹಿತಿ ತಂತ್ರಜ್ಞಾನದ ಇವತ್ತಿನ ಸಂದರ್ಭದಲ್ಲಿ ಬಹು ಉಪಯೋಗಿ ನೆಲೆಯಲ್ಲಿ ಬಹುಮಾಧ್ಯಮದಲ್ಲಿ ಹೊರತರಬೇಕೆಂಬ ಕನಸು ರೋಮಾಂಚಕಾರಿ ಅನುಭವವೇ ಸರಿ. ಇದನ್ನು ಕೃತಿ ರೂಪಕ್ಕಿಳಿಸುವ ಹಾದಿಯಲ್ಲಿ ಎದುರಾದ ತಾಂತ್ರಿಕ ಸವಾಲು ಬಹು ಕ್ಲಿಷ್ಟಕರವಾಗಿಯೇ ಕಂಡಿತು.

ದಿಟ, ಈ ಸಮಗ್ರ ಸಾಹಿತ್ಯವನ್ನು ಕೇವಲ ಮುದ್ರಣದಲ್ಲಷ್ಟೇ ಅಲ್ಲ ಆಯ್ದ ಕೀರ್ತನೆಗಳನ್ನು ಗಾಯನಕ್ಕೆ ಅಳವಡಿಸಿ, ಸಿಡಿ ಮತ್ತು ಅಂತರ್ಜಾಲದಲ್ಲಿ ಹೊರತರ ಬೇಕೆಂದಾಗ ಬಳಕೆದಾರರ ಅವಶ್ಯಕತೆಯನ್ನು ಆಧರಿಸಿ ತಯಾರಿಸುವ ಅಗತ್ಯ ಇತ್ತು. ಆದರೆ ಇವುಗಳಲ್ಲಿ ಕನ್ನಡ ಮತ್ತು ಇಂಗ್ಲಿಷ್ ಎರಡೂ ಭಾಷೆಗಳಲ್ಲಿ ಸರ್ಚ್ ಎಂಜಿನ್ (ಹುಡುಕುವಿಕೆ) ಇಲ್ಲದಿರುವುದು ಒಂದು ತಾಂತ್ರಿಕ ಸಮಸ್ಯೆಯೇ ಆಯಿತು.

ಈ ರೀತಿಯ ಪ್ರಯತ್ನ ಕನ್ನಡ ಭಾಷೆಯಲ್ಲಿ ಹಿಂದೆಂದೂ ಆಗದಿದ್ದುದರಿಂದ ತಂತ್ರಾಂಶವನ್ನು ಹೊಸದಾಗಿಯೇ ಅಭಿವೃದ್ಧಿ ಪಡಿಸಬೇಕಾದ ಸವಾಲನ್ನು ಕೈಗೆತ್ತಿ ಕೊಳ್ಳಲಾಯಿತು. ಇದಕ್ಕಾಗಿ ಕನ್ನಡ ಗಣಕ ಪರಿಷತ್ತು, ರಾಷ್ಟ್ರೀಯ ಮಾಹಿತಿ ಕೇಂದ್ರ (ಎನ್ಐಸಿ), ಮಾಹಿತಿ ಮತ್ತು ತಂತ್ರಜ್ಞಾನ ಇಲಾಖೆ, ಮಹಾಭಾರತ ಸಂಶೋಧನಾ

ಪ್ರತಿಷ್ಠಾನ ಮುಂತಾದ ಹಲವಾರು ತಂತ್ರಾಂಶ ಸಂಸ್ಥೆಗಳೊಂದಿಗೆ ನಿರಂತರ ಸಮಲೋಚನೆ, ಚಿಂತನೆಗಳನ್ನು ನಡೆಸಲಾಯಿತು.

ಹೀಗೆ ಸಾಹಿತ್ಯ ಸಂಗ್ರಹ, ಸಂಪಾದನೆ, ಸಂಗೀತ ಸಂಯೋಜನೆ, ಧ್ವನಿಮುದ್ರಣ, ಬಹುಮಾಧ್ಯಮಕ್ಕೆ ಅಳವಡಿಸುವ ತಾಂತ್ರಿಕ ಕುಶಲತೆಯ ನಿರಂತರ ಕಾರ್ಯಾನುಷ್ಠಾನಕ್ಕೆ ಸಂಪಾದಕ ಮಂಡಳಿ ಸದಸ್ಯರು, ಸಂಪುಟ ಸಂಪಾದಕರು, ಇಲಾಖಾ ಅಧಿಕಾರಿಗಳು, ತಂತ್ರಜ್ಞರು, ಕೋರ್ ಸಮಿತಿ ಸದಸ್ಯರು, ಸಂಗೀತ ನಿರ್ದೇಶಕರು, ಗಾಯಕರು – ಈ ಎಲ್ಲರ ಪರಿಶ್ರಮ ಅಗಾಧವಾಗಿ ದೊರಕಿದೆ. ಈ ಶ್ರಮದ ಫಲವಾಗಿ ಬಹುಮಾಧ್ಯಮದಲ್ಲಿ ಸಮಗ್ರ ದಾಸ ಸಾಹಿತ್ಯ ಯೋಜನೆಯ ಬೃಹತ್ ಕಾರ್ಯ ಸಾಕಾರಗೊಂಡಿದೆ.

ಈ ವಿಪುಲ ಸಾಹಿತ್ಯವನ್ನು ಕನ್ನಡ ಅಕ್ಷರಜ್ಞಾನಿಗಳು ಪುಸ್ತಕ ರೂಪದಲ್ಲಿಯೂ, ಬಹುಗಾತ್ರದ ಸಾಹಿತ್ಯವನ್ನು ಕೈ ಅಳತೆಯ ಸಿಡಿ ರೂಪದಲ್ಲಿಯೂ ಈಗ ಪಡೆಯಬಹುದಾಗಿದೆ. ಅಲ್ಲದೆ, ಅಂತರ್ಜಾಲದ ಮೂಲಕ ವಿಶ್ವದ ಯಾವುದೇ ಮೂಲೆಯಲ್ಲಿರುವ ಆಸಕ್ತ ಜನತೆ ಕುಳಿತಲ್ಲಿಯೇ ಆರಾಮವಾಗಿ ವೀಕ್ಷಿಸುವ, ಕೇಳುವ ಹಾಗೂ ಕನ್ನಡ ಅಕ್ಷರ ಜ್ಞಾನವಿರದ ಭಾಷಿಕರು ಸಹಿತ ಸಂಗೀತವನ್ನು ಕೇಳಿ ಆಸ್ವಾದಿಸುವ ಅವಕಾಶವನ್ನು ಏಕಕಾಲದಲ್ಲಿ ಕಲ್ಪಿಸಲಾಗಿದೆ. ಪ್ರಕಾಶನದ ಇತಿಹಾಸದಲ್ಲಿಯೇ ದಾಖಲನೀಯವಾದ ಈ ಕಾರ್ಯ ಮುಂದೆ ಸರ್ಕಾರಿ ಸಂಸ್ಥೆಗಳಿಗಾಗಲಿ ಖಾಸಗಿ ಸಂಸ್ಥೆಗಳಿಗಾಗಲಿ ಮಾದರಿಯಾಗಬಹುದೆಂದು ನಂಬಲಾಗಿದೆ.

ನಮ್ಮ ಸಂಸ್ಕೃತಿಯನ್ನು ಬಿತ್ತರಿಸಲು ನಾಲ್ಕು ಗೋಡೆಗಳೊಳಗಿನ ರಂಗ ಮಂದಿರಗಳು, ವೇದಿಕೆಗಳು ಅಗತ್ಯವಿದೆ ದಿಟ. ಆದರೆ ಭವಿತವ್ಯದಲ್ಲಿ ವಿಶ್ವದ ಜನರನ್ನು ತಲಪಲು ಮತ್ತು ಮುಖ್ಯವಾಗಿ ಯುವಜನಾಂಗಕ್ಕೆ ನಮ್ಮ ಸಾಂಸ್ಕೃತಿಕ ಕ್ಷಿತಿಜದ ವಿಸ್ತಾರವನ್ನು ಪರಿಚಯಿಸಲು ಸೂಕ್ಷ್ಮ ಸಂವೇದನಾಶೀಲವಾದ ಸಾಹಿತ್ಯವನ್ನು ಬಹುಮಾಧ್ಯಮದಲ್ಲಿ ಅಳವಡಿಸುವುದು ಅತ್ಯಾವಶ್ಯಕ. ಈ ನಿಟ್ಟಿನಲ್ಲಿ ಇದೊಂದು ವಿನೂತನ ಪ್ರಯೋಗ ; ಈ ಪ್ರಯೋಗದ ಫಲ ಎಲ್ಲರಿಗೂ ಲಭ್ಯವಾಗಲೆಂಬುದು ನಮ್ಮ ಆಶಯ.

ಸಿ. ಎಸ್. ಕೇದಾರ್
ಸರ್ಕಾರದ ಕಾರ್ಯದರ್ಶಿ

# ಪ್ರಕಾಶಕರ ಮಾತು

ಕರ್ನಾಟಕದ ಧಾರ್ಮಿಕ, ಸಾಂಸ್ಕೃತಿಕ ಇತಿಹಾಸದಲ್ಲಿ ಹರಿದಾಸರ ಸ್ಥಾನ ವಿಶಿಷ್ಟವಾದದ್ದು. ಸಾವಿರಾರು ವರ್ಷಗಳಿಂದ ಭಾರತದಲ್ಲಿ ಅವಿರತವಾಗಿ ಹರಿದುಬಂದ ಜೀವನಮೌಲ್ಯಗಳನ್ನು ಜನಸಾಮಾನ್ಯರ ಆಡುಭಾಷೆಯಲ್ಲಿ ಮುಟ್ಟಿಸಿ, ಲೌಕಿಕ ವಿಡಂಬನೆಯ ಮೂಲಕ ಅವರ ಮಾನಸಿಕ ವಿಕಾಸವನ್ನು ಯಶಸ್ವಿಯಾಗಿ ಸಾಧಿಸಿದವರು ಹರಿದಾಸರು. ಪಾಂಡಿತ್ಯ, ಲೋಕಾನುಭವಗಳ ಹಿನ್ನೆಲೆಯಿಂದಾಗಿ, ಆಡುಭಾಷೆಯ ಸೊಗಡಿನಿಂದಾಗಿ ಇವರು ಹಾಡಿದ್ದೆಲ್ಲ ಸಾಹಿತ್ಯವಾಯಿತು, ಕಾವ್ಯವಾಯಿತು, ಕೇಳುಗರನ್ನು ಸೆರೆಹಿಡಿಯಿತು. ಗೇಯಗುಣವುಳ್ಳ, ನೃತ್ಯಕ್ಕೆ ಅಳವಡುವ, ಛಂದೋಬದ್ಧವಾದ, ಜನತೆಯ ಮಧ್ಯದಲ್ಲಿಯೇ ಸಂದರ್ಭಾನುಸಾರ ಹುಟ್ಟಿದ ಹರಿದಾಸ ಸಾಹಿತ್ಯ ವೈಶಿಷ್ಟ್ಯಪೂರ್ಣವೆನಿಸಿತು. ಕನ್ನಡ ವಾಙ್ಮಯದಲ್ಲಿ ದಾಸಸಾಹಿತ್ಯ ಒಂದು ವಿಶೇಷ ಸ್ಥಾನ ಪಡೆಯಿತು. ಹೀಗೆ ಸಾಹಿತ್ಯ, ಸಂಗೀತ ಮತ್ತು ಸಾಮಾಜಿಕ ಕ್ಷೇತ್ರಕ್ಕೆ ದಾಸಸಾಹಿತ್ಯದ ಕೊಡುಗೆ ಗಣನೀಯವಾದುದು.

ಸುಮಾರು ನೂರಮುವ್ವತ್ತೊಂಬತ್ತು ಜನ ದಾಸರು ಆಗಿಹೋಗಿದ್ದು, ಅವರ ಕೀರ್ತನೆಗಳ ಸಂಖ್ಯೆ ಸುಮಾರು ಹದಿನಾರು ಸಾವಿರಕ್ಕೂ ಅಧಿಕ. ಈವರೆಗೆ ಕೆಲವು ದಾಸರ ಕೀರ್ತನೆಗಳು ಬಿಡಿಬಿಡಿಯಾಗಿ ಪ್ರಕಟವಾಗಿವೆಯಾದರೂ, ಇನ್ನೂ ಅನೇಕ ದಾಸವರೇಣ್ಯರ ಕೀರ್ತನೆಗಳು ಹಸ್ತಪ್ರತಿ ರೂಪದಲ್ಲಿಯೇ ಉಳಿದುಕೊಂಡಿವೆ. ಅವುಗಳನ್ನು ಸಂಗ್ರಹಿಸಿ, ಸಂಪಾದಿಸಿ, ಪ್ರಕಟಿಸಿ, ಸಮಗ್ರ ದಾಸಸಾಹಿತ್ಯವು ಕನ್ನಡಿಗರಿಗೆ ಒಂದೆಡೆ ಲಭ್ಯವಾಗುವಂತೆ ಮಾಡುವ ಉದ್ದೇಶದಿಂದ ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯವು ಸಮಗ್ರ ದಾಸಸಾಹಿತ್ಯ ಪ್ರಕಟನೆಯ ಬೃಹತ್ ಯೋಜನೆಯನ್ನು ಹಾಕಿಕೊಂಡಿದೆ. ಈ ಉದ್ದೇಶಕ್ಕಾಗಿ ಕಾರ್ಯನಿರ್ವಾಹಕ ಸಂಪಾದಕರಾದ ಡಾ. ಶ್ರೀನಿವಾಸ ಹಾವನೂರ, ಡಾ. ಟಿ. ಎನ್. ನಾಗರತ್ನ, ಪ್ರೊ. ವಸಂತ ಕುಷ್ಟಗಿ, ಡಾ. ಎಂ. ಎಂ. ಕಲಬುರ್ಗಿ, ಸದಸ್ಯರಾದ ಡಾ. ಬಸವರಾಜ ಸಬರದ, ಪ್ರೊ. ಸುಧಾಕರ, ಡಾ. ಕೃಷ್ಣಕೊಲ್ಹಾರಕುಲಕರ್ಣಿ, ದಿವಂಗತ ಡಾ. ಮಂದಾಕಿನಿ, ಹಾಗೂ ದಿವಂಗತ ಪ್ರೊ. ಎಂ. ರಾಜಗೋಪಾಲಾಚಾರ್ಯ ಅವರನ್ನೊಳಗೊಂಡಂತೆ ಸಂಪಾದಕ ಸಮಿತಿಯನ್ನು ರಚಿಸಲಾಯಿತು. ಇಲಾಖಾ ನಿರ್ದೇಶಕರು ಸಮಿತಿಯ ಸದಸ್ಯ-ಕಾರ್ಯದರ್ಶಿಗಳಾಗಿರುತ್ತಾರೆ. ಇದರಲ್ಲಿ ನಾಡಿನ ಅನೇಕ ವಿದ್ವಾಂಸರ ನೆರವನ್ನು ಬಳಸಿಕೊಳ್ಳಲಾಗುತ್ತಿದೆ.

ಈ ಯೋಜನೆಯನ್ವಯ 'ಸಮಗ್ರ'ವಾಗಿ ದಾಸರ ಕೀರ್ತನೆಗಳನ್ನು ಸಂಗ್ರಹಿಸಿ ಪ್ರಕಟಿಸುವುದಿದ್ದರೂ, ಕೆಲವು ಹರಿದಾಸರ ರಚನೆಗಳು ಬಿಟ್ಟು ಹೋಗಿರುವ ಸಾಧ್ಯತೆ ಇರುತ್ತದೆ. ಅಂಥ ಹರಿದಾಸರ ಕೀರ್ತನೆಗಳು ದೊರೆತಲ್ಲಿ ಮುಂದೆ ಪರಿಷ್ಕರಣ ಸಂದರ್ಭದಲ್ಲಿ ಪ್ರಕಟಿಸಲು ಕ್ರಮಕೈಗೊಳ್ಳಲಾಗುವುದು.

ಸಮಗ್ರ ದಾಸಸಾಹಿತ್ಯ ಯೋಜನೆಯಡಿ ಪ್ರಕಟವಾಗುತ್ತಿರುವ ಆಯಾ ಸಂಪುಟಗಳ ಸಂಪಾದಕರಿಗೆ ಹಾಗೂ ಈ ಕಾರ್ಯದಲ್ಲಿ ನಮ್ಮೊಡನೆ ಸಹಕರಿಸಿದ ಸಂಪಾದಕ ಮಂಡಳಿಯವರಿಗೆ ಹಾಗೂ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಹಿಂದಿನ ನಿರ್ದೇಶಕರಾದ ಶ್ರೀ ಕೆ.ಸಿ. ರಾಮಮೂರ್ತಿ, ಶ್ರೀ ಸಿ. ಸೋಮಶೇಖರ ಅವರಿಗೆ, ಜಂಟಿ ನಿರ್ದೇಶಕರಾದ ಶ್ರೀ ಕಾ.ತ. ಚಿಕ್ಕಣ್ಣ ಅವರಿಗೆ, ಸಹಾಯಕ ನಿರ್ದೇಶಕರಾದ ಶ್ರೀಮತಿ ವೈ.ಎಸ್. ವಿಜಯಲಕ್ಷ್ಮಿ ಹಾಗೂ ಡಾ. ಮಂಜುಳ ಅವರಿಗೆ ಕೃತಜ್ಞತೆಗಳು.

ಹರಿದಾಸರ ಕೀರ್ತನೆಗಳನ್ನು ಆಯ್ದು ಸಂಗೀತಕ್ಕೆ ಆಯ್ಕೆ ಮಾಡಲು ನೆರವಾದ ಶ್ರೀ ವಿನಾಯಕ ತೊರವಿ, ಶ್ರೀ ಮೈಸೂರು ಸುಬ್ರಮಣ್ಯಂ, ಶ್ರೀ ಆರ್. ಕೆ. ಪದ್ಮನಾಭ, ಶ್ರೀ ಬಾನಂದೂರು ಕೆಂಪಯ್ಯ ಹಾಗು ಶ್ರೀಮತಿ ಮಾಲತಿ ಶರ್ಮರವರಿಗೆ, ಸಂಗೀತ ನಿರ್ದೇಶಕರಿಗೆ ಹಾಗೂ ಗಾಯಕರಿಗೆ ಕೃತಜ್ಞತೆಗಳು.

ಸಂಪುಟಗಳನ್ನು ಮುದ್ರಣಕ್ಕೆ ಅನುಗೊಳಿಸುವ ಕಾರ್ಯ ನಿರ್ವಹಿಸಿದ ಪ್ರೊ. ಜಿ. ಅಶ್ವತ್ಥನಾರಾಯಣ, ಡಾ. ಅನಂತ ಪದ್ಮನಾಭರಾವ್ ಮತ್ತು ಪ್ರೊ. ನಾ. ಗೀತಾಚಾರ್ಯ ಇವರಿಗೂ ಸಹ ಕೃತಜ್ಞತೆಗಳು.

ಈ ಸಮಗ್ರ ದಾಸಸಾಹಿತ್ಯ ಸಂಪುಟಗಳ ಮುದ್ರಣ ಕಾರ್ಯವನ್ನು ನಿರ್ವಹಿಸಿದ ಎಂ.ಎಸ್.ಐ.ಎಲ್. ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರಾದ ಶ್ರೀ ಅಶೋಕ್ ವಿ. ಡೇವಿಡ್ ಹಾಗೂ ವಿಶೇಷಾಧಿಕಾರಿಗಳಾದ ಶ್ರೀ ಎಂ. ರವಿಶಂಕರ್ ಅವರಿಗೆ ನನ್ನ ಕೃತಜ್ಞತೆಗಳು. ಸಮಗ್ರ ದಾಸಸಾಹಿತ್ಯವನ್ನು ಪ್ರಕಟಿಸುವುದು ಹರಿದಾಸರಿಗೂ ಕನ್ನಡ ಜನತೆಗೂ ನಾವು ಸಲ್ಲಿಸಬೇಕಾದ ಸೇವೆಯೆಂದು ಭಾವಿಸಿದ್ದೇನೆ. ಪಂಡಿತ ಪಾಮರರನ್ನು ಏಕ ಕಾಲಕ್ಕೆ ಆಕರ್ಷಿಸಬಲ್ಲ ವಿಶಿಷ್ಟ ಸಾಮರ್ಥ್ಯ ದಾಸಸಾಹಿತ್ಯದ್ದು ಎಂದರೆ ತಪ್ಪಾಗಲಾರದು. ಕನ್ನಡ ಜನತೆಯು ಈ ಪ್ರಕಟನೆಯ ಸದುಪಯೋಗ ಪಡೆದುಕೊಂಡೀತು ಎಂದು ಆಶಿಸಿದ್ದೇನೆ.

ವೈ. ಕೆ. ಮುದ್ದುಕೃಷ್ಣ
ನಿರ್ದೇಶಕರು

# ಸಂಪಾದಕ ಮಂಡಳಿಯ ನುಡಿ

ಕನ್ನಡ ಸಾಹಿತ್ಯದ ತವನಿಧಿಗಳಲ್ಲಿ ದಾಸಸಾಹಿತ್ಯವೂ ಒಂದು. ಓದಲಾರದ ಕನ್ನಡ ಜನಕ್ಕೆ ಪಂಪನಂತಹ ಪ್ರೌಢಕವಿಗಳು ಗೊತ್ತಿರಲಿ ಬಿಡಲಿ, ದಾಸರ ಹಾಡುಗಳು ಗೊತ್ತಿಲ್ಲದವರು ಮಾತ್ರ ಅಪರೂಪ. ಜನರ ಮೇಲೆ ನಿರಂತರ ಪ್ರಭಾವವನ್ನು ಬೀರುವ ಜನಸಮ್ಮುಖತೆ ದಾಸಸಾಹಿತ್ಯದ ಪ್ರಮುಖ ಲಕ್ಷಣಗಳಲ್ಲಿ ಒಂದು. ಇಂತಹ ದಾಸರ ಹಾಡುಗಳು ಜ್ಞಾನಸಂಪದ ಹಾಗೂ ಭಕ್ತಿಸಂಪದಗಳ ಸಾರ್ವತ್ರಿಕ ಹಬ್ಬುಗೆಗೆ ಸಾಧನವಾಗಿ ಪರಿಣಮಿಸಿವೆ.

ಕನ್ನಡ ನಾಡಿನಾದ್ಯಂತ ಎಲ್ಲ ಸ್ತರಗಳಲ್ಲಿ ವರ್ಗ–ವರ್ಣಗಳ ಭೇದವಿಲ್ಲದೆ, ಜನರ ಬಾಯಲ್ಲಿ ಉಳಿದುಕೊಂಡು ಬಂದ ಈ ಸಾಹಿತ್ಯವನ್ನು ಮೊಟ್ಟಮೊದಲಿಗೆ ಪ್ರಕಟಿಸಿದ ಶ್ರೇಯಸ್ಸು ಬಾಸೆಲ್ ಮಿಶನ್ನಿನ ರೆ. ಹರ್ಮನ್ ಮೊಗ್ಲಿಂಗ್‌ರಿಗೆ ಸೇರುತ್ತದೆ. ಇವರು ತಮ್ಮ ಇಲ್ಲಿಯ ವಾಸ್ತವ್ಯದಲ್ಲಿ (೧೮೩೬ರಿಂದ), ನಾಲ್ಕುನೂರಕ್ಕೂ ಮಿಕ್ಕಿದ ದಾಸರ ಪದಗಳನ್ನು ಸಂಗ್ರಹಿಸಿದ್ದರು. ಅವುಗಳಲ್ಲಿಯ ಒಂದು ನೂರು ಪದಗಳ ಸಂಗ್ರಹವನ್ನು 'ದಾಸರ ಪದಗಳು' ಎಂಬ ಹೆಸರಿನಿಂದ ಕ್ರಿ. ಶ. ೧೮೫೦ರಲ್ಲಿ, ಮತ್ತೆ ಕ್ರಿ.ಶ. ೧೮೫೨ರಲ್ಲಿ ೧೭೪ ಪದಗಳುಳ್ಳ ಸಂಕಲನವನ್ನು ಮಂಗಳೂರಿನಲ್ಲಿ ಕಲ್ಲಚ್ಚಿನಲ್ಲಿ ಛಾಪಿಸಿ ಪ್ರಕಟಿಸಿದರು. ಈ ವಿಷಯವನ್ನು ೧೮೭೩ರಲ್ಲಿ ಪ್ರಕಟವಾದ ಇಂಡಿಯನ್ ಎಂಟಿಕ್ವೆರಿಯ 'On the Karnataka Vaishnava Dasas' – ಎಂಬ ತಮ್ಮ ಲೇಖನದಲ್ಲಿ ರೆ. ಕಿಟೆಲ್ಲರು ಕಾಣಿಸಿದ್ದಾರೆ. ಇದರಿಂದ ಕಿಟೆಲ್‌ರಂಥವರು ಕೂಡ ದಾಸರ ಪದಗಳ ಮಹತ್ವವನ್ನು ಮತ್ತು ಜನಪ್ರಿಯತೆಯನ್ನು ಗುರುತಿಸಿದ್ದರು ಎಂಬುದು ಗೊತ್ತಾಗುತ್ತದೆ. ಪ್ರಾಸಂಗಿಕವಾಗಿ ಇದುವೆ ದಾಸಸಾಹಿತ್ಯದ ಕುರಿತಾದ ಮೊದಲ ಲೇಖನವೂ ಆಗಿದೆ.

ಅನಂತರದ ದಿನಗಳಲ್ಲಿ ಈ ಕ್ಷೇತ್ರದಲ್ಲಿ ಹಲವಾರು ಜನರು ಕೆಲಸವನ್ನು ಮುಂದುವರಿಸಿದರು. ರೆ. ಮೊಗ್ಲಿಂಗರ 'ದಾಸರ ಪದಗಳು' ಇದರ ದ್ವಿತೀಯ ಆವೃತ್ತಿಯನ್ನು ೧೮೭೧ರಲ್ಲಿ ಜಾನ್ ಗ್ಯಾರೆಟರ ಸೂಚನೆಯ ಮೇರೆಗೆ ಹೊಳಕಲ್ಲು ನರಸಿಂಹಯ್ಯನವರು ಬೆಂಗಳೂರಿನಿಂದ ಪ್ರಕಟಿಸಿದರು. ೧೮೭೩ರಲ್ಲಿ ಹಿಂದೂ ಭಾಷಾ ಸಂಜೀವಿನೀ ಮುದ್ರಣ ಶಾಲೆಯಲ್ಲಿ 'ಹರಿಭಜನೆ, ಕೀರ್ತನೆ' ಎಂಬ ಸಂಗ್ರಹ ಪ್ರಕಟವಾಯಿತು. ೧೮೯೦ನೆ ದಶಕದಲ್ಲಿ ಬೆಳಗಾವಿಯ ಆಬಾಜಿ ರಾಮಚಂದ್ರ ಸಾವಂತ ಇವರು ದೇವನಾಗರಿ ಲಿಪಿಯಲ್ಲಿ "ದಾಸರ ಪದಗಳ ಸಂಗ್ರಹವು" ಎಂಬುದಾಗಿ ಎರಡು ಭಾಗಗಳಲ್ಲಿ ಪ್ರಕಟಿಸಿದರು. ಆ ದಶಕದಲ್ಲಿಯೇ ಮಡಕಶಿರಾದ ಬಾಲಕೃಷ್ಣರಾಯರು ೧೮೯೪ರಲ್ಲಿ 'ಪುರಂದರ ದಾಸರು ಮೊದಲಾದ ಅಪರೋಕ್ಷ ಜ್ಞಾನಿಗಳ ಪದಗಳು' ಎಂಬ ಪುಸ್ತಕವನ್ನು ತೆಲುಗು ಲಿಪಿಯಲ್ಲಿ ಮುದ್ರಿಸಿದ್ದು ಗಮನಾರ್ಹವಾಗಿದೆ. ಮತ್ತೆ ೧೯೦೮ರಲ್ಲಿ ಅವರೇ ಇನ್ನೊಂದು ಸಂಕಲನವನ್ನೂ ಪ್ರಕಟಿಸಿದ್ದಾರೆ.

ಹೀಗೆ ೧೮೫೦ರಷ್ಟು ಹಿಂದೆಯೇ ಪ್ರಾರಂಭವಾದ ದಾಸರ ಪದಗಳ ಸಂಗ್ರಹ ಹಾಗೂ ಪ್ರಕಟಣೆಯ ಕಾರ್ಯಕ್ಕೆ ಒಂದು ವ್ಯವಸ್ಥಿತ ರೂಪವನ್ನು ಕೊಟ್ಟು, ನಾಡಿನಾದ್ಯಂತ ಹರಿದು ಹಂಚಿಹೋದ, ಜನರ ಬಾಯಲ್ಲಿ ಉಳಿದುಕೊಂಡು ಬಂದ ವಿವಿಧ ದಾಸರ ಪದಗಳನ್ನು ಸಂಗ್ರಹಿಸಿ ಪ್ರಕಟಿಸಲು ಪ್ರಾರಂಭಿಸಿದವರು ಉಡುಪಿಯ ಪಾವಂಜೆ ಗುರುರಾಯರು. ಅವರು ೧೯೧೪ರಲ್ಲಿ ಪ್ರಕಟಿಸಿದ ಮೊದಲ ಸಂಕಲನದ ಹೆಸರು 'ಉದಯರಾಗವು' ಎಂಬುದು. ಅನಂತರದ ದಿನಗಳಲ್ಲಿ ಪುರಂದರದಾಸರ ಕೀರ್ತನೆಗಳನ್ನು ಐದು ಸಂಪುಟಗಳಲ್ಲಿ ಮತ್ತು ಉಳಿದ ದಾಸರ ಕೃತಿಗಳನ್ನು ಬಿಡಿಬಿಡಿಯಾಗಿ ಪ್ರಕಟಿಸಿದರು. ಹೀಗೆ ನಾಡಿನ ದಕ್ಷಿಣದ ಅಂಚಿನ ಉಡುಪಿಯಲ್ಲಿ ಪ್ರಾರಂಭವಾದ ಕೆಲಸವನ್ನು ಉತ್ತರದ ಅಂಚಿನ ಲಿಂಗಸುಗೂರಿನಲ್ಲಿ ಗೊರಾಬಾಳ ಹಣಮಂತರಾಯರು 'ವರದೇಂದ್ರ ಸಾಹಿತ್ಯ ಮಾಲೆ'ಯನ್ನು ಪ್ರಾರಂಭಿಸಿ ತಮ್ಮ ಇಡೀ ಜೀವನವನ್ನೇ ಹರಿದಾಸ ಸಾಹಿತ್ಯದ ಸಂಗ್ರಹ ಮತ್ತು ಪ್ರಕಟಣೆಗೆ ಮೀಸಲಾಗಿರಿಸಿದರು. ಇತ್ತ ಮೈಸೂರು ಭಾಗದಲ್ಲಿ ಸುಪ್ರಸಿದ್ಧ ದಾಸರ ಹಾಡುಗಳನ್ನು ತಕ್ಕಮಟ್ಟಿಗೆ ಶಾಸ್ತ್ರಶುದ್ಧವಾಗಿ ಪ್ರಕಟಿಸಲು ಸುಬೋಧ ರಾಮರಾಯರು ಮುಂದಾದರು. ಇದೇ ಬಗೆಯ ಕೆಲಸವನ್ನು ಧಾರವಾಡ ಪ್ರದೇಶದಲ್ಲಿ ನಾರಾಯಣರಾವ ಕಲಮದಾನಿ, ಹುಚ್ಚರಾವ ಬೆಂಗೇರಿ

ಹಾಗೂ ಬೆಟಗೇರಿ ಕೃಷ್ಣಶರ್ಮರು ಮಾಡಿದರು. ಇದರೊಂದಿಗೆ, ಭಜನೆಯ ದೃಷ್ಟಿಯಿಂದ ಅನುಕೂಲವಾಗುವಂತೆ ನಾಡಿನ ವಿವಿಧ ಭಾಗಗಳಲ್ಲಿ ದಾಸಸಾಹಿತ್ಯಾಸಕ್ತರು ತಮತಮಗೆ ಬೇಕಾದ ಪದಗಳ ಸಂಗ್ರಹವನ್ನು ಪ್ರಕಟಿಸತೊಡಗಿದರು. ಇದರಿಂದಾಗಿ ನಾಡಿನ ಬಹುತೇಕ ಭಾಗಗಳಲ್ಲಿ ಬೇರೆ ಬೇರೆ ದಾಸರು ಇದ್ದುದು ಮತ್ತು ಅವರು ಹಾಡುಗಳನ್ನು ಬರೆದಿದ್ದಾರೆ ಎಂಬುದು ಗಮನಕ್ಕೆ ಬಂದಿತು. ಅದು 'ದಾಸ-ಪೀಳಿಗೆ' ಯನ್ನು ಗುರುತಿಸಲು ಸಹಾಯವಾಯಿತು.

ಶ್ರೀಪಾದರಾಜರಿಂದ ಪ್ರಾರಂಭವಾದ ಕೀರ್ತನೆಗಳ ರಚನೆಯ ಸಂಪ್ರದಾಯವು ಈ ಐದುನೂರು ವರ್ಷಗಳಲ್ಲಿ ಸುಮಾರು ಮುನ್ನೂರು ಜನ ದಾಸರು ಹುಟ್ಟಿ ಮೂವತ್ತು ಸಾವಿರಕ್ಕೂ ಮಿಕ್ಕ ಕೀರ್ತನೆಗಳನ್ನು ರಚಿಸಿದ್ದಾರೆಂದರೆ ಅವುಗಳ ಮಹತ್ವ ಗೊತ್ತಾಗದೇ ಇರದು.

ಇಡಿಯಾಗಿ-ಬಿಡಿಬಿಡಿಯಾಗಿ ವ್ಯಕ್ತಿಗಳಿಂದ, ಸಂಘ ಸಂಸ್ಥೆಗಳಿಂದ ದಾಸರ ಪದಗಳು ಪ್ರಕಟವಾಗುತ್ತ ಬರುತ್ತಿರುವಾಗಲೇ ಪುರಂದರ ಕನಕದಾಸರ ಚತುಃಶತಮಾನೋತ್ಸವ ಸಂದರ್ಭಗಳಲ್ಲಿ ಅವರ ಸಮಗ್ರ ಕೃತಿಗಳು ಸರ್ಕಾರದಿಂದ ಹಾಗೂ ವಿವಿಧ ಸಂಘ ಸಂಸ್ಥೆಗಳಿಂದ ಪ್ರಕಟವಾದವು. ಆದರೆ ಸಮಗ್ರ ದಾಸಸಾಹಿತ್ಯದ ಪ್ರಕಟಣೆ ಈವರೆಗೆ ಆಗಲೇ ಇಲ್ಲವೆಂದು ಹೇಳಬಹುದು. ಇಂಥದೊಂದು ಪ್ರಯತ್ನವನ್ನು ಮೂರು ದಶಕಗಳ ಹಿಂದೆ ಮೈಸೂರು ವಿಶ್ವವಿದ್ಯಾನಿಲಯವು ಕೈಗೊಂಡಿತು. ವೈಜ್ಞಾನಿಕ ರೀತಿಯಲ್ಲಿ ಶಾಸ್ತ್ರ ಶುದ್ಧವಾಗಿ ದಾಸಸಾಹಿತ್ಯವನ್ನು ಪ್ರಕಟಿಸುವುದರ ಅಡಿಗಲ್ಲನ್ನು ಹಾಕಿದ ಶ್ರೇಯಸ್ಸು ಆ ಮಾಲೆಯ ಸಂಪಾದಕರಾಗಿದ್ದ ಡಾ. ಜಿ. ವರದರಾಜರಾವ್ ಅವರಿಗೆ ಸಲ್ಲಬೇಕು. ಇದುವರೆಗೆ ಕೆಲವು ಸಂಪುಟಗಳು ಮಾತ್ರ ಬಂದಿವೆ. ಆದರೆ ಹಸ್ತಪ್ರತಿಗಳಲ್ಲಿ ವಿಪುಲ ದಾಸಸಾಹಿತ್ಯವನ್ನು ಸಂಗ್ರಹಿಸಲಾಗಿದೆ. ಅದೇ ರೀತಿಯಲ್ಲಿ ಲಿಂಗಸುಗೂರಿನಲ್ಲಿ, ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಹಾಗೂ ತಿರುಪತಿಯ ದಾಸಸಾಹಿತ್ಯ ಪ್ರೊಜೆಕ್ಟದಲ್ಲಿ ಕೂಡ ವಿಪುಲ ಹಸ್ತಪ್ರತಿಗಳ ಸಂಗ್ರಹವಿದೆ. ಇವರೆಲ್ಲರ ಸಹಕಾರದಿಂದ ಈಗ ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯವನ್ನು ಒಂದೆಡೆ ಸಂಗ್ರಹಿಸಿ ಪ್ರಕಟಿಸುವ ಸಾಹಸದ ಕಾರ್ಯವನ್ನು ಮಾಡುತ್ತಿದೆ.

# ಸಂಪುಟ ಯೋಜನೆ

ದಾಸಸಾಹಿತ್ಯದ ಪರಿಷ್ಕರಣ ಕಾರ್ಯ ತುಂಬ ಜಟಿಲವಾದುದೆಂಬುದು ಸಂಪಾದಕ ಮಂಡಳಿಯ ಪ್ರಥಮ ಸಭೆಯಲ್ಲಿಯೇ ಅನುಭವಕ್ಕೆ ಬಂದಿತು. ಕಳೆದ ಐದು ಶತಮಾನಗಳಿಂದ ನಿರಂತರ ಹರಿದು ಬಂದ ದಾಸಸಾಹಿತ್ಯ ರಚನೆಯಲ್ಲಿಯ ದಾಸರ ಹಾಗೂ ದಾಸರ ಪದಗಳ ಸಂಖ್ಯಾಬಾಹುಳ್ಯವನ್ನು ಗಮನಿಸಿ ಅದಕ್ಕೊಂದು ಕಾಲಮಿತಿಯನ್ನು ಹಾಕಿಕೊಳ್ಳುವುದು ಅನಿವಾರ್ಯ ವಾಯಿತು. ಹಾಗೆ ದಾಸಸಾಹಿತ್ಯದ ಪ್ರಾರಂಭ ಕಾಲದಿಂದ ೧೯ನೆಯ ಶತಮಾನದ ಅಂತ್ಯದ ವರೆಗೆ ರಚಿತಗೊಂಡ ವೈದಿಕ ಪರಂಪರೆಯ ದಾಸರ ಪದಗಳನ್ನು ಸಂಗ್ರಹಿಸುವುದೆಂದು, ಅದರಲ್ಲಿ ದ್ವೈತ, ಅದ್ವೈತ, ವಿಶಿಷ್ಟಾದ್ವೈತ ಪರಂಪರೆಯ ಲಭ್ಯವಿದ್ದ ಹಾಡುಗಳನ್ನು ಸೇರಿಸಿಕೊಂಡು ೩೫ ಸಂಪುಟಗಳಲ್ಲಿ ಪ್ರಕಟಿಸುವುದೆಂದು ನಿರ್ಧರಿಸಲಾಯಿತು.

ಈ ೩೫ ಸಂಪುಟಗಳನ್ನು*, ಸಂಪಾದಕ ಮಂಡಳಿಯ ಸದಸ್ಯರಲ್ಲದೆ ನಾಡಿನ ಹಲವಾರು ವಿದ್ವಾಂಸರನ್ನು ಸಂಪಾದಿಸಿ ಕೊಡಲು ಕೇಳಿಕೊಳ್ಳಲಾಯಿತು.

ಇಂಥದೊಂದು ಬೃಹತ್ ಕಾರ್ಯವನ್ನು ಕೈಗೊಂಡಾಗ ಕೆಲವು ಮಾರ್ಗದರ್ಶಿ ಸೂತ್ರಗಳನ್ನು ಅನುಸರಿಸುವುದು ಅನಿವಾರ್ಯವಾಗುತ್ತದೆ. ಅನ್ಯ ಮತ–ಪಂಥಗಳ ಟೀಕೆಗಳು ಬಂದಿದ್ದರೆ ಅಂಥ ಹಾಡುಗಳನ್ನು ಕೈಬಿಡಬೇಕು. ಒಂದೇ ಹಾಡು ಇಬ್ಬರು ದಾಸರ ಅಂಕಿತದಲ್ಲಿ ಪ್ರಚಲಿತದಲ್ಲಿದ್ದರೆ, ಎರಡೂ ಕಡೆಗೆ ಅವುಗಳನ್ನು ಕೊಟ್ಟು ಕೆಳಗೆ 'ಈ ಕೀರ್ತನೆ . . . . ದಾಸರ ಅಂಕಿತದಲ್ಲೂ ಇದೆ' ಎಂದೂ ಸೂಚಿಸಬೇಕು. ದ್ವೈತ ಸಂಪ್ರದಾಯದ ಕೀರ್ತನೆಗಳನ್ನು ಪ್ರಕಟಿಸುವಾಗ ದೇವ–ಗುರು ತಾರತಮ್ಯವನ್ನು ಪಾಲಿಸಬೇಕು ; ಉಳಿದೆಡೆ ಗಣೇಶ ಪ್ರಾರ್ಥನೆ, ಭಗವಂತನ ನಾಮಸಂಕೀರ್ತನೆ, ಆತ್ಮನಿವೇದನೆ, ಲೋಕನೀತಿ, ತಾತ್ವಿಕ, ಕಥನಾತ್ಮಕ, ಸಂಪ್ರದಾಯ ಹಾಗೂ ವಿಶೇಷ ಹಾಡುಗಳೆಂದು ಮುಂತಾಗಿ ವಿಂಗಡಿಸಿ ಕೊಡಬೇಕು – ಎಂಬುದಾಗಿ ನಿರ್ಧರಿಸಿತು.

---

* ಇವುಗಳಲ್ಲಿ ಕೆಲವುಗಳಿಗೆ ಎರಡು ಮೂರು ಭಾಗಗಳಿವೆ.

ಪ್ರತಿಯೊಂದು ಸಂಪುಟದ ಪ್ರಾರಂಭದಲ್ಲಿ ಹಾಡುಗಳ ಪರಿವಿಡಿಯನ್ನು ಕೊಟ್ಟು ಪ್ರಸ್ತಾವನೆಯಲ್ಲಿ ಆಯಾ ದಾಸರ ಸಂಕ್ಷಿಪ್ತ ಜೀವನ ಚರಿತ್ರೆ, ಕೃತಿಗಳ ಸಮೀಕ್ಷೆ, ಶೈಲಿ ಇತ್ಯಾದಿಗಳನ್ನು ವಿವರಿಸಿ, ಗ್ರಂಥಸಂಪಾದನೆಯ ಆಕರಗಳನ್ನೂ ಕೊಡಲು ಪ್ರಯತ್ನಿಸಲಾಗಿದೆ. ಕೊನೆಯಲ್ಲಿ ಬರುವ ಅನುಬಂಧಗಳಲ್ಲಿ ಕಠಿಣ ಶಬ್ದಗಳ ಅರ್ಥ, ಟಿಪ್ಪಣಿ ಮತ್ತು ವಿಶಿಷ್ಟ ಅಂಕಿತನಾಮಗಳ ಸೂಚಿ ಹಾಗೂ ಹಾಡುಗಳ ಅಕಾರಾದಿಯನ್ನು ಕೊಡಲಾಗಿದೆ.

ಈ ಸಂಪುಟಗಳು ಜನಪ್ರಿಯ ಆವೃತ್ತಿಗಳಾಗಿರುವುದರಿಂದ ಲಭ್ಯವಿರುವ ಪಾಠಾಂತರಗಳಲ್ಲಿ ಯೋಗ್ಯವಾದುದನ್ನು ಸ್ವೀಕರಿಸಿದೆ. ಅನ್ಯ ಪಾಠಗಳನ್ನು ಅಡಿಯಲ್ಲಿ ನಮೂದಿಸಿಲ್ಲ. ಆದರೂ ಇವು ವಿದ್ವಜ್ಜನಪ್ರಿಯ ಆವೃತ್ತಿಗಳೂ ಆಗಬೇಕೆಂಬ ರೀತಿಯಲ್ಲಿ ಈ ಸಂಪುಟಗಳನ್ನು ರೂಪಿಸಲು ಪ್ರಯತ್ನಿಸಿದ್ದೇವೆ.

## ಕೃತಜ್ಞತೆಗಳು

ಕಳೆದ ನೂರೈವತ್ತು ವರ್ಷಗಳಿಂದ ಪಾಶ್ಚಾತ್ಯ ಮಿಶನರಿಗಳಿಂದ ಹಿಡಿದು ಈ ಮೊದಲು ಉಲ್ಲೇಖಿಸಿದ ನಾಡಿನ ಅನೇಕ ವಿದ್ವಜ್ಜನರು, ಸಂಘ ಸಂಸ್ಥೆಗಳು, ವಿಶ್ವವಿದ್ಯಾಲಯಗಳು ದಾಸಸಾಹಿತ್ಯ ಕುರಿತು ನಿರಂತರ ದುಡಿದು ವಿಪುಲ ಸಾಮಗ್ರಿಯನ್ನು ಪ್ರಕಟಿಸಿದ್ದಾರೆ. ಈ ಎಲ್ಲ ವ್ಯಕ್ತಿಗಳಿಗೂ ಸಂಘ ಸಂಸ್ಥೆಗಳಿಗೂ ನಮ್ಮ ಕೃತಜ್ಞತಾಪೂರ್ವಕ ವಂದನೆಗಳು ಸಲ್ಲುತ್ತವೆ.

ಈ ಯೋಜನೆ ಅಸ್ತಿತ್ವಕ್ಕೆ ಬಂದುದೂ ಒಂದು ವಿಶಿಷ್ಟ ಸಂದರ್ಭದಲ್ಲಿ ಎಂಬುದನ್ನು ಇಲ್ಲಿ ನಮೂದಿಸಬೇಕು. ಕರ್ನಾಟಕ ಸರ್ಕಾರವು ನಾಡಿನ ಖ್ಯಾತ ಸಂಶೋಧಕರಾದ ಡಾ. ಎಂ. ಎಂ. ಕಲಬುರ್ಗಿ ಅವರ ಪ್ರಧಾನ ಸಂಪಾದಕತ್ವದಲ್ಲಿ ಸಮಗ್ರ ವಚನಸಾಹಿತ್ಯವನ್ನು ಪ್ರಕಟಿಸಿತಷ್ಟೇ. ಅವರೇ 'ದಾಸಸಾಹಿತ್ಯ' ಯೋಜನೆಯನ್ನು ರೂಪಿಸಿ ಶ್ರೀ ಪೇಜಾವರ ಮಠಾಧೀಶರಾದ ಶ್ರೀ ವಿಶ್ವೇಶತೀರ್ಥರ ಮೂಲಕ ಈ ಯೋಜನೆಯತ್ತ ಸರ್ಕಾರದ ಗಮನ ಸೆಳೆದರು. ಇದನ್ನು ಅರಿತ ಅಂದಿನ ಮುಖ್ಯಮಂತ್ರಿಗಳೂ ಅನಂತರ ಭಾರತದ ಪ್ರಧಾನಮಂತ್ರಿಗಳೂ ಆಗಿದ್ದ ಸನ್ಮಾನ್ಯ ಶ್ರೀ ಹೆಚ್. ಡಿ. ದೇವೇಗೌಡರು ಮುಧೋಳದಲ್ಲಿ (೧೯೯೫) ಜರುಗಿದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಸರ್ಕಾರವು ಸಮಗ್ರ ದಾಸಸಾಹಿತ್ಯವನ್ನು ಪ್ರಕಟಿಸಲು ಒಪ್ಪಿಕೊಂಡಿದೆ ಎಂದು ಘೋಷಿಸಿದರು.

ಅದರಂತೆ ಸರ್ಕಾರವು ಒಂಬತ್ತು ಜನರ ಸಂಪಾದಕ ಮಂಡಳಿಯನ್ನು ರಚಿಸಿತು. ಅದರಲ್ಲಿ ಡಾ. ಶ್ರೀನಿವಾಸ ಹಾವನೂರ, ಡಾ. ಟಿ.ಎನ್. ನಾಗರತ್ನ ಮತ್ತು ಸಮಿತಿಯು ಪ್ರೊ. ವಸಂತ ಕುಷ್ಟಗಿ ಅವರನ್ನು ಕಾರ್ಯನಿರ್ವಾಹಕ ಸಂಪಾದಕರೆಂದು ನಿಯಮಿಸಿತು. ಜೊತೆಗೆ ಈ ಮೊದಲು ಇಂಥ ಕಾರ್ಯವನ್ನು ಯಶಸ್ವಿಯಾಗಿ ಮಾಡಿದ ಅನುಭವಿ ಡಾ. ಎಂ. ಎಂ. ಕಲಬುರ್ಗಿ, ದಾಸಸಾಹಿತ್ಯದಲ್ಲಿ ನುರಿತ ವಿದ್ವಾಂಸರುಗಳಾದ ಪ್ರೊ. ಎಂ. ರಾಜಗೋಪಾಲಾಚಾರ್ಯ, ಡಾ. ಕೃಷ್ಣ ಕೊಲ್ಹಾರ ಕುಲಕರ್ಣಿ, ಡಾ. ಮಂದಾಕಿನಿ, ಪ್ರೊ. ಸುಧಾಕರ ಮತ್ತು ಡಾ. ಬಸವರಾಜ ಸಬರದ ಅವರನ್ನು ಸಂಪಾದಕ ಮಂಡಳಿಯ ಸದಸ್ಯರನ್ನಾಗಿ ನಿಯಮಿಸಿತು. ಅವರುಗಳ ನಿರಂತರ ಪರಿಶ್ರಮದ ಫಲವೇ ಈ ಸಮಗ್ರ ದಾಸಸಾಹಿತ್ಯದ ಪ್ರಕಟಣಾ ಕಾರ್ಯ. ಈ ಪ್ರಕಟಣಾ ಕಾರ್ಯದಲ್ಲಿ ಅವರುಗಳೊಂದಿಗೆ ೩೫ ಸಂಪುಟಗಳನ್ನು ಸಿದ್ಧಪಡಿಸುವಲ್ಲಿ ಸರ್ವಶ್ರೀ ಅರಳುಮಲ್ಲಿಗೆ ಪಾರ್ಥಸಾರಥಿ, ಡಾ. ಡಿ. ಆರ್. ಪಾಂಡುರಂಗ, ಡಾ. ಅನಂತಪದ್ಮನಾಭರಾವ್, ಪ್ರೊ. ಬಿ. ಆರ್. ಕುಲಕರ್ಣಿ, ಡಾ. ಕೆ.ಜಿ. ವೆಂಕಟೇಶ್, ಪ್ರೊ. ಜಿ. ಅಶ್ವತ್ಥನಾರಾಯಣ, ಡಾ. ಕೆ. ಗೋಕುಲನಾಥ, ಡಾ. ಕೆ. ಎಂ. ಕೃಷ್ಣರಾವ್, ಶ್ರೀ ಹಣಮಂತ ತಾಸಗಾಂವಕರ್, ಪ್ರೊ. ನಾ. ಗೀತಾಚಾರ್ಯ, ಡಾ. ಸ್ವಾಮಿರಾವ್ ಕುಲಕರ್ಣಿ, ಶ್ರೀ ಹನುಮನಗೌಡ, ಶ್ರೀ ಎ. ಎನ್. ಅನಂತಸ್ವಾಮಿರಾವ್, ಶ್ರೀ ನಾರಾಯಣಾಚಾರ್ಯ ಧೂಳಖೇಡ, ಶ್ರೀ ಶಾಶ್ವತಸ್ವಾಮಿ ಮುಕ್ಕುಂದಿಮಠ, ಶ್ರೀ ಕೆ. ಎಸ್. ವೆಂಕಟೇಶ್ ಮತ್ತು ಶ್ರೀ ಎಚ್. ಎಸ್. ಶ್ರೀನಿವಾಸಮೂರ್ತಿ ಅವರುಗಳು ಹಾಗೂ ಶ್ರೀಮತಿಯರಾದ ನಳಿನಿ ವೆಂಕಟೇಶ್, ಮೀನಾರಾವ್, ಲೀಲಾವತಿ ಎಸ್. ರಾವ್, ಡಾ. ಜಯಲಕ್ಷ್ಮಿ ಮಂಗಳಮೂರ್ತಿ, ಡಾ. ಬಿ. ಆರ್. ಅಕ್ಕಮಹಾದೇವಿ, ಶೀಲಾ ದಾಸ್, ಡಾ. ರಮಾ ಕಲ್ಲೂರಕರ, ಡಾ. ಸೀತಾ ಗುಡೂರ ಕುಲಕರ್ಣಿ, ಹೆಚ್. ಎಸ್. ಪದ್ಮಾ ಮೂರ್ತಿ, ಮತ್ತು ರುಕ್ಮಿಣಿ ಗಿರಿಮಾಜಿ ಅವರುಗಳು ತುಂಬ ಶ್ರಮವಹಿಸಿ ಸಂಪುಟಗಳನ್ನು ಸಿದ್ಧಪಡಿಸಿಕೊಟ್ಟಿದ್ದಾರೆ. ಅವರುಗಳಿಗೆ ಸಂಪಾದಕ ಮಂಡಳಿಯು ಕೃತಜ್ಞತೆಗಳನ್ನು ಸಲ್ಲಿಸುತ್ತದೆ. ಈ ಮಧ್ಯೆ ಸಂಪಾದಕ ಸಮಿತಿಯು ಸದಸ್ಯರಲ್ಲೊಬ್ಬರಾದ ಪ್ರೊ. ಎಂ. ರಾಜಗೋಪಾಲಾಚಾರ್ಯರು ಮತ್ತು ಡಾ. ಮಂದಾಕಿನಿ ಹಾಗೂ ಸಂಪುಟ ಸಂಪಾದಕರಲ್ಲಿ ಒಬ್ಬರಾದ ಶ್ರೀ ಎಚ್. ಎಸ್. ಶ್ರೀನಿವಾಸಮೂರ್ತಿ, ಡಾ. ಕೆ.ಎಂ. ಕೃಷ್ಣರಾವ್ ಹಾಗೂ ಶ್ರೀ ಹನುಮನಗೌಡ ಮಾನ್ವಿ ಅವರು ನಮ್ಮನ್ನು ಅಗಲಿದ್ದು ದುಃಖದ ವಿಷಯವಾಗಿದೆ.

ಆಯಾ ಕಾಲದಲ್ಲಿ ಈ ಯೋಜನೆಗೆ ಸಹಕರಿಸಿದ ಹಾಗೂ ಈ ಯೋಜನೆಯ ಪರಿಕಲ್ಪನೆ ಯಶಸ್ವಿಯಾಗಿ ಕಾರ್ಯಾನುಷ್ಠಾನಕ್ಕೆ ಬರುವ ದಿಸೆಯಲ್ಲಿ ಸಹಕರಿಸಿದ ಈ ಹಿಂದಿನ ಸರ್ಕಾರದ ಮಾನ್ಯ ಮುಖ್ಯಮಂತ್ರಿಗಳಿಗೆ ಹಾಗೂ ವಿಶೇಷವಾಗಿ ಇಂದಿನ ಮುಖ್ಯಮಂತ್ರಿಗಳಾದ ಸನ್ಮಾನ್ಯ ಶ್ರೀ ಎಸ್. ಎಂ. ಕೃಷ್ಣ ಅವರಿಗೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಚಿವೆ ಶ್ರೀಮತಿ ರಾಣಿ ಸತೀಶ್ ಅವರಿಗೆ, ಇಲಾಖೆಯ ಹಿಂದಿನ ಕಾರ್ಯದರ್ಶಿಗಳಾದ ಶ್ರೀ ಚಂದ್ರಹಾಸ ಗುಪ್ತ ಮತ್ತು ಈಗಿನ ಕಾರ್ಯದರ್ಶಿಗಳಾದ ಶ್ರೀ ಸಿ. ಎಸ್. ಕೇದಾರ್ ಅವರಿಗೆ ನಮ್ಮ ನಮನಗಳು ಸಲ್ಲುತ್ತವೆ. ಈ ಕಾರ್ಯದಲ್ಲಿ ಈ ಯೋಜನೆಗೆ ನೆರವಾದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಹಿಂದಿನ ನಿರ್ದೇಶಕರುಗಳು ಹಾಗೂ ಈಗಿನ ನಿರ್ದೇಶಕರಾದ ಶ್ರೀ ವೈ. ಕೆ. ಮುದ್ದುಕೃಷ್ಣ, ಜಂಟಿ ನಿರ್ದೇಶಕರಾದ ಶ್ರೀ ಕಾ. ತ. ಚಿಕ್ಕಣ್ಣ, ಸಹಾಯಕ ನಿರ್ದೇಶಕರಾದ ಶ್ರೀಮತಿ ವೈ.ಎಸ್. ವಿಜಯಲಕ್ಷ್ಮಿ ಮತ್ತು ಡಾ. ಮಂಜುಳಾ ಅವರಿಗೆ ನಮ್ಮ ವಂದನೆಗಳು ಸಲ್ಲುತ್ತವೆ. ಈ ಕಾರ್ಯದಲ್ಲಿ ನೆರವಾದ ಎಂ. ಎಸ್. ಐ. ಎಲ್. ಸಂಸ್ಥೆಯ ಅಧಿಕಾರಿ ಹಾಗೂ ಸಿಬ್ಬಂದಿವರ್ಗಕ್ಕೆ, ವಿಶೇಷವಾಗಿ ಶ್ರೀ ಎಂ. ರವಿಶಂಕರ್, ವಿಶೇಷಾಧಿಕಾರಿ, ಅವರಿಗೆ ನಮ್ಮ ವಂದನೆಗಳು ಸಲ್ಲುತ್ತವೆ.

ಇದು ಒಂದು ದೊಡ್ಡ ಯೋಜನೆ. ಇದರ ಸಂಪಾದನೆಯ ಸಮಸ್ಯೆಗಳು ದೊಡ್ಡವು. ಪಾಠಾಂತರ, ರೂಪಾಂತರ, ಪ್ರಕ್ಷಿಪ್ತತೆ ಇತ್ಯಾದಿಗಳ ಗೊಂದಲಕ್ಕೆ ಗುರಿಯಾಗುತ್ತ ಬಂದ ವ್ಯಾಪಕ ಪ್ರಮಾಣದ ಈ ದಾಸಸಾಹಿತ್ಯವನ್ನು ಒಂದೆಡೆ ಸಂಗ್ರಹಿಸುವುದು, ಪುನರುಕ್ತಿಗಳನ್ನು ಗುರುತಿಸುವುದು, ಅಂಕಿತ ಪಲ್ಲಟಗಳನ್ನು ಸರಿಪಡಿಸುವುದು, ಪ್ರಕ್ಷಿಪ್ತಗಳನ್ನು ದೂರೀಕರಿಸುವುದು, ಕೊನೆಯದಾಗಿ ಕೀರ್ತನೆಗಳನ್ನು ಶುದ್ಧೀಕರಿಸುವುದು ಎಂಥವರನ್ನೂ ಧೈರ್ಯಗೆಡಿಸುವ ಕೆಲಸ. ಹೀಗಿದ್ದೂ ದಾಸಸಾಹಿತ್ಯದ ಮೇಲಿನ ಗೌರವ ಪ್ರೀತಿಗಳು ನಮ್ಮಿಂದ ಈ ಕೆಲಸ ಮಾಡಿಸಿದೆ. ನಮ್ಮ ಶಕ್ತಿಗೆ ಮೀರಿ ಉಳಿದಿರಬಹುದಾದ ದೋಷಗಳನ್ನು ಮನ್ನಿಸಬೇಕೆಂದು ಕೋರುತ್ತೇವೆ. ಈ ಮೂವತ್ತೈದು ಸಂಪುಟಗಳನ್ನು ಸಹೃದಯ ಲೋಕಕ್ಕೆ ಅರ್ಪಿಸುತ್ತೇವೆ. ಸಮಗ್ರ ದಾಸಸಾಹಿತ್ಯವು ಸುಲಭ ಬೆಲೆಯಲ್ಲಿ ಕನ್ನಡಿಗರ ಮನೆ–ಮನಗಳಲ್ಲಿ ಬೆಳಗಲೆಂದು ಹಾರೈಸುತ್ತೇವೆ.

ಸಂಪಾದಕ ಮಂಡಳಿ

# ಪರಿವಿಡಿ

# ಪ್ರಸ್ತಾವನೆ

## ಸಂತಕವಿಗಳ ಸಂಕ್ಷಿಪ್ತ ಜೀವನ ಚರಿತ್ರೆ

ಯಾಳಗಿಯ (ತಾ. ಸುರಪುರ. ಜಿ. ಗುಲ್ಬರ್ಗಾ) ಗುರು ರಾಮಲಿಂಗ ವಿರಚಿತ 'ಶ್ರೀಭೀಮಾಶಂಕರರ ಚರಿತ್ರೆ' ಇದು ಗದ್ಯರೂಪದಲ್ಲಿದ್ದು ೨೩ ಅಧ್ಯಾಯಗಳಿವೆ. ಈ ಹಸ್ತಲಿಖಿತವು ಇನ್ನೂ ಅಪ್ರಕಾಶಿತವಿದೆ. ಇದು ಸಿಂದಗಿ ಸಂಪ್ರದಾಯದ ಮೂಲ ಪುರುಷರಾದ ಮಲ್ಹಾರಿ ಈ ಸತ್ಪುರುಷರಿಂದ ಮುಂದೆ ಬರುವ ಸಂಪ್ರದಾಯದ ಮಹಾಪುರುಷರ ಜೀವನ ಚರಿತ್ರೆಯನ್ನು ಕೊಡುವದು. ಈ ಸತ್ಪುರುಷರ ಜೀವನದಲ್ಲಿ ಜರುಗಿದ ಅನೇಕ ಘಟನೆಗಳ ಸಂಗ್ರಹವು ಇದರಲ್ಲಿದೆ. ಹಸ್ತಲಿಖಿತವು ಪ್ರಾಸಾದಿಕವಿದ್ದು ಭಾವಿಕರು ನಿತ್ಯಪಾರಾಯಣ ಮಾಡುತ್ತಾರೆ. ನಡುನಡುವೆ ಕಥೆ, ಉಪಕಥೆಗಳು ಹಾಗೂ ಧಾರ್ಮಿಕ ಗ್ರಂಥಗಳಲ್ಲಿ ಸಾಮಾನ್ಯ ವಾಗಿ ಕಾಣುವ ಪವಾಡಗಳೂ ಇದರಲ್ಲಿ ಇವೆ. ಇವುಗಳ ವಾಸ್ತವಿಕ ಸತ್ಯತೆ ಎಷ್ಟು, ಕಾಲ್ಪನಿಕ ಕಥಾಭಾಗ ಎಷ್ಟು, ಇದು ಅಭ್ಯಾಸದ ವಿಷಯ. ಹಸ್ತಲಿಖಿತದ ಭಾಷೆಯು ಸುಲಭವಾದ ಕನ್ನಡದಲ್ಲಿದೆ. ಆದರೂ ಅಲ್ಲಲ್ಲಿ ಭಾಷೆಯ ದೃಷ್ಟಿ ಯಿಂದ ಹಾಗೂ ಪುಸ್ತಕದ ಮಾದರಿಗೆ ಹೊಂದುವಂತೆ, ಕೆಲವು ಮಾರ್ಪಾಡು ಗಳನ್ನು ಮಾಡಿ ಈ ಬೃಹತ್ ಹಸ್ತಲಿಖಿತವನ್ನು ಪ್ರಕಾಶಿಸುವದು ಅವಶ್ಯವಿದೆ.

ಮೇಲ್ಕಾಣಿಸಿದ ಹಸ್ತಲಿಖಿತದ ಪ್ರಕಾರ ಈ ಸಂಪ್ರದಾಯದ ಪ್ರವರ್ತಕರು ಮಲ್ಹಾರಿ ಎಂಬವರು. ವೈದುರ ನಗರ ವಾಸಿಗಳು. ಅವರ ಪತ್ನಿ ಮ್ಹಾಳಸಾಬಾಯಿ. ಶಕೆ ೭೪೩ ರ ನಂತರ ಭೀಕರ ಬರಗಾಲವು ಬೀಳಲು ಮಲ್ಹಾರ ಇವರು ವೈದುರ ನಗರವನ್ನು ಬಿಟ್ಟು ಸಪತ್ನೀಕರಾಗಿ ತೀರ್ಥಯಾತ್ರೆ ಕೈಕೊಂಡು, ಕೂಡಲ ಸಂಗಮ, ತ್ರ್ಯಂಬಕೇಶ್ವರ, ಕಾಶಿ ಇತ್ಯಾದಿ ಕ್ಷೇತ್ರಗಳನ್ನು ಸಂದರ್ಶಿಸಿ, ಕುಲದೈವತಳಾದ ಬನಶಂಕರಿಯ ಆಶೀರ್ವಾದ ಪಡೆದು ಸಿಂದಗಿಗೆ ಬಂದರು. ಇವರ ಪುತ್ರ ಲಿಂಗರಸ. ಲಿಂಗರಸರ ವಿದ್ಯಾಗುರು ಶಿವದೀಕ್ಷಿತರು. ವಿಜಾಪುರದ ಬಾದಶಹ ನಿಗೆ ಆತಿಥ್ಯ ಮಾಡಿದ್ದರಿಂದ ಸಂತುಷ್ಟನಾದ ಬಾದಶಹನು ಗ್ರಾಮದ ಎಲ್ಲ

ಅಧಿಕಾರ ಲಿಂಗರಸರಿಗೆ ಒಪ್ಪಿಸುತ್ತಾನೆ. ಕುಂತಳಾಪುರದ ರಾವಜೀರಾಯ ಇವರ ಪುತ್ರಿ ಗಂಗಾ, ಇವಳೊಡನೆ ಲಿಂಗರಸರ ವಿವಾಹವಾಗುತ್ತದೆ. ಇವರು ಮಹಾಯೋಗಿಗಳು ಹಾಗೂ ಸದೈವ ಧ್ಯಾನಸ್ಥರು. ಸಂಪ್ರದಾಯದ ಕೆಲವು ಭಕ್ತರು ತಮ್ಮ ಗೀತಗಳಲ್ಲಿ ಇವರ ಉಲ್ಲೇಖವನ್ನು ಒಳ್ಳೇ ಪೂಜ್ಯ ಭಾವನೆ ಯಿಂದ ಮಾಡಿದ್ದಾರೆ. ಲಿಂಗರಸರ ತಲೆಯಿಂದ ೧೨ನೆಯವರು ಗುರಪ್ಪಯ್ಯ ನವರು. ಇವರಿಗೆ ಗುರುನಾಥ, ಸದ್ಗುರುನಾಥ ಎಂದೂ ಕರೆಯುತ್ತಾರೆ. ಇವರೇ ಭೀಮಾಶಂಕರರ ಗುರುಗಳು. ಇವರಿಂದ ಸಂಪ್ರದಾಯದ ಐತಿಹಾಸಿಕ ಭೂಮಿಕೆಗೆ ಸಾಕಷ್ಟು ಅವಕಾಶವಿದೆ.

ಕ್ರಿ.ಶ. ೧೬೦೦ ರ ಸುಮಾರಿಗೆ ಮಹಾಶಿವಾಲಯದ (ಮಾಶಾಳ – ತಾ, ಅಫಜುಲಪುರ, ಜಿ, ಗುಲ್ಬರ್ಗಾ) ಹಾಗೂ ಭೃಂಗವಳ್ಳಿಯ (ತಾ. ಅಫಜುಲಪುರ, ಜಿ. ಗುಲ್ಬರ್ಗಾ) ಕುಲಕರ್ಣಿಯಾದ ಗುರಪ್ಪನವರು ಭೃಂಗವಳ್ಳಿಯಲ್ಲಿ ವಾಸಿಸುತ್ತಿದ್ದರು. ಒಮ್ಮೆ ಅವರು ತಮ್ಮ ಹೊಲದಲ್ಲಿ ಮಹಾ ತೇಜಃಪುಂಜರಾದ ಮಹಾತ್ಮರೊಬ್ಬರು ಧ್ಯಾನಸ್ಥರಾಗಿ ಕುಳಿತದ್ದನ್ನು ಕಂಡರು. ಈ ಯೋಗಿಗಳೆಂದರೆ ರಾಮನಾಥರು. 'ನಾನು ಕಾಶಿಯಿಂದ ಬಂದೆ. ನನ್ನ ಹೆಸರು ರಾಮನಾಥ ; ನನಗೆ ಬಸವನೆಂದು ಕರೆಯುತ್ತಾರೆ. ನಮ್ಮದು ನಾಥ ಸಂಪ್ರದಾಯ' ಎಂದು ಗುರಪ್ಪನವರಿಗೆ ಹೇಳಿದರು. ಶರಣು ಬಂದ ಗುರಪ್ಪನಿಗೆ ರಾಮನಾಥರು ಮಂತ್ರೋಪದೇಶ ಮಾಡಿದರು. ಇವರು ಮಾಡಿದ ಅನೇಕ ಪವಾಡಗಳು ಪ್ರಸಿದ್ಧವಿವೆ, ಇವರೇ ಸಂಪ್ರದಾಯದ ಹಿರಿಯ ಸತ್ಪುರುಷರು ; ಕೊಳಕೂರದಲ್ಲಿ (ತಾ. ಜೇವರಗಿ, ಜಿ. ಗುಲ್ಬರ್ಗಾ) ಅದೃಶ್ಯರಾದರು. ಇವರ ಸಮಾಧಿಯು ಕೊಳಕೂರದಲ್ಲಿ ಭೀಮಾ ನದಿಯ ದಂಡೆಯ ಮೇಲಿದೆ. ಪ್ರತಿವರ್ಷ ಉತ್ಸವವೂ ಆಗುತ್ತದೆ.

ಗುರಪ್ಪಯ್ಯ, ಭೀಮಾಶಂಕರ ಹಾಗೂ ಜಕ್ಕಪ್ಪಯ್ಯ ಇವರ ಜೀವನದ ಬಗ್ಗೆ ವಿವರಗಳು ಪ್ರಕಾಶಿತವಾಗಿವೆ. ಸಿಂದಗಿ ಸಂಪ್ರದಾಯದ 'ನಿತ್ಯ ಭಜನಮಾಲಾ' ಈ ಪುಸ್ತಿಕೆಯಲ್ಲಿ ಹಾಗೂ ಡಾ. ಕೃಷ್ಣ ಕೊಲ್ಹಾರ ಕುಲಕರ್ಣಿಯವರು ಬರೆದ 'ಸಿಂದಗಿಯ ಬಿಂದಗಿ' ಈ ಪುಸ್ತಕದಲ್ಲಿ ಈ ಪುಣ್ಯಪುರುಷರ ಉಪಲಬ್ಧವಿದ್ದ ಚರಿತ್ರಾಂಶಗಳು ಬಂದಿವೆ. ಗುರಪ್ಪಯ್ಯನವರಿಗೆ ರಾಮನಾಥರು ಕೊಟ್ಟ ಮಂತ್ರೋಪದೇಶ, ಪ್ರತಿ ವರ್ಷ ಜರುಗುವ ಆರಾಧನೆಯು ಯಾವದಾದ ರೊಂದು ವಿಶಿಷ್ಟ ಸಂಗತಿಯಿಂದ ಕೂಡಿರಬೇಕೆಂಬ ಗುರಪ್ಪಯ್ಯನವರ

ಪ್ರಾರ್ಥನೆಗೆ ರಾಮನಾಥರು 'ತಥಾಸ್ತು' ಎಂದದ್ದು (ಇದೇ ಚಮತ್ಕಾರಪೂರ್ಣ ವಾದ ಸಿಂದಗಿ ಬಿಂದಿಗೆಯ ಮಾಹಾತ್ಮ್ಯ), ಗುರಪ್ಪಯ್ಯನವರ ನಿತ್ಯದ ಧ್ಯಾನ ಅನುಷ್ಠಾನದಿಂದ ಪ್ರಭಾವಿತರಾದ ಬಳಗಾನೂರ (ತಾ. ಸಿಂದಗಿ, ಜಿ. ವಿಜಾಪುರ) ಕುಲಕರ್ಣಿ ಭೀಮಣ್ಣ ಹಾಗೂ ಸಿಂದಗಿಯ ಕುಲಕರ್ಣಿ ಸಂಕಣ್ಣ (ಶಂಕರ ಎಂದು ಇವರ ಹೆಸರು) ಇವರೀರ್ವರಿಗೆ ಗುರುಪ್ಪಯ್ಯನವರು ನೀಡಿದ ಆಶ್ವಾಸನೆ, ಈ ಎಲ್ಲ ವಿಷಯಗಳು ಮೇಲೆ ಉಲ್ಲೇಖಿಸಿದ ಎರಡೂ ಪುಸ್ತಕಗಳಲ್ಲಿವೆ. ಗುರುಪ್ಪಯ್ಯ ನವರ ಸಂಜೀವನ ಸಮಾಧಿ ಉತ್ಸವಕ್ಕೆ ಭೀಮಣ್ಣನಿಗೆ ಅನಿವಾರ್ಯ ಕಾರಣಗಳ ಮೂಲಕ ಬರುವದಾಗಲಿಲ್ಲ. ಸಂಕಣ್ಣನೂ ಕೂಡ ತಡವಾಗಿಯೇ ಅಂದರೆ ಉತ್ಸವ ಮುಗಿದ ಮೇಲೆ ಬಂದನು. ಸಂಕಣ್ಣನ ಉತ್ಕಟ ಭಕ್ತಿ ಹಾಗೂ ಪರಮಾರ್ಥದ ಬಗ್ಗೆ ಇದ್ದ ತಳಮಳ ನೋಡಿ, ಗುರಪ್ಪಯ್ಯನವರು ಗುಹಾ ಪ್ರವೇಶ ಮಾಡಿದ್ದರೂ, ಅವನನ್ನು ಗುಹೆಯ ಒಳಗೆ ಕರೆದು, 'ದುಃಖಿಸಬೇಡ. ನೀನೇ ಭೀಮ, ನೀನೇ ಶಂಕರ ; ಆದ್ದರಿಂದ ನಿನಗೆ ಭೀಮಾಶಂಕರ ಎಂದು ಹೆಸರಿಡುವೆ' ಎಂದು ಸಾಂತ್ವನ ಮಾಡಿ, ಅವನಿಗೆ ರಾಮ ಮಂತ್ರೋಪದೇಶವನ್ನು ಅನುಗ್ರಹಿಸಿದರು. ಗುರುಪ್ಪಯ್ಯನವರು ಸಂಜೀವನ ಸಮಾಧಿ ತೆಗೆದುಕೊಂಡದ್ದು ಶಾಲಿವಾಹನಶಕೆ ೧೬೦೨ ರೌದ್ರನಾಮ ಸಂವತ್ಸರ ಮಾರ್ಗಶೀರ್ಷ ವದ್ಯ ದ್ವಿತೀಯಾ, ಈ ಶುಭ ದಿವಸದಂದು (ಇಸ್ವಿ ಸನ್ ೧೬೮೦). ಭೃಂಗವಳ್ಳಿಯಲ್ಲಿ ಇವರ ಸಮಾಧಿ ಇದ್ದು ಪ್ರತಿವರ್ಷ ಉತ್ಸವವು ನಡೆಯುತ್ತದೆ. ಸಿಂದಗಿ ಸಂಪ್ರದಾಯಕ್ಕೆ ಭೃಂಗವಳ್ಳಿ ಸಂಪ್ರದಾಯವೆಂದು ಕರೆಯುತ್ತಾರೆ. ಯಾಕೆಂದರೆ ಈ ಸಂಪ್ರದಾಯ ಪ್ರಸಾರ ಮಾಡಿದ ಗುರಪ್ಪಯ್ಯನವರು ಭೃಂಗವಳ್ಳಿಯಲ್ಲಿ ವಾಸವಾಗಿದ್ದರು.

ಭೀಮಾಶಂಕರರ (೧೬೬೦-೧೭೩೧) ಆಧ್ಯಾತ್ಮಿಕ ಜೀವನ, ಅವರು ಕೈಕೊಂಡ ತೀರ್ಥಯಾತ್ರೆ, ಅವರು ಸನ್ಯಾಸಾಶ್ರಮ ಸ್ವೀಕರಿಸಿದ್ದು (ಇವರ ಚತುರ್ಥಾಶ್ರಮದ ಹೆಸರು ಶಂಕರಾನಂದ ಸರಸ್ವತಿ), ಹಂಪೆಯಲ್ಲಿ ವಿದ್ಯಾರಣ್ಯ ಪೀಠಾಧಿಪತಿಗಳಾಗಿದ್ದು, ನಾಲ್ಕು ವರ್ಷಗಳ ನಂತರ ಆ ಪೀಠ ತ್ಯಾಗಮಾಡಿ ಮರಳಿ ಸಿಂದಗಿಗೆ ಬಂದದ್ದು, ಹಾಗೂ ಅವರ ಮಹಾ ಸಮಾಧಿಯ ಉತ್ಸವ – ಈ ಎಲ್ಲ ವಿವರಣೆಗಳು ಮೇಲೆ ಕಾಣಿಸಿದ ಪುಸ್ತಕಗಳಲ್ಲಿ ದೊರೆಯುತ್ತವೆ. ಇವರು ಸಂಜೀವನ ಸಮಾಧಿ ತೆಗೆದುಕೊಂಡದ್ದು ಶಾಲಿವಾಹನಶಕೆ ೧೬೫೩ ವಿರೋಧಿ ಕೃತ ಸಂವತ್ಸರ ಆಶ್ವೀನವದ್ಯ ದ್ವಿತೀಯಾ ಬುಧವಾರ ; ಇವರ ಸಮಾಧಿಯು ಸಿಂದಗಿಯಲ್ಲಿದೆ. ಪ್ರತಿ ವರ್ಷ ಆರಾಧನಾ ಉತ್ಸವವು ಒಳ್ಳೇ ವಿಜೃಂಭಣೆಯಿಂದ

ನಡೆಯುತ್ತದೆ. ಕಾವ್ಯ ಪ್ರತಿಭೆ, ತಾತ್ತ್ವಿಕ ವಿಚಾರ, ದಿವ್ಯ ಅನುಭೂತಿ ಇವರಲ್ಲಿ ಒಡೆದು ಕಾಣುತ್ತವೆ.

ಜಕ್ಕಪ್ಪಯ್ಯನವರು (೧೬೮೫-೧೭೬೯) ಭೀಮಾಶಂಕರರ ಪುತ್ರರು. ಅದ್ವೈತ ವೇದಾಂತದಲ್ಲಿ ಪರಿಣತರು. ವೇದಾಂತದ ಗಹನ ಗಂಭೀರ ಸಿದ್ಧಾಂತಗಳನ್ನು ಸುಲಭ ಕನ್ನಡ ಕಾವ್ಯದಲ್ಲಿ ಇಳಿಸಿದ್ದಾರೆ. ಇವರು ಮಹಾತಪಸ್ವಿಗಳು, ಸಂಪ್ರದಾಯದ ಪೂಜಾ ವಿಧಾನ, ಭಜನೆ, ಆರತಿಗಳ ಕ್ರಮ ಇವೆಲ್ಲವುಗಳಿಗೆ ವಿಶಿಷ್ಟ ನಿಯಮ-ಬದ್ಧತೆ ಹಾಕಿಕೊಟ್ಟ ಶ್ರೇಯಸ್ಸು ಇವರಿಗಿದೆ. 'ಶ್ರೀ ಸದ್ಗುರು ಭೀಮಾಶಂಕರ ಮಠ ಸಿಂಧಾಪುರ (ಸಿಂದಗಿ) ನಿತ್ಯಭಜನ ಮಾಲಾಸಂಗ್ರಹ'ದ ಪ್ರಾರಂಭದಲ್ಲಿ 'ಶ್ರೀ ಪರಮ ಸದ್ಗುರು ಶ್ರೀ ಜಕ್ಕಪ್ಪಯ್ಯನಾಥ ಕೃತ ಸಂಪ್ರದಾಯ ಭಜನ ಮಾಲಾ' ಎಂದು ಹೇಳಿದೆ. ವಿರೋಧಿ ಸಂವತ್ಸರ ಫಾಲ್ಗುಣ ಶುದ್ಧ ಚತುರ್ಥಿ ಗುರುವಾರ ಪುಣ್ಯತಿಥಿಯಂದು ಭಕ್ತವೃಂದವೆಲ್ಲ ನಾಮ ಘೋಷ ಸಂಕೀರ್ತನೆ ಮಾಡುತ್ತಿರಲು ಇವರು ಸಮಾಧಿಸ್ಥರಾದರು. ಇವರ ಸಮಾಧಿಯು ಸಿಂದಗಿಯಲ್ಲಿದೆ. ಉತ್ಸವವು ಯಥಾ ಪ್ರಕಾರ ನಡೆಯುತ್ತದೆ. ಇವರ ಕಾವ್ಯ ಪ್ರತಿಭೆ, ಆಧ್ಯಾತ್ಮಿಕ ನಿರೂಪಣೆ ಅನುಪಮವಾಗಿವೆ.

ಶಿವರಾಮರ ಬಗ್ಗೆ ಬಹಳ ವಿವರಣೆಗಳು ಇನ್ನೂ ಪ್ರಕಾಶಿತವಾಗಿಲ್ಲ. ಇವರು ಭೀಮಾಶಂಕರರ ದ್ವಿತೀಯ ಚಿರಂಜೀವರು. ಸಂಸ್ಕೃತ, ಕನ್ನಡ, ಮರಾಠಿ ವಿದ್ವಾಂಸರು. ಅದ್ವೈತ ವೇದಾಂತವಂತೂ ಇವರ ಮನೆತನದ ದೊಡ್ಡ ಸಂಪತ್ತು. ಸನಾತನ ಸಂಪ್ರದಾಯದಲ್ಲಿದ್ದವರಾದರೂ ಉದಾರ ಮತವಾದಿಗಳು. ಗುರು ರಾಮಲಿಂಗ ಲಿಖಿತ ಶ್ರೀಭೀಮಾಶಂಕರರ ಚರಿತ್ರೆ ಈ ಹಸ್ತಲಿಖಿತ ಪ್ರತಿಯಲ್ಲಿ (ಪು. ೬೨೮-೬೪೬) ಕೆಳಗೆ ಬರೆದ ಘಟನೆಯ ವೃತ್ತಾಂತವಿದೆ. ಸ್ವಲ್ಪ ವಿಸ್ತ್ರತವಿದ್ದರೂ ಅದನ್ನು ಕೊಡುವದು ಅನುಚಿತವಾಗಲಿಕ್ಕಿಲ್ಲ. ಸಂಪ್ರದಾಯದ ಆದ್ಯ ಪ್ರವರ್ತಕರಾದ ಮಲ್ಹಾರಿ ಹಾಗೂ ಮ್ಹಾಳಸಾ ಇವರು ಬನಶಂಕರಿಗೆ ಹೋದಾಗ ದೇವಿಯು ಅವರಿಗೆ ಪ್ರತ್ಯಕ್ಷಳಾಗಿ ಅನ್ನುತ್ತಾಳೆ – 'ಮುಂದೆ ನಿಮ್ಮ ವಂಶದವರಿಗೆ, ನೀವು ಮಾಡಿದ ದೇಹ ದಂಡನೆ ಹಾಗೂ ತಪಶ್ಚರ್ಯೆ ಸಾಧ್ಯವಾಗದು. ಆದ್ದರಿಂದ ನಿಮ್ಮ ವಂಶದವರು ಐದು ವರ್ಷಕ್ಕೊಮ್ಮೆ ಕುಟುಂಬ ಸಹಿತ ಬಂದು ನೈವೇದ್ಯ ಆರತಿಯ ವೇಳೆಯಲ್ಲಿ ಇಲ್ಲಿಯ ಹೊಂಡದಲ್ಲಿ ಸ್ನಾನ ಮಾಡಿ, ಹೆಣ್ಣುಮಕ್ಕಳು (ಅಂದರೆ ಮುತ್ತೈದೆಯರು) ತಮ್ಮ ತಲೆಯ ಮೇಲಿನ ಕೇಶಗಳನ್ನು ತೆಗೆಸಿಕೊಂಡು ನೈವೇದ್ಯ ಆರತಿ ಮಾಡಬೇಕು.' ಇದು ಕಠೋರದ

ಆಜ್ಞೆಯೆಂದು ದಂಪತಿಗಳು ಬೇಡಿಕೊಳ್ಳಲು, 'ಮುಂದೆ ನಿಮ್ಮ ವಂಶದಲ್ಲಿ ಒಬ್ಬ ಸತ್ಪುರುಷ ಹುಟ್ಟಿ ನನ್ನೊಡನೆ ವಾದ ಮಾಡಿ ಈ ಮಂಡಿ ಒಪ್ಪಿಸುವ ವಿಧಿಯನ್ನು ನಿಲ್ಲಿಸಿ ನನ್ನಲ್ಲಿ ಐಕ್ಯನಾಗುತ್ತಾನೆ' ಎಂದು ಆಶ್ವಾಸನವನ್ನು ದೇವಿಯು ಕೊಡುತ್ತಾಳೆ. ಈ ಸತ್ಪುರುಷರೆಂದರೆ ಶಿವರಾಮರು. ಒಂದು ಸಲ ಇವರೂ ಉಳಿದ ಬಂಧು ಬಳಗದವರೊಡನೆ ಬನಶಂಕರಿಗೆ ಹೋಗಲು ಉದ್ಯುಕ್ತರಾದರು. ಆಗ ತಂದೆಯವರಾದ ಭೀಮಾಶಂಕರರು ಅಂದದ್ದು – 'ನೀನು ಹೋಗಬೇಡ ಎಂದು ನಾನು ಅನ್ನುವುದಿಲ್ಲ. ಆದರೆ ದೇವಿಯೊಡನೆ ವಾದ ಮಾಡಲು ನಿಂತರೆ ಬಹಳ ತ್ರಾಸವಾದೀತು' ಎಂದು ಎಚ್ಚರಿಸಿದರು. 'ನಾನು ವಿಹಿತ ಕಾರ್ಯದಲ್ಲಿ ಎಂದೂ ಅಡ್ಡಿ ಮಾಡಲಾರೆ. ಆದರೆ ತಪ್ಪುಕಾರ್ಯಗಳನ್ನು ಮಾಡಿದರೆ ಯಾರಿಗೂ ಕೇಳುವುದಿಲ್ಲ' ಎಂದು ಶಿವರಾಮರು ಉತ್ತರ ಕೊಟ್ಟರು. ಎಲ್ಲರೂ ಬನಶಂಕರಿಗೆ ಹೋಗಿ ದೇವಿಯ ದರ್ಶನ ತೆಗೆದುಕೊಳ್ಳುತ್ತಾರೆ. 'ನೀವೆಲ್ಲ ಮುತ್ತೈದೆಯರು ಮಂಡಿಯನ್ನು ಅರ್ಪಿಸದೆ, ಎರೆದುಕೊಂಡು ದೇವಿಯ ಸನ್ನಿಧಾನಕ್ಕೆ ಬನ್ನಿರಿ. ನಾನೇ ಸ್ವತಃ ದೇವಿಗೆ ನೈವೇದ್ಯ ಆರತಿ ಮಾಡುವೆ. ಆಕೆ ಹೇಗೆ ಸ್ವೀಕರಿಸುವದಿಲ್ಲ ನೋಡುವೆ' ಎಂದು ನುಡಿದು ದೇವಿಯ ಬಳಿಗೆ ಬಂದು ನೈವೇದ್ಯ ಆರತಿಗೆ ಸಿದ್ಧರಾದರು. ದೇವಿಯು ಪ್ರತ್ಯಕ್ಷಳಾಗಿ 'ವಂಶಪರಂಪರಾಗತ ಕಾರ್ಯ ನೀನು ನಿಲ್ಲಿಸಿರುವೆ, ನಿನ್ನ ನೈವೇದ್ಯ ಆರತಿ ಸ್ವೀಕರಿಸಲಾರೆ' ಎಂದು ನುಡಿದಳು. ವಾಗ್ವಾದ ಸುರುವಾಗುತ್ತದೆ. 'ತಾಯೀ, ನಿನ್ನ ಸ್ಥಾನಕ್ಕೆ ಬಂದು ಮುತ್ತೈದೆತನ ಪಡೆದುಕೊಂಡು ಹೋಗತಕ್ಕದ್ದು. ಅದನ್ನು ಕೊಟ್ಟು ಹೋಗುವದು ಯಾವ ಧರ್ಮ ?' ದೇವಿ ಒಪ್ಪಲಿಲ್ಲ. ಇಬ್ಬರೂ ಜಿದ್ದಿಗೆ ಬಿದ್ದರು. ದೇವಿ ಅದೃಶ್ಯಳಾದಳು. ಎಲ್ಲರೂ ತಿರುಗಿ ಹೊರಟರು. ಸೂರ್ಯಾಸ್ತವಾದದ್ದರಿಂದ ಬಾಗಲ ಕೋಟೆಯಲ್ಲಿ ಎಲ್ಲರೂ ಉಳಿದರು. ಮುಂದೆ ಒಂದು ತಾಸಿನ ನಂತರ, ಎಲ್ಲರಿಗೂ ಮಾರಿಕಾ ಉಪದ್ರವ ಸುರುವಾಗಿ, ಗಂಡಸರೆಲ್ಲ ಮರಣೋನ್ಮುಖ ರಾದರು. ಹೆಂಗಸರೆಲ್ಲ ಗಾಬರಿಯಾಗಿ, 'ದೇವಿಯ ಕ್ಷೋಭೆಯಾಗಿದೆ. ಅವಳ ಇಚ್ಛೆಯಂತೆ ನಡೆಯಪ್ಪಾ' ಎಂದು ಶಿವರಾಮರಿಗೆ ವಿನಂತಿಸಿದರು. 'ದೇವಿ ಈ ರೀತಿ ಅಂಜಿಸಿದರೆ ನಾನೇನು ಅಂಜುವುದಿಲ್ಲ. ಆಕೆಯ ಗುಡಿಯ ಬಾಗಿಲಕ್ಕೆ ಮುಳ್ಳು ಹಚ್ಚುವೆ. ಮರಣೋನ್ಮುಖರಾದವರನ್ನು ನಿಶ್ಚಿತವಾಗಿ ಬದುಕಿಸುವೆ' ಎಂದು ಧೈರ್ಯ ಹೇಳಿದರು ಮತ್ತು ಧ್ಯಾನಸ್ಥರಾದರು. ಆಗ ದೇವಿ ಪ್ರತ್ಯಕ್ಷಳಾಗಿ, 'ಇನ್ನು ಮೇಲಾಧರೂ ಮಂಡಿ ಒಪ್ಪಿಸುತ್ತೀಯೋ ಇಲ್ಲವೋ' ಎಂದು ಕೇಳಿದಳು. 'ತಾಯೀ, ಈ ಬೆದರಿಕೆಯಿಂದ ನಾನು ಅಂಜುವುದಿಲ್ಲ. ನಾನೇನೂ ಅನ್ಯಾಯ

ಮಾಡಿಲ್ಲ. ಭಕ್ತಿಯಿಂದ ನಿನ್ನ ಪೂಜೆ ಮಾಡಿದ್ದೇನೆ. ಒಂದು ಅಪದ್ಧವಾದ ಕೆಲಸ ನಿಲ್ಲಿಸಿದ್ದಕ್ಕೆ ಇಷ್ಟೇಕೆ ಕೋಪ ? ಈ ರೀತಿ ನಮ್ಮನ್ನು ಅಸಹಾಯ್ಯ ಮಾಡಿದರೆ, ನೀನು ದೇವಿ ಅಲ್ಲ ; ನಾನು ಭಕ್ತನಲ್ಲ' ಎಂದು ನಿಷ್ಠುರ ಉತ್ತರ ಕೊಟ್ಟರು. ಈ ವಾಗ್ವಾದ ಒಂದು ತಾಸಿನವರೆಗೆ ನಡೆಯಿತು. ಕೊನೆಗೆ ದೇವಿಯು ಬೇಸತ್ತು, 'ಶಿವರಾಮಾ, ಒಂದು ಜೀವವನ್ನಾದರೂ ಇದರ ಬದಲು ಕೊಡು' ಎಂದು ಅನ್ನಲು ಶಿವರಾಮರು ಅದಕ್ಕೆ ಸಂತೋಷದಿಂದ ಒಪ್ಪಿದರು. 'ಯಾರನ್ನು ತೆಗೆದುಕೊಂಡು ಹೋಗಲಿ' ಎಂದು ದೇವಿಯ ಪ್ರಶ್ನೆ. 'ಮಹಾತಾಯೀ, ಎರಡನೆಯವರನ್ನು ಕೊಟ್ಟರೆ ಏನು ಬಂತು ? ನನ್ನ ಜೀವವೇ ನಿನಗೆ ಅರ್ಪಿತವಾಗಲಿ' ಎಂದು ನುಡಿದು, ಮರಣೋನ್ಮುಖರಾದ ಎಲ್ಲರಿಗೂ ತಮ್ಮ ಕಮಂಡಲದೊಳಗಿನ ತೀರ್ಥದಿಂದ ಪ್ರೋಕ್ಷಣೆ ಮಾಡಲು, ಅವರೆಲ್ಲರೂ ಜಾಗೃತರಾಗಿ ಕುಳಿತರು. ನಂತರ ಎಲ್ಲರಿಗೂ ನಮಸ್ಕಾರ ಮಾಡಿ ಧ್ಯಾನಸ್ಥರಾಗಿ 'ದೇವಿ, ನೀನೇ ಗತಿ' ಎಂದು ಹಂಸ ಹಾರಿಸಿಬಿಟ್ಟರು.

ಹೀಗೆ ಹಸ್ತಲಿಖಿತದಲ್ಲಿ ಅವರು ಆತ್ಮಾರ್ಪಣೆ ಮಾಡಿದ ವೃತ್ತಾಂತವಿದೆ.

ಮೇಲಿನ ಕಥೆಯಲ್ಲಿಯ ಪೌರಾಣಿಕವೆನಿಸುವ ಭಾಗವನ್ನು ಬಿಟ್ಟು ಆ ಕಥೆಯ ಗರ್ಭಿತಾರ್ಥದ ಬಗ್ಗೆ ವಿಚಾರ ಮಾಡಿದರೆ, ಶಿವರಾಮರ ವಿಚಾರ ಸರಣಿ ಎಷ್ಟು ನ್ಯಾಯ ಸಮ್ಮತ, ತರ್ಕ ಸಮ್ಮತ, ಎಷ್ಟು ಸುವಿಚಾರದ್ದಿತ್ತು, ಇದು ಮನದಟ್ಟಾಗುತ್ತದೆ. ಆಯಾಕಾಲದ ಸಮಾಜದಲ್ಲಿ ಕೆಲವು ವಿಚಿತ್ರ ನಡಾವಳಿಗಳು ಇರುವುದು ಸ್ವಾಭಾವಿಕ, ಆದರೆ ಕಾಲಗತಿಯು ಬದಲಾದಂತೆ ಪರಂಪರಾಗತ ರೂಢಿಗಳೂ ಬದಲಾಗಬೇಕು. ದುರಾಗ್ರಹಕ್ಕೆ ಅವಕಾಶವಿಲ್ಲ. ಅಸಂಗತ, ಅಸಂಬದ್ಧ ಅವಶೇಷಗಳು, ನಮ್ಮ ವಿಧಿ ನಿಷೇಧಗಳಲ್ಲಿದ್ದರೆ, ಅವನ್ನು ಎದುರಿಸುವ, ನಿಲ್ಲಿಸುವ ಮನೋಧೈರ್ಯ ಹಾಗೂ ನೈತಿಕ ಬಲ ವ್ಯಕ್ತಿಯಲ್ಲಿರಬೇಕು. ಇದೇ ಮೇಲಿನ ಕಥೆಯ ಸಂದೇಶವೆಂದು ಹೇಳಬಹುದು. ಶಿವರಾಮರ ಸಮಾಧಿ ಬಾಗಲ ಕೋಟೆಯಲ್ಲಿ ಆಯಿತು ಎಂದು ಹೇಳುತ್ತಾರೆ. ಆದರೆ ಸಮಾಧಿಯ ಸ್ಥಲ ಇನ್ನೂ ಗೊತ್ತಾಗಿಲ್ಲ.

ಗುರುರಾಮಲಿಂಗ ಇವರು ಯಾಳಗಿಯ (ತಾ. ಸುರಪುರ. ಜಿ. ಗುಲ್ಬರ್ಗಾ) ಕುಲಕರ್ಣಿ ಮನೆತನದವರು. ತಾಯಿ ಲಿಂಗಾಂಬಿಕೆ, ತಂದೆ ನರಸಿಂಹ. ಇವರದು ಶ್ರೀವತ್ಸ ಅನ್ವಯ. ಸಿಂದಗಿ ಸಂಪ್ರದಾಯದ ಅಪ್ಪಯ್ಯ ಇವರಿಂದ ರಾಮ

ಮಂತ್ರೋಪದೇಶ. ಒಂದು ಮಂಗಳಾರತಿ ಗೀತದಲ್ಲಿ ಇವರ ಬಗ್ಗೆ ಕೆಲವು ವಿಷಯಗಳು ತಿಳಿಯುತ್ತವೆ. ಮಣಿಚೂಲ ಪರ್ವತದ ಗುಹೆಯಲ್ಲಿ ತಪಸ್ಸು ಮಾಡಿದರೆಂದೂ, ಶಿಷ್ಯರಿಗೆ ವೇದಾರ್ಥವನ್ನು ಬೋಧಿಸುತ್ತಿದ್ದರೆಂದೂ, ಯಾವಾಗಲೂ ಬ್ರಹ್ಮಾಕಾರ ವೃತ್ತಿಯಲ್ಲಿ ಇರುತ್ತಿದ್ದರೆಂದೂ, ಇವರ ಬಗ್ಗೆ ಉಲ್ಲೇಖ ವಿದೆ. ಇವರ ಮಹಾ ಸಮಾಧಿಯ ವರ್ಣನೆಯು ಕೆಳಗಿನ ನುಡಿಯಲ್ಲಿದೆ –

**ಇಂದು ವೇದ ರಸೈಕಶಕದ ವಿಕಾರಿವತ್ಸರ ದಕ್ಷಿಣಾಯನ ।**
**ಛಂದ ದ್ವಾದಶಿ ಶುದ್ಧ ಸಪ್ತಮಿ ಸೌಮ್ಯ ವಾಸರದಿ ॥**
**ಸುಂದರ ಜ್ಯೇಷ್ಠರ್ಕ ವೃಶ್ಚಿಕರಾಶಿ ಶುಭದಿನ ತೃತೀಯಪ್ರಹರದಿ।**
**ಹೊಂದಿದನು ಸುಸಮಾಧಿ ಸುಖವನು ರಾಮಗುರುವರನು ॥**

ಜಯಜಯತು ಸಿಂಧಾಪುರದ ಸಖ ರಾಮ ಗುರುವರಗೆ, ಎಂದು ಮಂಗಳಾರತಿಯ ಮುಕ್ತಾಯ.

## ಗೀತಗಳ ಸಾರ

ಪ್ರಾಸ್ತಾವಿಕ – ಸಿಂದಗಿ ಸಂಪ್ರದಾಯವು ಕರ್ನಾಟಕದಲ್ಲಿಯ ಒಂದು ಮಹತ್ವದ ಆಧ್ಯಾತ್ಮಿಕ ಸಂಪ್ರದಾಯ. ಅದರಲ್ಲಿ ಅನೇಕ ಸತ್ಪುರುಷರು ಆಗಿ ಹೋಗಿದ್ದಾರೆ. ಅವರು ರಚಿಸಿದ ಪಾರಮಾರ್ಥಿಕ ಗೀತಗಳು ಜನರ ಬಾಯಲ್ಲಿವೆ. ಗುರುದೇವ ರಾ.ದ.ರಾನಡೆಯವರ ನಿಂಬರಗಿ ಪಾರಮಾರ್ಥಿಕ ಸಂಪ್ರದಾಯ ದಲ್ಲಿಯೂ ಸಿಂದಗಿ ಸಂಪ್ರದಾಯದ ಕೆಲವು ಗೀತಗಳು ಪ್ರಚಲಿತವಿವೆ. ಭೀಮಾಶಂಕರರ ಒಂದು ಗೀತ 'ಮಾಡೋ ಪರಮೇಶ್ವರ ಗುರುಧ್ಯಾನ' ಇದು ನಿಂಬರಗಿ ಸಂಪ್ರದಾಯದ ನಿತ್ಯದ ರಾತ್ರಿಯ ಭಜನೆಯಲ್ಲಿ ಅಂತರ್ಭೂತವಾಗಿದೆ. ಜನ ಸಾಮನ್ಯರಲ್ಲಿ ಧರ್ಮ ಜಾಗೃತಿ ಮಾಡಿ ಅವರ ಮನಸ್ಸನ್ನು ಈ ಸಂತರು ಭಗವಂತನತ್ತ ಸೆಳೆದರು. ಈ ಸಂಪ್ರದಾಯದ ನಿತ್ಯ ಭಜನೆ, ಪಾರಾಯಣ, ಉತ್ಸವಗಳು ಎಷ್ಟೋ ಕಡೆಗೆ ಭಕ್ತಿಯಿಂದ ನಡೆಯುತ್ತಿವೆ. ಇದೂ ಒಂದು ನಾಥ ಸಂಪ್ರದಾಯ. ಶಕ್ತಿಪೂಜೆ (ಶ್ರೀವಿದ್ಯಾ)ಯೂ ಇದರಲ್ಲಿದೆ. ಶಾಕ್ತರಲ್ಲಿ ಕೆಲವರು ತಾಂತ್ರಿಕ ಮಾರ್ಗವನ್ನು ಅನುಸರಿಸುತ್ತಾರೆ. ಆದರೆ ಯಾರು ನಿರ್ವಿಕಾರ ವೃತ್ತಿಯವರೋ, ಯಾರು ಸ್ವಾರ್ಥ ಹಾಗೂ ವಿಷಯ ವಾಸನೆಯನ್ನು ಗೆದ್ದಿರುವರೋ, ಅಂಥ ಉಚ್ಚಪದವಿಯ ಸಾಧಕರಿಗೆ ಮಾತ್ರ ಶಕ್ತಿಪೂಜೆಯ ಸಾಹಸ ವಿಹಿತ ; ಅನ್ಯರಿಗೆ ಎಂದೂ ಇಲ್ಲ. ಈ ಕಟ್ಟಪ್ಪಣೆಯನ್ನು ಲಕ್ಷದಲ್ಲಿಡಬೇಕು.

ಈ ಸಂಪ್ರದಾಯದಲ್ಲಿ ಸಂಕುಚಿತ ವೃತ್ತಿ, ಉಚ್ಚ-ನೀಚ ಭಾವ ಕಾಣುವದಿಲ್ಲ. ಪ್ರಾಮುಖ್ಯವಾಗಿ ಬ್ರಾಹ್ಮಣ-ಲಿಂಗಾಯತ ರಲ್ಲಿಯ ಭೇದ ಭಾವ ತೊಡೆದು ಹಾಕಲು ಈ ಸಂಪ್ರದಾಯವು ಪ್ರಯತ್ನಿಸಿದೆ. ಇದಕ್ಕೆ ಮೊದಲನೆಯ ಕಾರಣವೆಂದರೆ, ಈ ಸಂಪ್ರದಾಯದ ಮೂಲ ಪುರುಷರಾದ ಮಲ್ಹಾರಿ ಇವರು ಸಪತ್ನೀಕರಾಗಿ ಕೃಷ್ಣಾ ಮಲಾಪಹಾರಿಗಳ ಕೂಡಲಸಂಗಮಕ್ಕೆ ಬಂದು ೧೨ ವರ್ಷ ಏಕನಿಷ್ಠೆಯಿಂದ ಸಂಗಮನಾಥನ ಸೇವೆ ಮಾಡಿದರು. ಎರಡನೆಯ ಕಾರಣವೆಂದರೆ, ಭವರಮ್ಮ ಮತ್ತು ಸಂಗಣ್ಣ ಇವರ ವಿವಾಹ, ಇದೂ ಮಹತ್ವದ ವಿಷಯ. ಇಲ್ಲಿ ಬ್ರಾಹ್ಮಣ ಲಿಂಗಾಯತರ ವಿವಾಹ ಜರುಗುತ್ತದೆ. ಭವರಮ್ಮ ಬ್ರಾಹ್ಮಣ ಕುಟುಂಬದವರ ಮಗಳು. ಅವಳು ಒಡೆಯರ ಎಂಬ ಲಿಂಗಾಯತ ಸತ್ಪುರುಷರ (ಊರಿನ ಎಲ್ಲ ಜನರು ಇವರ ಮಾರ್ಗದರ್ಶನದಂತೆ ನಡೆಯುತ್ತಿದ್ದರು) ಸಾಕು ಮಗು. ಸಂಗಣ್ಣ ಲಿಂಗಾಯತ. ಈ ವಿವಾಹಕ್ಕೆ ಎರಡೂ ಮತದ ಕರ್ಮಠರು ಮೊದಲು ವಿರೋಧಿಸಿದರೂ ನಂತರ ಒಪ್ಪಿಗೆ ಕೊಡುತ್ತಾರೆ. ಈ ವಿಷಯವನ್ನು ನಾವು ರಾಮಲಿಂಗ ವಿರಚಿತ 'ಭೀಮಾಶಂಕರರ ಚರಿತ್ರೆ' ಈ ಹಸ್ತಲಿಖಿತದಲ್ಲಿ ನೋಡುತ್ತೇವೆ (ಪುಟ ೨೯೧-೩೦೯). ಅಂದಿನ ಸಾಮಾಜಿಕ ಪರಿಸ್ಥಿತಿಯನ್ನು ಲಕ್ಷದಲ್ಲಿಟ್ಟರೆ ಇವೆರಡೂ ಪ್ರಗತಿಶೀಲ ಹೆಜ್ಜೆಗಳು. ಇನ್ನೊಂದು ಮಹತ್ವದ ಮಾತು. 'ನಮ್ಮ (ಭೀಮಾಶಂಕರರ) ವಂಶದವರು ಯಾವ ಗ್ರಾಮಕ್ಕೆ ಹೋಗಲಿ, ಮೊದಲು ಹೊಲಗೇರಿ ಭಿಕ್ಷಾ ತಕ್ಕೊಂಡೇ ತೀರಬೇಕು, ಎಂದು ಅಭಿವಚನ ಕೊಟ್ಟಿರುವೆನು' (ಅದೇ ಹಸ್ತಪ್ರತಿಯ ೬೪೧ ಪುಟ). ಮೊದಲು ಹರಿಜನರಿಗೆ ಮಾನ ಕೊಡುವದು, ಆ ಮೇಲೆ ಉಳಿದವರಿಗೆ : ಇದು ನಿಜವಾಗಿಯೂ ಪ್ರಶಂಸನೀಯ ಮಾತು. ಈ ಘಟನೆಯು ವ್ಯಾಸಕೂಟ, ದಾಸಕೂಟದ ಪ್ರವರ್ತಕರಾದ ವ್ಯಾಸ ತೀರ್ಥರು ಮೊದಲು ಬ್ರಾಹ್ಮಣರಿಗೆ ತೀರ್ಥ ಕೊಡದೆ ಕನಕದಾಸರಿಗೆ ಕೊಟ್ಟರು, ಇದರ ನೆನಪು ಕೊಡುತ್ತದೆ. ಈ ಕ್ರಮ ದಿಂದ ಕರ್ಮಠ ಬ್ರಾಹ್ಮಣರಿಗೆ ಸಿಟ್ಟು ಬಂದು ವ್ಯಾಸತೀರ್ಥರಿಗೆ ಮುದಿಹುಚ್ಚು ಹಿಡಿದಿದೆ ಎಂದು ಹೀಯಾಳಿಸಿದರು. ಎಲ್ಲೆಲ್ಲಿಯೂ ಪರಮಾತ್ಮನನ್ನು ಕಾಣುವ ಕನಕದಾಸರು ಆ ಬ್ರಾಹ್ಮಣರೆಲ್ಲರಿಗಿಂತ ಎಷ್ಟು ಶ್ರೇಷ್ಠರು, ಇದನ್ನು ವ್ಯಾಸತೀರ್ಥರು ಸಿದ್ಧಮಾಡಿ ತೋರಿಸಿದ್ದು ಎಲ್ಲರಿಗೂ ಪರಿಚಿತವಿದೆ. ಸಮಾಜದ ಉನ್ನತಿಗಾಗಿ ಕೆಲವು ಪಾರಮಾರ್ಥಿಕ ಪೀಠಗಳು ಪ್ರಯತ್ನ ಮಾಡಿವೆ, ಇನ್ನೂ ಮಾಡುತ್ತಿವೆ. ಇದು ಕಗ್ಗತ್ತಲೆಯಲ್ಲಿ ದಾರಿ ತೋರಿಸುವ ಕೈದೀವಿಗೆ.

ಈ ಕೆಲಸವನ್ನು ನಾನು ಕೈಕೊಂಡದ್ದು 'ಅವ್ಯಾಪಾರೇಷು ವ್ಯಾಪಾರ',

ಎಂದೇ ಇದೆ. ನಾನು ಕನ್ನಡ ಸಾಹಿತ್ಯದ ವಿದ್ಯಾರ್ಥಿ ಅಲ್ಲ. ತತ್ತ್ವಜ್ಞಾನದ ವಿದ್ಯಾರ್ಥಿ. ಕೆಲವು ವರ್ಷಗಳ ಹಿಂದೆ ಡಾ. ಕೃಷ್ಣ ಕೊಲ್ಹಾರ ಕುಲಕರ್ಣಿಯವರ ಭೆಟ್ಟಿಯಾದಾಗ ಅಜ್ಞಾತ ಸಂತಕವಿಗಳ ಗೀತಗಳ ಸಂಪಾದನೆ ಮಾಡುವ ವಿಷಯ ಹೊರಟಿತು. ಡಾ. ಕೃಷ್ಣರಾಯರಿಗೆ, ಈ ಸಂತಕವಿಗಳ ಗೀತ ರತ್ನಗಳು ಮಣ್ಣುಪಾಲಾಗದೆ ಪುಸ್ತಕರೂಪದಿಂದ ಹೊರ ಬೀಳಬೇಕು, ಎಂಬ ಪ್ರಬಲ ಇಚ್ಛೆ. ಅವರಲ್ಲಿ ಸಿಂದಗಿ ಸಂಪ್ರದಾಯದ ಸಂತಕವಿಗಳ ಗೀತಗಳ ಹಳೆಯ ಪ್ರತಿಗಳಿದ್ದವು. ಆಗ ನಾನು ಹಸ್ತಪ್ರತಿಗಳ ಸಂಪಾದನ ಕಾರ್ಯದಲ್ಲಿ ಆಸ್ಥೆ ತೋರಿಸಲಿಲ್ಲ. ೧೯೯೭ ರಲ್ಲಿ ಪುನಃ ಭೆಟ್ಟಿಯಾದಾಗ, ಇದೇ ವಿಷಯವನ್ನು ಅವರು ಮುಂದಿಟ್ಟರು. 'ಈ (ಸಂಪಾದನ) ಕಾರ್ಯ ಯಾರು ಮಾಡಬೇಕೋ ಅವರು ಮಾಡಿಲ್ಲ ; ನೀವಾದರೂ ಮಾಡಿರಿ' ಎಂದು ಹೇಳಿ, ತಮ್ಮಲ್ಲಿದ್ದ ಸಂಪ್ರದಾಯದ ಎಲ್ಲ ಹಸ್ತಲಿಖಿತಗಳನ್ನು ವಿಶ್ವಾಸವಿಟ್ಟು ಕೊಟ್ಟೇ ಬಿಟ್ಟರು. ೧೫ ದಿವಸ ಈ ಪ್ರತಿಗಳ ಅಭ್ಯಾಸ ಮಾಡಿದ ಮೇಲೆ ಸಂಪಾದನ ಕಾರ್ಯ ನನಗೆ ಅಶಕ್ಯವೆನಿಸಿತು. ಪ್ರತಿಗಳ ಭಾಷೆ ಕನ್ನಡವಿದ್ದರೂ ಲಿಪಿ ದೇವನಾಗರಿಯಲ್ಲಿ. ಇದಲ್ಲದೆ ಬೇರೆ ಬೇರೆ ಲೇಖಕರು ಪ್ರತಿಗಳನ್ನು ಬರೆದದ್ದರಿಂದ ಹಸ್ತಾಕ್ಷರದಲ್ಲಿ ಬಹಳ ಬದಲಾವಣೆಗಳಾಗಿವೆ. ಕೆಲವು ಲಿಪಿಕಾರರು ಬಹಳ ತ್ವರೆಯಿಂದ ಗೀತಗಳನ್ನು ಬರೆದಿದ್ದರಿಂದ ನಿಶ್ಚಿತವಾದ ಶಬ್ದ ಯಾವದಿದೆ, ಇದನ್ನು ಗುರುತಿಸುವದು ಕಷ್ಟವಾಯಿತು. ನಿರಾಶನಾದೆ. ಡಾ. ಕೃಷ್ಣರಾಯರಿಗೆ ಅವರ ಹಸ್ತಲಿಖಿತ ಪ್ರತಿಗಳನ್ನು ವಾಪಸು ಮಾಡುವ ಮನಸ್ಸು ಮಾಡಿದೆ. ಇದೇ ಸಮಯದಲ್ಲಿ ದಿಲ್ಲಿಗೆ ಹೋದಾಗ ಯೋಗಾಯೋಗದಿಂದ ಡಾ. ಮುರಲೀಧರ ಮುಧೋಳ ಇವರ ಭೆಟ್ಟಿಯಾಯಿತು. ಅವರಲ್ಲಿ ಹಳೆಯ ಹಸ್ತಲಿಖಿತ ಪ್ರತಿಗಳನ್ನು ಓದಿ ಅರ್ಥ ಮಾಡುವ ಆಸ್ಥೆ ಬಹಳ. ನನ್ನ ಸಮಸ್ಯೆ ಅವರ ಮುಂದಿಟ್ಟೆ. 'ನಿರಾಶರಾಗುವ ಕಾರಣವಿಲ್ಲ ; ಕೇವಲ ಅಕ್ಷರ ಓದಬೇಡಿ. ನೀವು ಓದಿದ ಅಕ್ಷರ ಸಮೂಹದಲ್ಲಿ ಹುದುಗಿದ ಶಬ್ದವನ್ನು ಕಂಡು ಹಿಡಿಯಿರಿ. ಯೋಗ್ಯ ಶಬ್ದ ಹುಡುಕಲು ಸಂದರ್ಭವೇನಿದೆ, ಇದನ್ನೂ ನೋಡಿರಿ' ಎಂದು ಸೂಚನೆ ಕೊಟ್ಟರು. ನಿಶ್ಚಿತ ಮಾರ್ಗದರ್ಶನ ಪಡೆಯಲು, ಎಷ್ಟು ಪ್ರಯತ್ನ ಮಾಡಿದರೂ ನನಗೆ ಅರ್ಥವಾಗದ ಒಂದು ಶಬ್ದವನ್ನು ಅವರಿಗೆ ತೋರಿಸಿದೆ. ಅದನ್ನು ನಾನು 'ಮೋಹ ಭಾವ' ಎಂದು ಓದಿದ್ದೆ. ಅವರು ಎಲ್ಲ ಸಂದರ್ಭವನ್ನು ಓದಿ, ಇದು 'ಮಹೋತ್ಸವ' ಶಬ್ದವಿದೆ ಎಂದು ನಿರ್ಣಯಿಸಿದರು. ಈ ಶಬ್ದವು ಸಂಧರ್ಭಕ್ಕೆ ಪೂರ್ಣ ಹೊಂದಿತು. ಈ ಸೂತ್ರವನ್ನು ಹಿಡಿದು ಗೀತಗಳ ಪುನಃ ಅಭ್ಯಾಸ

ಸುರು ಮಾಡಿದೆ. ಕಾಲಾಂತರದಿಂದ ಎಷ್ಟೋ ಗೀತಗಳನ್ನು ಓದಿದ್ದಾಯಿತು. ೧೯೯೭ ಜುಲೈದಲ್ಲಿ ಸಿಂದಗಿಗೆ ಹೋದಾಗ ಶ್ರೀಕೇಶವರಾವ ಕುಲಕರ್ಣಿ ಇವರನ್ನೂ ಕಂಡೆ. ಅವರೂ ಡಾ. ಮುಧೋಳ ಇವರ ಸೂತ್ರವನ್ನೇ ಹೇಳಿ, ಕಾರ್ಯ ಪೂರ್ಣಗೊಳಿಸಿರಿ ಎಂದು ಒತ್ತಾಯಿಸಿದರು. ಇದೇ ವೇಳೆಗೆ ಸಂಪ್ರದಾಯದ ಈಗಿನ ಪೀಠಾಧಿಪತಿಗಳಾದ ಶ್ರೀಸದಾಶಿವಪ್ಪಯ್ಯನವರನ್ನು ಸಂದರ್ಶಿಸಿ ಅವರ ಕೃಪೆಯಿಂದ ರಾಮಲಿಂಗ ವಿರಚಿತ 'ಶ್ರೀ ಭೀಮಾಶಂಕರರ ಚರಿತ್ರೆ' ಈ ಹಸ್ತಲಿಖಿತ ಪ್ರತಿಯನ್ನು ಓದುವ ಅವಕಾಶ ದೊರೆಯಿತು.

ಕಾಲಹೋದಂತೆ ದೇವನಾಗರಿಲಿಪಿಯಲ್ಲಿ ಮಾರ್ಪಾಡುಗಳಾಗಿವೆ ; ಉದಾಹರಣೆಗಾಗಿ ರ, ಲ, ಳ, ಲ್ಲ, ಸ್ತು ಇತ್ಯಾದಿ ಅಕ್ಷರಗಳು. ಇದರ ನಿವಾರಣೆಗಾಗಿ ವಿನಾಯಕ ಲಕ್ಷ್ಮಣ ಭಾವೆ ಯವರ 'ಮಹಾರಾಷ್ಟ್ರ ಸಾರಸ್ವತ' ಎಂಬ ಹೆಬ್ಬೊತ್ತಿಗೆಯ ಅವಲೋಕನ ಮಾಡಿದೆ. ಜಕ್ಕಪ್ಪಯ್ಯನವರ ಶ್ರೀರಾಮಚಂದ್ರ ಚರಿತ್ರಾನುಸಂಧಾನ ತಿಳಿದುಕೊಳ್ಳಲು, ಅದರ ಮೂಲವಾದ ಕೃಷ್ಣದಾಸ ಮುದಗಲ್ಲ ಇವರ ಯುದ್ಧಕಾಂಡವೆಂಬ ಮರಾಠಿ ಗ್ರಂಥವನ್ನು ಓದುವದು ಅವಶ್ಯವೆನಿಸಿತು. ಈ ಗ್ರಂಥವು ಅತಿ ದುರ್ಮಿಳವಾದದ್ದು. ಒಂದೇ ಪ್ರತಿಯು ಡೆಕ್ಕನ ಕಾಲೇಜ, ಪುಣೆ ಯಲ್ಲಿತ್ತು. ಮಿತ್ರವರ್ಯರ ಸಹಾಯದಿಂದ ಅದರ ಝರಾಕ್ಸ ಪ್ರತಿ ತರಿಸಿ ಓದಿದೆ. ಕೊನೆಗೆ, ಉಪಲಬ್ಧವಿದ್ದ ಸಿಂದಗಿ ಸಂಪ್ರದಾಯದ ಹಸ್ತಲಿಖಿತ ಪ್ರತಿಗಳನ್ನು ಓದಿ, ಗೀತಗಳನ್ನು ಕಲೆಹಾಕಿ, ಬೇರೆ ಬೇರೆ ವಿಚಾರ ಗಳನ್ವಯ ಅವುಗಳನ್ನು ವರ್ಗೀಕರಿಸಿ ತತ್ತ್ವಾನುಕ್ರಮದಿಂದ ಸಾಲುಗೊಳಿಸಿದೆ. ಅಂತೂ ಮುದ್ರಣ ಪ್ರತಿ ಸಿದ್ಧವಾಯಿತು. ಇನ್ನೊಂದು ವಿಷಯ. ಈ ಪ್ರತಿಗಳಲ್ಲಿ ಪ್ರಭುದೇವರ, ಚೆನ್ನಬಸವಣ್ಣನವರ, ಸರ್ವಜ್ಞರ ಎಷ್ಟೋ ವಚನಗಳು, ಅದರಂತೆ ಪುರಂದರದಾಸ, ಕನಕದಾಸ ಇವರ ಕೀರ್ತನೆಗಳೂ ಇವೆ. ಈ ಎಲ್ಲ ವಚನಗಳು, ಕೀರ್ತನೆಗಳು ಮುದ್ರಿತವಾಗಿವೆಯೋ ಇಲ್ಲವೋ ಇದೂ ಒಂದು ಪ್ರಶ್ನೆ. ಮುದ್ರಿತ ವಾಗಿರದ್ದಿದ್ದರೆ, ಅವು ಬೇಗನೆ ಮುದ್ರಿತವಾಗುವುದು ಅವಶ್ಯವಿದೆ. ಮುದ್ರಿತ ವಾಗಿದ್ದರೆ, ಇಲ್ಲಿರುವ ವಚನಗಳಲ್ಲಿ ಹಾಗೂ ಕೀರ್ತನೆಗಳಲ್ಲಿ ಪಾಠ ಭೇದ ಗಳಿವೆಯೋ, ಇದನ್ನೂ ನೋಡಬೇಕು. ಮಹತ್ವದ ಪಾಠ ಭೇದವಿದ್ದರೆ, ಅದೂ ಒಂದು ಕೀರ್ತನೆಯ ಅಥವಾ ವಚನದ ಬೇರೆ ಅರ್ಥ ಮಾಡುವದರಲ್ಲಿ ಸಹಾಯಕಾರಿಯಾಗುತ್ತದೆ. ಈ ಮಹತ್ಕಾರ್ಯವನ್ನು ಯಾರು ತೆಗೆದು ಕೊಳ್ಳುವರೋ ಭಗವಂತನಿಗೇ ಗೊತ್ತು.

ಈ ಸಂಪ್ರದಾಯದ ನಮಗೆ ದೊರೆತ ೯೫ ಗೀತಗಳು ತಾತ್ವಿಕ, ನೈತಿಕ ಹಾಗೂ ದಿವ್ಯ ಅನುಭೂತಿ ವಿಷಯಕ ವಿಚಾರಗಳಿಂದ ಪರಿಪ್ಲುತವಾಗಿವೆ. ಕೆಳಗೆ ಕಾಣಿಸಿದಂತೆ ಈ ಸಂತಕವಿಗಳ ಗೀತಗಳಿವೆ –

| | |
|---|---|
| ಭೀಮಾಶಂಕರ | ೨೬ |
| ಜಕ್ಕಪ್ಪಯ್ಯ | ४೫ |
| ಶಿವರಾಮ | ೨ |
| ಗುರುರಾಮಲಿಂಗ | ೩ |
| ಶ್ರೀಪತಿ | ೧ |
| ನರಸಿಂಹ | ೧ |
| ವಿಶ್ವಪತಿ | ೧ |
| ಸಿದ್ಧ ಗುರು ತ್ರಿಪುರಾಂತಕ | ೨ |
| ಜ್ಞಾನಬೋಧ | ೧೩ |
| ಅಜ್ಞಾತ | ೧ |

ಭೀಮಾಶಂಕರ, ಜಕ್ಕಪ್ಪಯ್ಯ, ಶಿವರಾಮ, ಗುರು ರಾಮಲಿಂಗ ಈ ಪುಣ್ಯ ಪುರುಷರ ಜೀವನ ಚರಿತ್ರೆಯನ್ನು ಸಂಕ್ಷೇಪದಲ್ಲಿ ಈ ಮೊದಲೇ ಕೊಡಲಾಗಿದೆ. ಶ್ರೀಪತಿ ಇವರು ಶಿವರಾಮರ ಶಿಷ್ಯರೆಂದು ಕಾಣುತ್ತಾರೆ. ನಮಗೆ ದೊರೆತ 'ಶ' ಪ್ರತಿಯಲ್ಲಿ 'ರಾಮಾಯಣ ಸವಾಯಿ' ಎಂಬ ಇವರ ಮರಾಠಿ ಕೃತಿ ಇದೆ. ಅದರಲ್ಲಿ ತಾವು ಗುರು ಶಿವರಾಮರ ಕೃಪೆಯಿಂದ ಈ ಕೃತಿಯನ್ನು ರಚಿಸಿದೆವು ಎಂದು ಸ್ಪಷ್ಟವಾಗಿ ಹೇಳುತ್ತಾರೆ (ಗುರು ಶಿವರಾಮ ಕೃಪೇಸ್ತವ ಶ್ರೀಪತಿ ಬೋಲಿಯಲಾ । ಶ್ರೋತೇ ಆಣೀ ಕವಿ ರಾಜ ಹೋ ದೃಢವಂದೀನ ಮೀ ತುಮಚ್ಯಾ ಚರಣಾಲಾ ॥೨೦॥ (ಮಹಾರಾಷ್ಟ್ರ ಸವಾಯಿ ಸಪ್ತತಿ). ಇದಲ್ಲದೆ ಇವರು ಬರೆದ ಮಹತ್ವದ ಗೀತವೆಂದರೆ, 'ಸಿದ್ಧ ಬಸವ ಪ್ರಸಿದ್ಧನ ಮಹಿಮೆಯ' ; ಈ ಗೀತದಲ್ಲಿ ಸಂಪ್ರದಾಯದ ಹಿರಿಯ ಮಹಾತ್ಮರಾದ ರಾಮನಾಥರ ಜೀವನ ಚರಿತ್ರೆಯ ವಿವರಣೆಯಿದೆ. ಆದ್ದರಿಂದ ಇವರೂ ಸಿಂದಗಿ ಸಂಪ್ರದಾಯಕ್ಕೆ ಸೇರಿದವರೆಂದು ನಿಶ್ಚಿತವಾಗಿ ತಿಳಿಯುತ್ತದೆ. ದುರ್ದೈವದಿಂದ ಇವರ ಜೀವನದ ಬಗ್ಗೆ ಯಾವ ವಿವರಣೆಗಳೂ ಸಿಕ್ಕಿಲ್ಲ. ನರಸಿಂಹ, ವಿಶ್ವಪತಿ, ಸಿದ್ಧಗುರು ತ್ರಿಪರಾಂತಕ ಈ ಮುದ್ರಿಕೆಯಿದ್ದ ಪದಗಳೂ ಇದೇ ಸಂಪ್ರದಾಯದ ಸತ್ಪುರುಷರ ಪದಗಳಿರ ಬಹುದೆಂದು ಸಂದರ್ಭದಿಂದ ತೋರುತ್ತದೆ. ಜ್ಞಾನಬೋಧರೂ ಕೂಡ

ಈ ಸಂಪ್ರದಾಯವರು (ಸಂಪ್ರದಾಯದ ಬಗ್ಗೆ ಆದರ ಭಾವ ಉಳ್ಳವರು) ಎಂದು ಅನಿಸುತ್ತದೆ. ಇವರ ೧೩ ಗೀತಗಳು ಸಂಪ್ರದಾಯದಲ್ಲಿ ದೊರೆತ 'ರ' ಪ್ರತಿಯಲ್ಲಿ ಅಂತರ್ಭೂತವಾಗಿವೆ. ಇದಲ್ಲದೆ, 'ಸಿಂಧಾಪುರ (ಸಿಂದಗಿ) ನಿತ್ಯ ಭಜನ ಮಾಲಾ ಸಂಗ್ರಹ' (೧೯೬೬ ರ ಪ್ರಕಟನೆ) ಈ ಪುಸ್ತಿಕೆಯಲ್ಲಿ ಜ್ಞಾನಬೋಧರ ೧ ಗೀತ ವಿದ್ದದ್ದರಿಂದ ಇವರೂ ಸಿಂದಗಿ ಸಂಪ್ರದಾಯಕ್ಕೆ ಅಪರಿಚಿತರಲ್ಲ ಎಂದು ತೋರುತ್ತದೆ. ಇವರ ಬಗ್ಗೆಯೂ ಯಾವ ವಿವರಣೆಗಳೂ ತಿಳಿದಿಲ್ಲ. ಜ್ಞಾನಬೋಧರು ತಮ್ಮ ಕೆಲವು ಗೀತಗಳಲ್ಲಿ ತಾವು ಗೋವಿಂದ ಗುರುಗಳ ಶಿಷ್ಯರೆಂದು ಹೇಳಿಕೊಳ್ಳುತ್ತಾರೆ. ಇವರ ಗೀತಗಳೂ ಪ್ರಾಸಾದಿಕವಿದ್ದು ನೈತಿಕ ಉಪದೇಶ ಹಾಗೂ ಆಧ್ಯಾತ್ಮಿಕ ಅನುಭವಗಳಿಂದ ಕೂಡಿದ್ದಾಗಿವೆ. ನಮ್ಮ ಅವಗಾಹನೆಗೆ ಬಂದ ೯೫ ಗೀತಗಳಲ್ಲಿ ವಿಶಿಷ್ಟ ಗೀತಗಳು, ನಿಶ್ಚಿತವಾಗಿ ವಿಶಿಷ್ಟ ಕವಿಗಳವು, ಎಂದು ಹೇಳಲಾಗದು. ಭಿನ್ನಾಭಿಪ್ರಾಯಕ್ಕೆ ಅವಕಾಶವಿದೆ. ಸಂತ ಕವಿಗಳು ಯಾರೇ ಇರಲಿ ; ಅವರ ಗೀತರತ್ನಗಳನ್ನು ಕಾಪಾಡುವದು, ಅವು ಅಳಿಯದಂತೆ ಅವನ್ನು ಉಳಿಸುವದು, ಇದೂ ಒಂದು ಧ್ಯೇಯವಿದ್ದದ್ದರಿಂದ ಇಲ್ಲಿ ಅವೆಲ್ಲವನ್ನು ಕೊಡಲಾಗಿದೆ. ಇಂಥ ಶ್ರೇಷ್ಠಕೃತಿಗಳು ಪ್ರಕಟವಾಗದೆ ಇದ್ದರೆ ಕನ್ನಡ ಆಧ್ಯಾತ್ಮಿಕ ಸಾಹಿತ್ಯಕ್ಕೆ ತುಂಬಾ ಹಾನಿ ಎಂದು ಭಾವಿಸಿ, ಗೀತಗಳ ಅಂಕಿತ ಸಂದಿಗ್ಧವಿದ್ಧರೂ ಅವನ್ನೂ ಇಲ್ಲಿ ಸೇರಿಸಲಾಗಿದೆ.

ಸಾಹಿತ್ಯದ ದೃಷ್ಟಿಯಿಂದಲೂ ಈ ಗೀತಗಳು ಮಹತ್ವದವುಗಳು. ರೂಪಕ ಅಲಂಕಾರಗಳು ಬೇಕಾದಷ್ಟು ಇವೆ. ಸಾಂಗ ರೂಪಕ, ಮಾಲಾರೂಪಕ ಅಥವಾ ಪರಂಪರಿತರೂಪಕ (ಗುರುದೇವ ರಾ.ದ. ರಾನಡೆಯವರು ಇವುಗಳಿಗೆ ಮಹಾರೂಪಕಗಳು ಎಂದು ಕರೆಯುವದು ಹೆಚ್ಚು ಉಚಿತವೆಂದು ಹೇಳುತ್ತಾರೆ) ಗಳೂ ಸಾಕಷ್ಟಿವೆ. ಗೀತಗಳಲ್ಲಿ ನಾದ ಮಾಧುರ್ಯ, ಪದಲಾಲಿತ್ಯವಿದೆ. ಆದಿಪ್ರಾಸವಂತೂ ಇದ್ದೇ ಇದೆ. ಕೆಲವೆಡೆಗಳಲ್ಲಿ ಅಂತ್ಯಪ್ರಾಸವೂ ಇದೆ. ಇನ್ನೂ ಕೆಲವೆಡೆಯಲ್ಲಿ ಆದಿ ಹಾಗೂ ಅಂತ್ಯಪ್ರಾಸ ಎರಡೂ ಇವೆ. ನಡು ನಡುವೆ ಷಟ್ಪದಿಗಳೂ ಬರುತ್ತವೆ. ಈ ಎಲ್ಲ ಸಾಹಿತ್ಯ ಶ್ರೇಷ್ಠತೆಯು ಭಗವದ್ಭಕ್ತಿಗೆ ಪರಿಪೋಷಕವಾಗಿದೆ. ಪರಮೇಶ್ವರನಲ್ಲಿ ನಿತಾಂತ ನಿಷ್ಠೆ ಅಂದರೆ ಭಕ್ತಿರಸವೇ ಈ ಎಲ್ಲ ಗೀತಗಳ ಜೀವಾಳ.

ಕೆಲವು ಗೀತಗಳಲ್ಲಿ ವೆಂಕಟೇಶ, ಹನುಮಂತ ಇತ್ಯಾದಿ ದೇವತೆಗಳ ಸಗುಣ

ವರ್ಣನೆಯಿದೆ. ಈ ಸತ್ಪುರುಷರು ಯಾವ ಯಾವ ಕ್ಷೇತ್ರಗಳಿಗೆ ಹೋಗುತ್ತಿದ್ದರೋ ಅಲ್ಲಲ್ಲಿಯ ಗ್ರಾಮ ದೈವತ ಅಥವಾ ಆ ಗ್ರಾಮದಲ್ಲಿಯ ಯತಿ ಮಹಂತರ ಸ್ತುತಿ ಮಾಡಿದ್ದಾರೆ. 'ಎಂಥ ಮಹಿಮನು ನೋಡು' ಈ ಗೀತದಲ್ಲಿ ಯಲಗೂರ (ತಾ. ಮುದ್ದೇಬಿಹಾಳ, ಜಿ. ಬಾಗಲಕೋಟೆ) ಹನುಮಂತ ದೇವರ ಸ್ತುತಿಯಿದೆ. 'ಬಿಂದುಮಾಧವ ರಮಾಧವ' ಈ ಗೀತದಲ್ಲಿ ಮಳಖೇಡದ (ತಾ. ಚಿತ್ತಾಪುರ. ಜಿ. ಗುಲ್ಬರ್ಗಾ) ಬಿಂದು ಮಾಧವನ ಸ್ತುತಿಯಿದೆ. 'ಸಾಂಬ ಶ್ರೀವಾಹನ ಕುಂಟೋಜೀಶಾ' ಇದರಲ್ಲಿ ಕುಂಟೋಜಿ (ತಾ. ಮುದ್ಧೇಬಿಹಾಳ, ಜಿ. ಬಾಗಲಕೊಟೆ) ಗ್ರಾಮದ ಬಸವೇಶ್ವರನ ಸ್ತುತಿಯಿದೆ. 'ಬ್ರಹ್ಮಾದಿಕರನು ಪರಬ್ರಹ್ಮ' ಇದರಲ್ಲಿ ಸಂಪ್ರದಾಯದ ಆರಾಧ್ಯ ದೈವತ ಬನಶಂಕರಿ ದೇವಿಯ ವರ್ಣನೆಯಿದೆ. 'ಸತ್ಯಬೋಧ ಸ್ವಾಮಿಯವರು' ಇದರಲ್ಲಿ ಸವಣೂರಿನ (ಜಿ. ಧಾರವಾಡ) ಸತ್ಯಬೋಧ ಯತಿಗಳ ಸ್ತವನವಿದೆ. ಮಂಗಲಾರತಿಯ ಪದಗಳು ಅದರಂತೆ ಜೋಗುಳ ಪದಗಳು ಇವುಗಳಿಗೆ ಕೊರತೆಯಿಲ್ಲ. 'ಆಚರಸ ನೀ ಬಾಚರಸ ನೀ' ಈ ಗೀತದಲ್ಲಿ ಸಂಪ್ರದಾಯದ ಮೂಲ ಪುರುಷರಿಂದ ಭೀಮಾಶಂಕರರ ವರೆಗಿನ ಮಹಾತ್ಮರ ಸಂಕ್ಷಿಪ್ತ ಉಲ್ಲೇಖವಿದೆ. ಹಠಯೋಗದ ಪ್ರಮೇಯಗಳು ಕೆಲವೆಡೆಯಲ್ಲಿ ತಲೆದೋರುತ್ತವೆ. ಅದ್ವೈತ ವೇದಾಂತದ ಸಿದ್ಧಾಂತಗಳು ಅಂದರೆ ಅಧಿಷ್ಠಾನ, ಅಧ್ಯಾರೋಪ, ಮಾಯಾವಾದ, ನಾಮರೂಪಗಳ ಅಸತ್ಯತ್ವ, ತತ್ತ್ವಮಸಿ, ಈ ವಿಷಯಗಳು ಪ್ರಾಮುಖ್ಯವಾಗಿ ಇಲ್ಲಿ ಕಾಣುತ್ತವೆ. ಸದ್ಗುರು ಸ್ತುತಿ, ಪರಮಾತ್ಮನ ಸಗುಣ – ನಿರ್ಗುಣ ವರ್ಣನೆ, ನೈತಿಕ ಸಿದ್ಧತೆ, ನಾಮ ಮಾಹಾತ್ಮ್ಯ, ಧ್ಯಾನ ಪದ್ಧತಿ, ಅತೀಂದ್ರಿಯ, ಅಪರೋಕ್ಷಾನುಭೂತಿ – ಹೀಗೆ ಈ ಗೀತಗಳಲ್ಲಿ ಪರಮಾರ್ಥ – ಸೋಪಾನವೇ ಇದೆ.

ಹಸ್ತಲಿಖಿತಗಳು ಬಹಳ ಹಳೆಯವಾದ್ದರಿಂದ ಕೆಲವೆಡೆಗೆ ಪುಟಗಳು ಹರಿದು ಹೋಗಿವೆ. ಇಂಥ ಸ್ಥಳಗಳಲ್ಲಿ .... ಈ ಗುರುತು ಹಾಕಿದೆ. ಹಸ್ತಾಕ್ಷರವು ಅಸ್ಪಷ್ಟವಿದ್ದಲ್ಲಿ ಸಂದರ್ಭದ ಮೇಲಿಂದ ಅದು ಯಾವದಿರಬಹುದು ಇದನ್ನು ಊಹಿಸಿ ಬರೆಯ ಲಾಗಿದೆ. ಇಲ್ಲಿ ದೋಷಗಳಿರುವ ಸಂಭವವಿದೆ.

ಇನ್ನು ಗೀತಗಳಲ್ಲಿರುವ ಮಹತ್ವದ, ಉದ್ಬೋಧಕ ವಿಚಾರಗಳನ್ನು ಸಂಕ್ಷಿಪ್ತ ದಲ್ಲಿ ನೋಡೋಣ.

# ಭೀಮಾಶಂಕರ

ಇವರ ೨೬ ಗೀತಗಳು ನಮಗೆ ದೊರಕಿದವು. ಇವುಗಳ ಮುಖ್ಯ ವಿಷಯಗಳೆಂದರೆ – ಪರಮಾರ್ಥದತ್ತ ಮನುಷ್ಯನನ್ನು ಎಳೆದೊಯ್ಯುವ ಕಾರಣಗಳು, ಸದ್ಗುರು ಸ್ತವನ, ಆರಾಧ್ಯ ದೈವತಗಳ ಸ್ತುತಿ, ಭಗವನ್ನಾಮ ಮಹಿಮೆ ಮತ್ತು ಸಾಧಕನಿಗೆ ಪರಮೇಶ್ವರನ ಕೃಪೆಯಿಂದ ಪ್ರಾಪ್ತವಾಗುವ ದಿವ್ಯ, ಅತೀಂದ್ರಿಯ ಅನುಭವಗಳು. ವಿಷಯಗಳ ಬಲೆಯಲ್ಲಿ ನಾನು ಸಿಕ್ಕಿರುವೆ. ರಜತಮಗುಣಗಳ ಪ್ರಭಾವ ಹೆಚ್ಚಾಗಿ ಉನ್ಮತ್ತನಾದೆ. ಭಗವಂತನ ನಾಮದ ವಿಸ್ಮರಣೆ ಆಯಿತು. ನಾನು ನಿನ್ನನ್ನು ಭಜಿಸುವೆ. ನನ್ನ ಅವಗುಣಗಳನ್ನು ನೋಡದೆ, ನನ್ನ ಮೇಲೆ ಕೃಪಾದೃಷ್ಟಿ ಬೀರು, ಎಂದು ಸಾಧಕನ ಪ್ರಾರ್ಥನೆ (ಕ್ರ. ೧). ಪ್ರಾರಬ್ಧ ಕರ್ಮದಿಂದ ತಾಯಿಯ ಉದರದಲ್ಲಿ ಬಂದೆ. ಮಲ ಮೂತ್ರ ಕೂಡಿದ ಜಠರಾಗ್ನಿಯಲ್ಲಿ ಒಂಬತ್ತು ತಿಂಗಳು ಬೆಂದೆ. ನನ್ನ ಬಾಲ್ಯಾವಸ್ಥೆಯು ದುರ್ಬಲಾವಸ್ಥೆ ; ಯೌವನದೊಡನೆ ಅಹಂಕಾರವೂ ಬಂದಿತು. ಮುಪ್ಪು ಎಂದರೆ ಚಿಂತೆಯ ಬೀಡು, ಈ ಕಾರಣಗಳಿಂದ ನಾನು ನಿನ್ನ ಭಜನೆಗೆ ದೂರಾದೆ ; ದೀನೋದ್ಧಾರಕನಾದ ನಿನಗೆ, ನಾನು ಶರಣು ಬಂದಿರುವೆ. ನನ್ನನ್ನು ಸಂರಕ್ಷಿಸು (ಕ್ರ. ೨). ವಿಷಯ ಸುಖದ ಬೆನ್ನು ಹತ್ತಿ ಜೀವನ ಹಾಳು ಮಾಡಿ ಕೊಳ್ಳುವ ನನಗೆ ಸದ್ಗುರುವಿನಿಂದಲೇ ಉದ್ಧಾರ. ಸದ್ಗುರುವಿನ ಅಲೌಕಿಕ ಕಾರ್ಯ ಗಳನ್ನು ಸ್ಮರಿಸುವೆ. ತಾರಕ ಮಂತ್ರ ಉಪದೇಶಿಸಿ ಮಾಯಾ ಮೋಹವನ್ನು ಸದ್ಗುರುವು ಕಡಿದು ಹಾಕಿದನು. ಭ್ರಾಂತಿಯ ಬೇರನ್ನೇ ಸುಟ್ಟು, ಸ್ವರೂಪವನ್ನು ಅಂದರೆ ಆತ್ಮರೂಪವನ್ನು ತೋರಿಸಿ ಭವಭಯ ಹರಿಸಿದನು. ವರದಾಯಕನಾದ ಸದ್ಗುರುವಿನ ಪಾದಕ್ಕೆ ಶರಣು ಹೋಗುವದೇ ನನ್ನ ಆದ್ಯ ಕರ್ತವ್ಯ, ಇದು ಮನದಟ್ಟಾಯಿತು (ಕ್ರ. ೩). ನಾಮ ಸ್ಮರಣೆಯ ಆನಂದವನ್ನು ವರ್ಣಿಸುವದು ಸಾಧ್ಯವಿಲ್ಲ. ಗುರುಬೋಧದಿಂದ ಆತ್ಮಸ್ವರೂಪವು ಕಾಣುತ್ತದೆ. ಚಿತ್ತವೃತ್ತಿಲಯ ವಾಗಿ, ಮಾಯೆ ತ್ರಿಗುಣಗಳೆಲ್ಲ ಹೋಗಿ, ನೋಡಿದತ್ತೆಲ್ಲ ಪರಿಪೂರ್ಣ ಸಚ್ಚಿದಾನಂದ ನಿಜ ವಸ್ತುವೇ ತುಂಬಿದೆ. ದ್ವೈತಾದ್ವೈತ ಗಲಭೆ ಹೋಗಿ, ಶುದ್ಧ ಆತ್ಮತತ್ವದ ಅನುಭೂತಿಯಾಗುತ್ತದೆ. ಇದು ಮಾತಿಗೆ ಮೀರಿದ ಅವಸ್ಥೆ. ಮೌನದ ಏಕಾಂತದಲ್ಲಿ ಸ್ಥಿರವಾಗಿ ಏಕಮೇವ ಲಕ್ಷ್ಯ ಅಂದರೆ ಚಿದ್ಘನ ಬ್ರಹ್ಮತತ್ವವೆ ಸದ್ಗುರುವು ತಾನಾಗಿಹನು. ಮನದ ಕಲ್ಪನೆಗಳೆಲ್ಲವೂ ನಷ್ಟವಾಗುತ್ತವೆ. ಅಹಂಕಾರ, ದೇಹಾತ್ಮಭಾವವೆಲ್ಲ ಹೋಗುತ್ತದೆ. ಘನ ವಸ್ತು ಒಂದೇ ಪರಬ್ರಹ್ಮ, ಎಂಬ ಅಪರೋಕ್ಷಾನುಭೂತಿಯಾಗುತ್ತದೆ ಗುರುಪದಾಂಬುಜ ಧ್ಯಾನದ

ಆನಂದದಿಂದ (ಕ್ರ. ೪). ಸದ್ಗುರುವಿನ ಕೃಪೆಯಿಂದ ದೇಹಾಭಿಮಾನವು ನಷ್ಟವಾಯಿತು. ಅವನ ಅನುಗ್ರಹ ವಾಗುತ್ತಲೇ ವೈರಾಗ್ಯ ಪಡೆದೆ. ನನಗೆ ಆತ್ಮಾನಂದ ನೀಡಿ, ತನ್ನಂತೆ ಅಂದರೆ ಆತ್ಮರೂಪದಂತೆ ಮಾಡಿದನು. ನಾನು-ನೀನು ಈ ದೇಹಭಾವ, ಮಾನ-ಅಪಮಾನ ಇಂಥ ದ್ವಂದ್ವಗಳು ಗತಿಸಿದವು. ಸದ್ಗುರುವು ಭಗವಂತನ ಕುರುಹು ತೋರಿಸಿ ಆ ಆನಂದದಲ್ಲಿಯೇ ನನ್ನನ್ನು ನಲಿಸಿದನು. ಅನಾಹತ ನಾದದಲ್ಲಿ ನನ್ನ ಮನಸ್ಸು ಲುಬ್ಧವಾಯಿತು. ವಾದಿ ವಿವಾದಿಗಳ ಕೂಡ ಸಂವಾದ ಮಾಡಿ, ಅವನ ಕೃಪೆಯಿಂದಲೇ ನಾನು ಯಶಸ್ವಿಯಾದೆ. ಅಸಾಧ್ಯವಾದ ಮನೋ ನಿಗ್ರಹ ಈಗ ಸಾಧ್ಯವಾಯಿತು. ಭೃಕುಟಿ ಮಧ್ಯದಲ್ಲಿ ಚಿತ್ ಸೂರ್ಯನ ಪ್ರಕಾಶ ಅಂದರೆ ಪರಮಾತ್ಮನ ರೂಪವನ್ನು ಸದ್ಗುರುವು ತೋರಿಸಿದನು. ಸ್ಥಿರಾಸನವು ದೃಢವಾಗಿ, ಸಹಜ ಕುಂಭಕ ಅವಸ್ಥೆಯು ಪ್ರಾಪ್ತವಾಯಿತು. ಈಶ, ದತ್ತ, ಮಹೇಶ, ದಿಗಂಬರ ಈ ದಿವ್ಯನಾಮ ಘೋಷದಲ್ಲಿ ನನ್ನ ಮನಸ್ಸು ಸ್ಥಿರವಾಯಿತು (ಕ್ರ. ೫). ಸದ್ಗುರುವು ಪರಮೇಶ್ವರನ ಪ್ರತ್ಯಕ್ಷ ರೂಪನು. ಕೋಟಿ ಸೂರ್ಯ ಪ್ರಕಾಶದಂತೆ ದೇದೀಪ್ಯಮಾನನು. ಭಕ್ತರಿಗೆ ವರದಾಯಕ ತಾರಕಮಂತ್ರ ಅಂದರೆ ಶ್ರೀರಾಮನಾಮ. ಈ ಮಂತ್ರದಲ್ಲಿ ಸದ್ಗುರುವಿನ ನಿಃಸೀಮ ಪ್ರೇಮವಿದೆ. ಕೃಪಾವೃಷ್ಟಿ ಮಾಡುವ ಸದ್ಗುರುನಾಥನೇ ಸದೈವ ನನ್ನ ಆಧಾರವಾಗಿರು (ಕ್ರ. ೬). ನಾನು ನನ್ನ ಅಧ್ಯಾತ್ಮ ಸಂಪತ್ತನ್ನು ಮರೆತಿದ್ದೆ. ಅದನ್ನು ತೋರಿಸಿ, ಅದನ್ನು ನನ್ನ ಕೈಯಲ್ಲಿ ಸದ್ಗುರುವು ಕೊಟ್ಟನು. ಸದ್ಬೋಧವೆಂಬ ಆನೆಯ ಮೇಲೆ ನನ್ನನ್ನು ಕೂಡಿಸಿದನು. ಜಗವೆಲ್ಲ ವ್ಯಾಪಿಸಿದ ಹಾಗೂ ತಾನೇ ಪರಶಿವನಾದ ಸದ್ಗುರುವನ್ನು ಮರೆತು ನಾನು ಇರಲಾರೆನು (ಕ್ರ. ೭). ಗುರುಕೃಪೆಯಿಂದ ಪ್ರಾಪ್ತವಾಯಿತು ಈ ಬ್ರಹ್ಮಭೂತ. ಏಕೋ ವಿಷ್ಣುಃ ಮಹದ್ಭೂತಃ ಎಂದು ಹಿಂದಿನ ಋಷಿ ಮುನಿಗಳು ಹೇಳಿಲ್ಲವೇ ? ಈ ಬ್ರಹ್ಮಭೂತ ವನ್ನು ಬಿಡಿಸುವರಾರು ? ಬ್ರಹ್ಮಭೂತವು ಪಂಚ ಮಹಾಭೂತಗಳನ್ನು ನುಂಗಿತು. ಮೂಲ ಮಾಯೆಯನ್ನು ಮೆಲ್ಲನೆ ಮೆದ್ದಿತು. ಬ್ರಹ್ಮಾಂಡದ ಆಚೆಗೆ ಆ ಬ್ರಹ್ಮಭೂತ ಕುಳಿತಿದೆ. ಮನ ಮಾತುಗಳಿಗೆ ಅದು ಅಗೋಚರ. ಅದು ನನಗೆ ಬಡೆಯಿತು. ಬ್ರಹ್ಮ ಭೂತವು ಚಿತ್ರಕಾಶ ತೋರಿಸಿ ತಾನೇ ದೃಷ್ಟಿಯ ಮುಂದೆ ಸುಳಿಯುತ್ತದೆ. ನನ್ನ ಅಹಂಕಾರ, ಕಳವಳಿಕೆ ಎಲ್ಲ ನಷ್ಟವಾದವು (ಕ್ರ. ೮). ವೈರಾಗ್ಯ ಮೂರ್ತಿ ಯಾದ ಸದ್ಗುರುವು ಸಾಮಾನ್ಯರಿಗೆ ಭಿಕ್ಷುಕನಂತೆ ಕಾಣಿಸುವನು. ಆದರೆ ಅವನಲ್ಲಿ ಯಾವ ಕೊರತೆಯೂ ಇಲ್ಲ. ಅವನ ಅಕ್ಷಯ ಆತ್ಮಾನಂದ ಲಕ್ಷಾಧೀಶನಿಗೂ ಸಿಗದು. ಅವನಲ್ಲಿ ಮೋಕ್ಷ ಲಕ್ಷ್ಮಿಯಿರುವಳು. ಮೌನ ಮುದ್ರೆ ಅವನಲ್ಲಿ ಇದೆ.

ಅವನಿಗೆ ಸಾಧು ಸಜ್ಜನರ ಮನ್ನಣೆಯಿದೆ. ಶಿಕ್ಷೆಮಾಡುವ ಸಾಮರ್ಥ್ಯವಿದೆ. ಪಶ್ಚಾತ್ತಾಪದಿಂದ ಶುದ್ಧರಾದ ಪಾಪಿಗಳನ್ನು ಉದ್ಧರಿಸುವ ಅನುಗ್ರಹಶಕ್ತಿಯಿದೆ. ಅವನಿಗೆ ಬ್ರಹ್ಮಪದವಿದೆ. ಶಾಂತಿ ಸ್ವಭಾವವೇ ಅವನ ಸತಿ, ವಿವೇಕವೇ ಅವನ ಸತ್ಪುತ್ರ, ಸಹನಶೀಲತೆಯೇ ಅವನ ಸೊಸೆ. ಸದ್ಭಾವ ವೆಂಬವೇ ಅವನ ಬಂಧು ಬಳಗ : ಶಮದಮವೆಂಬ ಅವನ ಗೆಳೆಯರು. ಅವನ ಸೇವೆಗಾಗಿ ಭಕ್ತಿ ಪ್ರೇಮವೆಂಬ ದಾಸಿಯರು. ಜೀವನದ ಕೊನೆಯುಸಿರು ಎಳೆಯುವಾಗ, ಎಂದೂ ತೊಲಗದ, ರಾಮನಾಮದ ಅವನಿಗೆ ಆಧಾರವಿದೆ. ದೇಹಪಾತವಾದ ನಂತರ ಈ ಮಹಾತ್ಮನು ಚಿನ್ಮಯಾನಂದದಲ್ಲಿ ಐಕ್ಯನಾಗುವನು (ಕ್ರ. ೯). ನಿತ್ಯನಿರಂಜನ ವಸ್ತುವಾದವನೇ ಧನ್ಯನು. ಅವನೇ ಜಗನ್ಮಾನ್ಯನು. ಮಿಥ್ಯೆಯೆನಿಸುವ ವಿಷಯ ಸುಟ್ಟು ನಿತ್ಯವಾದ ವಿವೇಕವನ್ನು ತಿಳಿದವನೇ ಧನ್ಯನು. ಆತ್ಮಜ್ಞಾನ ಪಡೆದು ಚಿದ್ಬೋಧದಲ್ಲಿ ಆನಂದಿಸುವವನೇ ಧನ್ಯನು. ಅವನಿಗೆ ಜನ್ಮಮರಣಗಳ ಭಯ ವೆಲ್ಲಿಯದು ? ಯಾವಾಗಲೂ ಘನವಾದ ಉನ್ಮನಿ ಅವಸ್ಥೆಯಲ್ಲಿ ಇರುತಿಹನು. ಬ್ರಹ್ಮಮಯನಾಗಿ ಬ್ರಹ್ಮೈಕ್ಯವ ಪಡೆದವನೇ ಧನ್ಯನು. ಆದ್ದರಿಂದ ಇಂಥ ಗುರುದೇವನ ಕೃಪೆ ಬೇಡು (ಕ್ರ. ೧೦). ಗುರೂಪದೇಶ ಪಡೆದು ಪರಮಾತ್ಮನ ಧ್ಯಾನ ಮಾಡು. ಭಜನೆ ಎಂದೂ ಬಿಡಬೇಡ. ನಿನ್ನಲ್ಲಿಯೇ ಇರುವ ನಿಜರೂಪ ನೋಡು. ಅದೇ ಪೂರ್ಣೈಕ್ಯದ ಆತ್ಮಜ್ಞಾನ. ನರದೇಹ ಪ್ರಾಪ್ತಿಯಾಗುವದು ಬಹಳ ಅಪರೂಪ. ಆದ್ದರಿಂದ ಅದರ ದುರುಪಯೋಗ ಬೇಡ. ಚಿನ್ಮಯವಾದ ಸ್ಥಾನ ಸೇರುವದೇ ಜೀವನದ ಸರ್ವೋಚ್ಚ ಆದರ್ಶ. ಆಜ್ಞಾಚಕ್ರದ ಹತ್ತರ ಇರುವ ಭ್ರೂಮಧ್ಯದಲ್ಲಿ ದೃಷ್ಟಿ ಇಡು. ಅಲ್ಲಿ ಅತಿ ತೇಜಸ್ವಿಯಾದ ಪ್ರಕಾಶ ಕಾಣುವದು. ಬ್ರಹ್ಮರಂಧ್ರ ಅಂದರೆ ಅಂತರಂಗದ ಕದವನ್ನು ತೆರೆಯುವದೇ ಗುರುತತ್ತ್ವದ ಸಾರ. ಅದರಲ್ಲಿ ಪರಿಪೂರ್ಣ ಆನಂದವಿದೆ (ಕ್ರ. ೧೧). ಭೀಮಾಶಂಕರರು ತಮ್ಮ ಅದ್ಭುತ, ದಿವ್ಯ ಪಾರಮಾರ್ಥಿಕ ಅನುಭವವನ್ನು ವರ್ಣಿಸುವಾಗ ಅವರ ಪ್ರತಿಭೆಯು ಹೊರಸೂಸುತ್ತದೆ. ಸದ್ಗುರುವು ದಯಪಾಲಿಸಿದ ಓಂಕಾರ ಬೀಜಮಂತ್ರವು ಅಂಕುರಿಸಿತು. ಭೃಕುಟಿ ಮಧ್ಯದಲ್ಲಿ ಪ್ರಣವರೂಪವು ಪ್ರಕಟ ವಾಯಿತು. ಶ್ವಾಸ ಶ್ವಾಸದಲ್ಲಿ ಪರಮಾತ್ಮ ರೂಪವು ದೃಢವಾಗಿ ವಾಸ ಮಾಡಿದೆ. ಯೋಗೇಶ್ವರರು ಎಷ್ಟೇ ಕಾಲ ತಪಸ್ಸು ಮಾಡಿದರೂ ಅವರು ಇಂಥ ದಿವ್ಯ ಅನುಭೂತಿಯನ್ನು ಕಾಣರು. ಓಂಕಾರ ಶಬ್ದವು ನೆತ್ತಿಯೊಳು ಸದೈವ ಝೇಂಕರಿಸುತ್ತಿದೆ. ಪರಮೇಶ್ವರನ ಭವ್ಯ ಸ್ವರೂಪವೆನಗೆ ಗೋಚರಿಸಿತು (ಕ್ರ. ೧೨). ಭೀಮಾಶಂಕರರ ಜೋಗುಳ ಪದಗಳಲ್ಲಿ, ಮಂಗಳಾರತಿಗಳಲ್ಲಿ

ಕೂಡ ಪರಮಾರ್ಥ ತುಂಬಿದೆ. ಮಹಾರೂಪಕದಲ್ಲಿರುವ ಜೋಗುಳ ಪದ ನೋಡೋಣ. ತನ್ನ ಪಾರಮಾರ್ಥಿಕ ಸಾಧನೆ ಹೇಗೆ ನಡೆದಿದೆ ಇದರ ವರ್ಣನೆ ಯಿದೆ. ದೇಹವೇ ತೊಟ್ಟಿಲ. ಅಷ್ಟ ಸಿದ್ಧಿಗಳೆಂಬ ಕೊರೆಸಿದ ಬಡ್ಡೆಗಳಿಂದ ಆ ತೊಟ್ಟಿಲು ಮಾಡಲ್ಪಟ್ಟಿದೆ. ವೇದಗಳೆಂಬ ನಾಲ್ಕು ಕಾಲು ಅದಕ್ಕೆ. ಅಷ್ಟ ತತ್ತ್ವವೆಂಬ ಹಗ್ಗದಿಂದ ಕಟ್ಟಿದ ಆ ತೊಟ್ಟಿಲಲ್ಲಿ ಅರಿವು ಎಂಬ ಹಾಸಿಗೆ. ಕರ್ಮ, ಜ್ಞಾನ, ಭಕ್ತಿ, ಧ್ಯಾನ ಎಂಬ ಸಾಧನೆಗಳ ನುಲಿಗಳನ್ನು ಹೆಣೆದು ಅವುಗಳ ತುದಿಗೆ ಬೋಧ ವೆಂಬ ಗಂಟು ಕಟ್ಟಿದೆ. ಜ್ಯೋತಿ ಪ್ರಕಾಶವೇ ಬುಟ್ಟಿ, ಅಂದರೆ ಆವರಣ ಅಥವಾ ಸಂರಕ್ಷಿಸುವ ಕವಚ ; ಅನಾಹತನಾದವೆಂಬ ಗೆಜ್ಜೆಗಳ ಮಂಜುಳ ಧ್ವನಿಯಿದೆ. ಕಾಲಿಗೆ ಯೋಗದ ಪಾಶವಿದೆ. ಆದಿಗುರುವು ಅಲ್ಲಿ ಪವಡಿಸಿರುವ. ತೊಟ್ಟಿಲದ ಮೇಲೆ ಕಟ್ಟಿದ ಮಂಟಪಾಕಾರದ ಆಟಿಕೆಯಿದೆ. ಅದರ ಕಡೆಗೆ ಆದಿಗುರುವಿನ ಲೀಲಾದೃಷ್ಟಿಯಿದೆ. ಕುಂಡಲಿನೀ ಶಕ್ತಿಯು ಮೂಲಾಧಾರದಿಂದ ಬ್ರಹ್ಮರಂಧ್ರದ ವರೆಗೆ ಮುಟ್ಟಿದೆ. ಇದು ಪರಾನಂದದ, ನಿಃಶಬ್ದದ ಅವಸ್ಥೆ. ಇಂದ್ರಿಯ, ಮನ ಬುದ್ಧಿಗಳಿಗೆ ನಿಲುಕದ ನಿತ್ಯ ತತ್ತ್ವದೊಡನೆ ಐಕ್ಯವಿದೆ. ಜಾಗ್ರತ್, ಸ್ವಪ್ನ, ಸುಷುಪ್ತಿ ಈ ಮೂರೂ ಅವಸ್ಥೆ ಮೀರಿ ತುರ್ಯಾವಸ್ಥೆಯಲ್ಲಿರುವ ಪ್ರಕಾಶಮಯನ ಆನಂದ ಗೀತ ನಡೆದಿದೆ. ವೈರಾಗ್ಯ ಹಾಗೂ ಭಕ್ತಿಗೆ ಅವನು ದೊರೆಯು ವನು. ಅವನು ಸರ್ವವೃತ್ತಿರಹಿತನು. ಸರ್ವ ಕರ್ತೃತ್ವವನ್ನು ಈಶ್ವರಾರ್ಪಣ ಮಾಡಿದ ಆದಿಗುರುವು ನಮ್ಮನ್ನು ಪಾಲಿಸಲಿ (ಕ್ರ. ೧೩). ಪರತರ ಪರವಸ್ತುವೇ ಸಗುಣ ಅವತಾರ ಧರಿಸಿ ತುಂಗಭಧ್ರಾ ನಿಲಯನಾಗಿ ಸಜ್ಜನರನ್ನು ಪಾಲಿಸುವನು. ಆ ಪರತತ್ತ್ವವೇ ಬ್ರಹ್ಮಾಂಡದ ಉತ್ಪತ್ತಿ, ಸ್ಥಿತಿ, ಲಯಕ್ಕೆ ಕಾರಣವು. ಆ ಪರತತ್ತ್ವಕ್ಕೆ ಜಯ ಮಂಗಳ (ಕ್ರ. ೧೪). ಮುಂದಿನ ಮಂಗಳಾರತಿಯಲ್ಲಿ ಸದ್ಗುರುವಿನ ಪಾದತೀರ್ಥದ ಮಹಿಮೆಯನ್ನು ವರ್ಣಿಸಲಾಗಿದೆ. ತಾಪತ್ರಯ, ಜನ್ಮ – ಮರಣಗಳ ದುಃಖ, ಸರ್ವ ಪಾಪ ಇವೆಲ್ಲವುಗಳನ್ನು ಹರಿಸುವದು ಈ ಪವಿತ್ರ ಪಾದೋದಕ, ಜ್ಞಾನ ವೈರಾಗ್ಯವನ್ನು ಪಾಲಿಸಿ ಈ ವಿಶ್ವದಲ್ಲಿ ತೋರುವ ೨೫ ತತ್ತ್ವಗಳನ್ನು ಪಾವನ ಮಾಡುವದು ಈ ತೀರ್ಥ. ದೇವ ದೇವತೆಗಳನ್ನು, ಬ್ರಹ್ಮಾಂಡಗಳನ್ನು ಉದ್ಧರಿಸುವ ಅಲೌಕಿಕ ಸಾಮರ್ಥ್ಯ ಈ ತೀರ್ಥದಲ್ಲಿದೆ (ಕ್ರ. ೧೫). ಈ ಸಂಪ್ರದಾಯದ ಪುಣ್ಯ ಪುರುಷರಾದ ರಾಮನಾಥ ಅಥವಾ ಸಿದ್ಧಬಸವ ಇವರಿಗೆ ಮಂಗಳಾರತಿಯ ಪದ ಬಂದಿದೆ. ಈ ಪದಕ್ಕೆ ಸಂಪ್ರದಾಯ ದಲ್ಲಿ ಮಹತ್ವದ ಸ್ಥಾನವಿದೆ. ಸದ್ಗುರುವಿಗೆ ಆದಿ, ಮಧ್ಯಾವಸಾನವಿಲ್ಲ. ಆತನು ನಾದ, ಬಿಂದು, ಕಲಾತೀತ. ಭಕ್ತರ ಅನುಗ್ರಹಕ್ಕಾಗಿಯೇ ಅವನ ಅವತಾರ.

ಅಜ್ಞಾನ, ಅಂಧಃಕಾರ ಈ ಎಲ್ಲ ದೋಷ ರಾಶಿಯನ್ನು ಅವನ ಬೋಧವು ನಾಶ ಮಾಡುವದು. ಅದು ಜನ್ಮ- ಮರಣ ಬಂಧನವನ್ನು ಹರಿಯುವದು. ಅವನು ಪ್ರತ್ಯಕ್ಷವಾದಂಥ ಪರಬ್ರಹ್ಮನು. ಸಾಯೋಜ್ಯ ಮುಕ್ತಿದಾಯಕನು. ಅವನ ಕೀರ್ತಿಯನ್ನು ಸದೈವ ಪಾಡು (ಕ್ರ. ೧೬). ಇನ್ನೊಂದು ಗೀತದಲ್ಲಿಯೂ ಮಹಾಪುರುಷರ ಸ್ತುತಿಯಿದೆ. ನಿರ್ಗುಣ, ನಿರಾಕಾರ ಪರಮಾತ್ಮನು ಬ್ರಹ್ಮನಾಗಿ ವಿಶ್ವದ ಉತ್ಪತ್ತಿ ಮಾಡಿದನು, ವಿಷ್ಣುವಾಗಿ ಸಲುಹುವನು ; ಕಾಲರುದ್ರನಾಗಿ ಅದನ್ನು ಸಂಹರಿಸುವನು. ಇಂಥ ಮಾಹಾತ್ಮ್ಯೆಯ ಸಿದ್ಧಬಸವನೇ ಬಾಲಬ್ರಹ್ಮ ರೂಪದಿಂದ ಜಗದೊಳಗೆ ಭಕ್ತೋದ್ಧಾರಕ್ಕಾಗಿ ಅವತರಿಸಿರುವನು (ಕ್ರ. ೧೭). ಮುಂದಿನ ಎರಡು ಪದಗಳು ಭೃಂಗವಳಿಯಲ್ಲಿ ನಿಂತ ಸದ್ಗುರುನಾಥನಿಗೆ ಮಂಗಳಾರತಿಯ ಗೀತಗಳು (ಕ್ರ. ೧೮, ೧೯). ನಂತರದ ಗೀತಗಳಲ್ಲಿ ಶಂಕರನ ಆರತಿಯಿದೆ (ಕ್ರ. ೨೦, ೨೧). ಆರತಿಗೆಯೇ ಆರತಿ ಬೆಳಗಿತು, ಈ ದಿವ್ಯ ಅನುಭವದ ಮಂಗಲ ಗೀತ ಕೇಳಿರಿ. ಪರಂಜ್ಯೋತಿಯು ಆತ್ಮತೇಜಕ್ಕೆ ಆರತಿ ಬೆಳಗುತ್ತಿದೆ. ಇದು ಸ್ವಪ್ರಕಾಶದ ಆನಂದ. ಈ ಜ್ಞಾನ ಪ್ರಕಾಶದಿಂದ ಅರವು ಮರವು ಇಲ್ಲವಾದವು. ಶುದ್ಧ ಚೈತನ್ಯ ಮಾತ್ರ ಉಳಿಯಿತು. ಶತಕೋಟಿ ಸೂರ್ಯ-ಚಂದ್ರ ಪ್ರಭೆ ಒಟ್ಟಿಗೆ ಬಂದು ಬ್ರಹ್ಮಾಂಡವನ್ನೆಲ್ಲ ವ್ಯಾಪಿಸಿತು. ನಿತ್ಯ ನಿರಂಜನ ನಿಃಶಬ್ದ ಅವಸ್ಥೆಯಲ್ಲಿ ಪರಂಜ್ಯೋತಿ ಅಂದರೆ ಆತ್ಮಜ್ಯೋತಿಯು ಬೆಳಗುತ್ತಿದೆ. ಪಿಂಡ-ಬ್ರಹ್ಮಾಂಡವನ್ನು ವ್ಯಾಪಿಸಿ ಆ ಪರಮ ಪ್ರಕಾಶವು ಚಿದ್‌ಗಗನ ವನ್ನೇ ನುಂಗಿತು (ಕ್ರ. ೨೨). ವಾರ್ಧಿಕ ಷಟ್ಪದಿಯಲ್ಲಿರುವ ಮುಂದಿನ ಆರು ಶ್ಲೋಕಗಳಲ್ಲಿ ಮೊದಲು ಗಣೇಶ ಸ್ತವನವಿದೆ. ಆ ಮೇಲೆ ಸರಸ್ವತಿ ಸ್ತವನ, ನಂತರ ಸದ್ಗುರುವಿನ ಸ್ತುತಿಯಿದೆ. ಕೊನೆಯ ಚರಣದಲ್ಲಿ 'ಮಾಡಿ ರಚಿಸುವ', ಈ ಶಬ್ದಗಳಿರುವದರಿಂದ ಈ ೬ ಶ್ಲೋಕಗಳು ಯಾವದೋ ಒಂದು ಕಾವ್ಯದ ನಾಂದಿ ಅಂದರೆ ಪ್ರಾರಂಭದ ನುಡಿಗಳಿರಬಹುದು (ಕ್ರ. ೨೩). ಮುಂದಿನ ಮೂರು ಗೀತಗಳಲ್ಲಿ, ಕ್ರಮವಾಗಿ ಯತಿವರ್ಯ ನರಸಿಂಹ ಸರಸ್ವತಿಗಳ ಸ್ತುತಿ, ನೆಲವಿಗಿ (ತಾ. ಜೇವರಗಿ, ಜಿ. ಗುಲ್ಬರ್ಗಾ)ಯ ಪ್ರಾಣದೇವರ ಸ್ತುತಿ, ಸಿಂಧಾಪುರದ (ಸಿಂದಗಿಯ) ಸಂಗಮನಾಥನ ಸ್ತುತಿ ಇವೆ (ಕ್ರ. ೨೪, ೨೫, ೨೬).

## ಚಕ್ಕಪ್ಪಯ್ಯ

ಇವರ ೪೫ ಗೀತಗಳ ಮುಖ್ಯ ವಿಷಯಗಳೆಂದರೆ – ಅದ್ವೈತ ಸಿದ್ಧಾಂತಗಳ ನಿರೂಪಣೆ, ಸದ್ಗುರು ಸ್ತವನ, ದೇವ ದೇವತೆಗಳ ಸ್ತುತಿ ಹಾಗೂ ಅತೀಂದ್ರಿಯ

ಪಾರಮಾರ್ಥಿಕ ಅನುಭವಗಳು. ಒಂದೆರಡು ಗೀತಗಳಲ್ಲಿ ಹಠಯೋಗ ವಿವರಣೆಯಿದೆ. ನೈತಿಕ ಉಪದೇಶ, ನಾಮಸ್ಮರಣೆಯ ಮಹತ್ವ ಇವೂ ಕೆಲವು ಗೀತಗಳಲ್ಲಿ ಕಾಣುತ್ತವೆ. ಅದ್ವೈತ ತತ್ತ್ವಜ್ಞಾನವು, ಒಂದು ದೃಷ್ಟಿಯಿಂದ ಇವರ ಗೀತಗಳಲ್ಲಿ ಶಿಖರಕ್ಕೆ ಮುಟ್ಟುವದು, ಎಂದರೆ ಅತಿಶಯೋಕ್ತಿ ಆಗಲಿಕ್ಕಿಲ್ಲ. ಏಕಮೇವಾದ್ವಿತೀಯ ತತ್ತ್ವವು ನಿರಾಲಂಬ, ಚಿದಾನಂದ ಘನ ವಸ್ತುವು. ಅದು ಮನ ಬುದ್ಧಿಗೆ ಅಗೋಚರ. ಅದರಲ್ಲಿ ಮಾಯೆಯ ಸ್ಪರ್ಶವೂ ಇಲ್ಲ. ಅದು ಸಪ್ರಪಂಚ, ವಿರಾಟ್ ಹಿರಣ್ಯಗರ್ಭವೂ ಅಲ್ಲ. ಸ್ಥೂಲ ಸೂಕ್ಷ್ಮ ಕಾರಣ ಮಹಾ ಕಾರಣಕ್ಕಿಂತ ಮಿಗಿಲಾದದ್ದು. ಅದರಲ್ಲಿ ವಿದ್ಯೆ ಅವಿದ್ಯೆಯ ಗಲಭೆಯಿಲ್ಲ. ಅದು ಕೇವಲ ಚಿತ್‌ಪ್ರಕಾಶ (ಕ್ರ. ೧). ನಿಜವಾಗಿ ನೋಡಿದರೆ, ಇಲ್ಲದ್ದು ಇಲ್ಲವಾಗಿರಬೇಕು. ಇಲ್ಲದಂಥ ಈ ಪ್ರಪಂಚವು ನಿಜವೆಂದು ತೋರುವದು ಸೋಜಿಗವಲ್ಲವೇ ? ಈ ಶಿಷ್ಯನ ಪ್ರಶ್ನೆಗೆ ಗುರುವಿನ ಉತ್ತರವೆಂದರೆ, ಸತ್ಯವೇ ಅಸತ್ಯದ ಅಧಿಷ್ಠಾನ : ಅದನ್ನು ಆಶ್ರಯಿಸಿಯೇ ಅಸತ್ಯವು ಸತ್ಯವೆಂದು ಭಾಸಮಾನವಾಗುವದು. ಮೃಗಜಲವು ಅಸತ್ಯವಾದದ್ದು ; ಆದರೆ ಸತ್ಯವಾದ ಸೂರ್ಯಕಿರಣದಿಂದ ಸತ್ಯವೆಂದು ತೋರುವದು. ಹಗ್ಗವೇ ಸತ್ಯವಿರಲು, ಅದು ಹಾವು ಎಂದು ಆಭಾಸವಾಗುವದು. ಅದರಂತೆ, ಶಿಂಪು ಬೆಳ್ಳಿಯಂತೆ ಕಾಣುವದು ತೋರಿಕೆ ಮಾತ್ರ. ಅಧ್ಯಾರೋಪ ಅಪವಾದ ಈ ಸಿದ್ಧಾಂತಗಳಿಂದ ನಿಷ್ಪ್ರಪಂಚ ಬ್ರಹ್ಮತತ್ತ್ವವು ಸಪ್ರಪಂಚವಾಗಿ ಕಾಣುತ್ತದೆ (ಕ್ರ. ೨). ಎಲ್ಲಿಯ ವರೆಗೆ ಜೀವಭಾವ ವಿದೆಯೋ, ಅಲ್ಲಿಯ ವರೆಗೆ ಜೀವನ್ಮುಕ್ತಿಯಿಲ್ಲ. ಜೀವಭಾವ ಅಳಿದು, ಶಿವಭಾವ ಪ್ರಕಟವಾಗಲು, ಎಲ್ಲ ಅಜ್ಞಾನ ನಷ್ಟವಾಗಿ ವಿಶ್ವವೆಲ್ಲ ಜ್ಯೋತಿರ್ಮಯವಾಗುವದು. ರಸ, ಬೆಲ್ಲ ಇವೆಲ್ಲ ನಾಮ ರೂಪಗಳು ಮಾತ್ರ. ಬರೀ ಶಬ್ದಗಳು, ಮಾತಿನ ಮೊಟ್ಟೆಗಳು. ಇವೆಲ್ಲವುಗಳ ಮೂಲ ಕಬ್ಬು ಒಂದೇ. ಮುತ್ತುಗಳು ಬೇರೆ ಬೇರೆ ಆಕಾರದವುಗಳಿದ್ದರೂ, ಅವಕ್ಕೆಲ್ಲ ಆಧಾರ ಸ್ವಾತಿ ಬಿಂದುವು. ಅದರಂತೆ ಸೃಷ್ಟಿಯಲ್ಲಿ ನಾನಾತ್ವವಿದ್ದರೂ ಅದರ ಅಧಿಷ್ಠಾನ ಬ್ರಹ್ಮ ಒಂದೇ ನಿತ್ಯ ನಿಜವಾದ ತತ್ತ್ವ (ಕ್ರ. ೩). ಮುಂದಿನ ಗೀತದಲ್ಲಿ 'ತತ್ತ್ವಮಸಿ' ಈ ಶ್ರುತಿವಾಕ್ಯದ ವಿವರಣೆಯಿದೆ. ನೀನೇ ಪರಬ್ರಹ್ಮ, ನೀನೇ ಪರಾತ್ಪರ ಸತ್ಯ. ಪಾರಮಾರ್ಥಿಕ ದೃಷ್ಟಿಯಿಂದ, ನೀನು ಸ್ವಯಂಭೂ. ನಿನಗೆ ಕಾರಣವೆಂದು ಯಾವದೂ ಇಲ್ಲ. ನೀನೇ ಕಾರಣ ಕಾರ್ಯಾ ತೀತ ಸತ್ತತ್ತ್ವ. ಅನೇಕ ಕೊಡಗಳಲ್ಲಿ ಸೂರ್ಯನ ಪ್ರತಿಬಿಂಬ ಬೀಳುತ್ತದೆ. ಆದರೆ ಸೂರ್ಯನೊಬ್ಬನೇ ಸತ್ಯ. ಪ್ರತಿಬಿಂಬಗಳು ಕೂಡ ಉಪಾಧಿಯ ಮೂಲಕ ಅನೇಕವಾಗಿ ತೋರುತ್ತವೆ. ಆಭರಣಗಳು ಭಿನ್ನ ಭಿನ್ನವಿದ್ದರೂ ಅವುಗಳ ಮೂಲ

ದ್ರವ್ಯ ಬಂಗಾರ ಒಂದೇ. ಆಭರಣಗಳನ್ನು ಕರಗಿಸಲು ಅವುಗಳ ನಾಮ ರೂಪಗಳು ಅಡಗುತ್ತವೆ. ಮೂಲ ವಸ್ತು, ಬಂಗಾರ ಒಂದೇ ಉಳಿಯುತ್ತದೆ. ಮಾಯೋಪಾಧಿಯಿಂದ ನಿರ್ಗುಣ ಬ್ರಹ್ಮವು ಶಿವವೆಂದು ಕಾಣುತ್ತದೆ. ಅವಿದ್ಯೋಪಾಧಿಯಿಂದ ಜೀವವೆಂದು ಭಾಸವಾಗುತ್ತದೆ. ಈ ಮಾಯಾ-ಅವಿದ್ಯಾ ಪರದೆಯು ಸರಿಯಲು ಕೇವಲ ನಿಜರೂಪ, ನಿತ್ಯ ತತ್ತ್ವ ಒಂದೇ ಉಳಿಯುತ್ತದೆ (ಕ್ರ. ೪). ಮುಂದಿನ ಪದದಲ್ಲಿಯೂ ಮೇಲಿನ ಸಿದ್ಧಾಂತವನ್ನು ಉದಾಹರಣೆಗಳಿಂದ ವಿವರಿಸಲಾಗಿದೆ (ಕ್ರ. ೫). ಕರ್ಮೇಂದ್ರಿಯ, ಜ್ಞಾನೇಂದ್ರಿಯ, ಅಂತಃಕರಣಗಳೆಲ್ಲ ಅಂದರೆ ದೇಹದ ವ್ಯಾಪಾರಗಳೆಲ್ಲ ಆತ್ಮನ ಪ್ರೇರಣೆಯಿಂದಲೇ ಕಾರ್ಯಪ್ರವೃತ್ತವಾಗುತ್ತವೆ. ಇದನ್ನು ತಿಳಿಯದೆ ದೇಹಾಭಿಮಾನದಿಂದ ಹೆಮ್ಮೆ ಪಡುವವರೆಲ್ಲ ಮೂಢ ಮತಿಗಳು. ದೇಹವು ಜಡ ; ಆತ್ಮನು ಚೈತನ್ಯ, ಕಬ್ಬಿಣವನ್ನು ಅಗ್ನಿಯಲ್ಲಿ ಹಾಕಲು ತಪ್ತವಾಗಿ ಅಗ್ನಿಯಂತೆ ಕೆಂಪು ಬಣ್ಣದ್ದು ಆಗುತ್ತದೆ. ಅದಕ್ಕೆ ಹೊಡೆಯಲು ನಾವು ಕಬ್ಬಿಣಕ್ಕೆ ಹೊಡೆಯುತ್ತೇವೆ ಹೊರತು ಅಗ್ನಿಗಲ್ಲ (ಕ್ರ. ೬). ಮುಂದಿನ ಪದದಲ್ಲಿ ಹಠಯೋಗದ ಪ್ರಕ್ರಿಯೆಯನ್ನು ನೋಡುತ್ತೇವೆ. ಅಷ್ಟಕಮಲದ ಮಧ್ಯದಲ್ಲಿ ಸ್ಪಷ್ಟವಾದ ದ್ವಿದಲ ಕಮಲ (ಅಗ್ನಿ ಚಕ್ರ) ಇದೆ. ಇಲ್ಲಿಂದ ಬ್ರಹ್ಮರಂಧ್ರದವರೆಗೆ ಹಾದಿ ಇದೆ. ಆ ಹಾದಿಯಲ್ಲಿ ತ್ರಿಕೂಟ, ಶ್ರೀಹಾಟ, ಗೋಲ್ಹಾಟ, ಔಟಪೀಠ, ಭ್ರಮರ ಗುಂಫಾ ಇವೆ. ಈ ಸ್ಥಾನದಲ್ಲಿ ಧ್ಯಾನ ಏಕಾಗ್ರವಾದರೆ ಶಾಂಭವಿದೇವಿಯು ಪ್ರತ್ಯಕ್ಷವಾಗುವಳು (ಕ್ರ. ೭). ತ್ರಿವಿಧ ತಾಪದಿಂದ ಉದ್ವಿಗ್ನನಾದ ಸಾಧಕನು ಈಶ್ವರನಿಗೆ ಮೊರೆಹೋಗುತ್ತಾನೆ. ವಿಷಯದೊಳಗೆ ನನ್ನ ಮನ ಬುದ್ಧಿಗಳು ತಲ್ಲೀನವಾಗಿವೆ. ಸಂಕಟ ಪಡುತ್ತಿರುವೆ. ಪಾರಾಗುವದು ಹೇಗೆ ? ಭವಸಾಗರದಲ್ಲಿ ನನ್ನ ಜೀವನದ ಹರಗೋಲು ಸಾಗಿದೆ. ಅದನ್ನು ತೀರಕ್ಕೆ ಹಚ್ಚು (ಕ್ರ. ೮). ತ್ರಿಜಗವನ್ನು ನೀನು ರಕ್ಷಿಸುವೆ. ಪ್ರಹ್ಲಾದ, ದ್ರೌಪದಿ, ಗಜೇಂದ್ರ, ಅಂಬರೀಷ, ಅಂಗದ, ವಿಭೀಷಣ, ಹನುಮಂತ, ರುಕ್ಮಾಂಗದರನ್ನು ಅವರ ಆಪತ್ಕಾಲದಲ್ಲಿ ಪಾಲಿಸಿದಂತೆ ನನ್ನನ್ನೂ ಪಾಲಿಸು, ಕೈಬಿಡಬೇಡ (ಕ್ರ. ೯). ಮಡದಿ ಮಕ್ಕಳು ಇವರಲ್ಲಿಯೇ ಆಸಕ್ತಿ ಇರಲು, ಕಾಮ ವಿಕಾರದ ಬಲೆಯಲ್ಲಿ ಸಿಲುಕಿರಲು, ನಾನೀನೆಂಬ ಅಭಿಮಾನ ಉಳಿದಿರಲು, ಆತ್ಮಾನುಭವವೆಲ್ಲಿ ? ಇಂಥವರ ದೃಷ್ಟಿಗೆ ಘನವಸ್ತು ಎಂದಿಗೂ ಕಾಣದು (ಕ್ರ. ೧೦). ಸದ್ಗುಣಗಳ ಭದ್ರವಾದ ಆಧಾರದ ಮೇಲೆ ಆಧ್ಯಾತ್ಮಿಕ ಜೀವನ ನಿಂತಿದೆ. ಆದ್ದರಿಂದ ಸದ್ದೈವ ನಿನ್ನಲ್ಲಿ ನಮ್ರತೆಯಿರಲಿ. ತತ್ತ್ವಮಸಿ ಈ ಮಹಾವಾಕ್ಯದ ಸತ್ಯತೆಯನ್ನು ಅನುಭವಿಸು. ಬ್ರಹ್ಮಾನಂದದಲ್ಲಿ ಲೋಲ್ಯಾಡು. ಸಚ್ಚಿದಾನಂದ ಘನ ವಸ್ತು ನೀನಾಗು. ಭಕ್ತಿರಸಾಮೃತ ಸೇವಿಸಿ

ತೃಪ್ತನಾಗು. ಗುರುಭಕ್ತಿ ಪಡೆದು ಎಲ್ಲ ಕಾರ್ಯದಲ್ಲಿ ಯಶಸ್ವಿಯಾಗು (ಕ್ರ. ೧೧). ವಿವೇಕದಿಂದ ಧ್ಯಾನ ಸಾಧನ ಮಾಡು. ಮೋಹದ ಶೃಂಖಲೆಯನ್ನು ಕಡಿದು ಹಾಕು. ಇತರ ಭಾವಗಳನ್ನು ಅಳಿದು, ಪರಮಾತ್ಮನೊಬ್ಬನೇ ನಿಜವಸ್ತು ಎಂದು ತಿಳಿದು, ಪರಾಶಾಂತಿ ಸುಖವನ್ನು ಪಡೆ. ಸದ್ಗತಿಯನ್ನು ಪಡೆ. ನಾನಾ ಜನ್ಮ ಧರಿಸಿ ಬಹುಕ್ಲೇಶ ಬಟ್ಟೆ. ಗುರುಕರುಣೆ ದೊರಕಿಸಿ ನಿನ್ನ ನಿಜರೂಪ ನೋಡು. ಸ್ಥೂಲ, ಸೂಕ್ಷ್ಮ, ಕಾರಣ ಶರೀರ ದಾಟಿ ಉನ್ಮನಿ ಅವಸ್ಥೆಯಲ್ಲಿ ಸಾಕ್ಷಿ ಪುರುಷ ಶಂಕರನ ಲೀಲೆ ನೋಡು (ಕ್ರ. ೧೨). ಜಕ್ಕಪ್ಪಯ್ಯನವರು ಸದ್ಗುರುಗಳ ಲಕ್ಷಣಗಳನ್ನು ಹೇಳುತ್ತಾರೆ. ಸದ್ಗುರುವನ್ನು ಮರ್ತ್ಯ ಮಾನವನೆಂದು ತಿಳಿಯುವವರು ನರರಿದ್ದೂ ಕುರಿಗಳಂತೇ ಅವರ ಗತಿ. ಇಂಥ ಪಾತಕಿಗಳ ಜೀವನವೇ ನಾಶ. ನಾನಾ ಯೋನಿಗಳಲ್ಲಿ ಬರುವ ಈ ಕ್ಷುದ್ರರು ಗುರುವಿನ ಸ್ವರೂಪವನ್ನೆಂದೂ ಕಾಣರು. ಹೀನ ಮನದವರಿಗೆ ಗುರುಶಂಕರನ ಕೃಪೆಯಾಗುವದೆಂತು ? (ಕ್ರ. ೧೩). ಪ್ರತ್ಯಕ್ಷ ಪರಮಾತ್ಮನೇ ಎಲ್ಲರನ್ನು ಅನುಗ್ರಹಿಸಲು ಗುರು ರೂಪದಿಂದ ಜಗದೊಳಗೆ ಬಂದಿರುವನು. ಅವನು ಎಂದೆಂದಿಗೂ ಸಾಮಾನ್ಯ ನರನಲ್ಲ. ಈ ವಿಷಯದಲ್ಲಿ ಯಾವ ಸಂದೇಹವೂ ಬೇಡ. ಗುರುಕೃಪೆಯಿಲ್ಲದೆ ಮನಃಶಾಂತಿ ದೊರೆಯದು (ಕ್ರ. ೧೪). ಸದ್ಗುರುವು ಮಾಡಿದ ಅನಂತ ಉಪಕಾರಕ್ಕೆ ಪ್ರತಿ ಉಪಕಾರ ಮಾಡುವದು ಎಂದೂ ಸಾಧ್ಯವಿಲ್ಲ. ಎಂಬತ್ತು ನಾಲ್ಕು ಲಕ್ಷ ಜೀವ ಯೋನಿಗಳಲ್ಲಿ ನಾನು ದೇಹ ತಾಳಿ ವಿಷಯಗಳ ಬೆನ್ನು ಹತ್ತಿದೆ. ಮೀನವು ನೀರಿನ ಮೂಲಕವೇ ಜೀವಿಸುತ್ತಿದ್ದರೂ, ನೀರೇ ನನ್ನ ಜೀವನದ ಆಧಾರ, ಇದು ಅದಕ್ಕೆ ತಿಳಿಯದು. ಅದರಂತೆ ಎಲ್ಲೆಡೆಯಲ್ಲಿ ಪರಮಾತ್ಮನು ವ್ಯಾಪಿಸಿದ್ದರೂ ಅವನು ನನ್ನ ಮನ ಮೀನಕ್ಕೆ ಗೋಚರವಾಗಿರಲಿಲ್ಲ. ಆದರೆ ದಯಾಘನ ಗುರುವು ಚಿನ್ಮಯ ರೂಪವನ್ನು ಕಣ್ಣೆದುರು ಪ್ರತ್ಯಕ್ಷ ತೋರಿಸಿದನು (ಕ್ರ. ೧೫). ಸದ್ಗುರು ಸ್ವಾಮಿಯ ಅನುಗ್ರಹವಿರಲು ಕಾಮದ ಪೀಡೆಯೆಲ್ಲಿಯದು ? ಗುರುನಾಮ ಭಾಂಡಾರವಿರಲು ನಾನು ದರಿದ್ರನೆಂಬ ಭಾವನೆ ಯಾಕೆ ? ಅನಾಥ ಬಂಧುವು ಯಾವಾಗಲೂ ರಕ್ಷಿಸುತ್ತಿರಲು ಇತರರ ಸಹಾಯಕ್ಕಾಗಿ ದುಡುಕುವ ಪ್ರಯಾಸವೇಕೆ ? 'ಗುಡ್ಡದ್ವಾಂಗ ಗುರುಶಂಕರನಿರಲು ದುಡ್ಡಿನ ಹಂಗ್ಯಾಕೆ' ? (ಕ್ರ. ೧೬). ಕಾಮನನ್ನು ಸುಟ್ಟಂಥ, ಕೋಟಿಚಂದ್ರ ಪ್ರಕಾಶವುಳ್ಳ ಮುಕ್ಕಣ್ಣನಾದ ಶಂಕರಲಿಂಗವು ಬಂದಿದೆ. ಅವನು ಸರ್ವವ್ಯಾಪಿ. ಪರಾತ್ಪರ ಪರಮ ಪುರುಷ. ಸಜ್ಜನರಿಗೆ ನಿಜವಾದ ಶಾಶ್ವತ ಸ್ಥಾನವನ್ನು ಕೊಡುವ ಗುರುಶಂಕರಲಿಂಗ ಬಂದಿರುವನು (ಕ್ರ. ೧೭). ಗುರುವು ಬೋಧಾಮೃತ ಕೊಟ್ಟು, ಶಕ್ತಿಯನ್ನು

ಒದಗಿಸಿ, ವಿರಕ್ತಿ, ದಯಪಾಲಿಸಿ ಅವ್ಯಕ್ತ ಪರಮೇಶ್ವರನ ರೂಪವನ್ನು ತೋರಿಸಿ, ಭಕ್ತರಿಗೆ ಮುಕ್ತಿ ಕೊಡುವನು ಅವರ ಭೇದ ಬುದ್ಧಿಯನ್ನು ಕಳೆಯುವನು. ಎಲ್ಲವೂ ಸದ್ಗುರು ಅಂದರೆ ಬ್ರಹ್ಮಮಯವು. ಅವನ ಹೊರತು ಮತ್ತೇನೂ ಶಾಶ್ವತ ವಸ್ತು ಇಲ್ಲ. ಅವನೇ ಜಗದೋದ್ಧಾರಕನು (ಕ್ರ. ೧೮). ಪರಮೇಶ್ವರನೇ ಪರಮ ಪ್ರೇಮದಿಂದ ಗುರುರೂಪ ಧರಿಸಿ, ಭಕ್ತರ ಕ್ಲೇಶ ಪರಿಹರಿಸಿ ಸ್ಥಿರಮುಕ್ತಿಯನ್ನು ಕೊಡುವನು (ಕ್ರ. ೧೯). ಸದ್ಗುರುವು ಸ್ವಶುದ್ಧ ಶುದ್ಧನು, ಸ್ವಬುದ್ಧ ಬುದ್ಧನು, ಆದಿಮಧ್ಯಾವಸಾನ ರಹಿತನು. ನಾದ ಬಿಂದು ಕಲಾತೀತನು. ಅವನು ಶ್ರುತಿ-ಸ್ಮೃತಿಗಳ ಸಾರ ತಿಳಿದ ನಿಶ್ಚಲ ಮತಿಯು. ಸಾಧು ಸಂತ ಮಹಂತರನ್ನು ಧ್ಯಾನಿಸುವನು. ಶಿಷ್ಯನಿಗೆ ವರಬೋಧವನ್ನು ನೀಡುವನು. ವಿಶ್ವತೋ ಮುಖ ; ವಿಶ್ವತೋ ನೇತ್ರನು ; ವಿಶ್ವಪಾಣಿಪಾದ ಶೀರ್ಷನು. ವಿಶ್ವದೊಳ ಹೊರಗೆಲ್ಲ ಏಕಮಯನು. ವಿಶ್ವವನ್ನುದ್ಧರಿಸಲು ಅವತರಿಸಿದ ಪರಮ ಪುರುಷನು. ಈತನೇ ಸಾಕ್ಷಾತ್ ಪರಮೇಶ್ವರನು. ಈ ಆರತಿಯ ಪದದಲ್ಲಿ ಭೀಮಾಶಂಕರರ ಪಾರಮಾರ್ಥಿಕ ಜೀವನ ಹಾಗೂ ಅವರು ತೆಗೆದುಕೊಂಡ ಸಂಜೀವನ ಸಮಾಧಿಯ ಸಂಕ್ಷೇಪದಲ್ಲಿ ಉಲ್ಲೇಖವಿದೆ (ಕ್ರ. ೨೦). ಮುಂದಿನ ಪದದಲ್ಲಿ ಸಂಪ್ರದಾಯದ ಮೂಲ ಪುರುಷರಿಂದ ಭೀಮಾಶಂಕರರ ವರೆಗೆ ಇರುವ ಮಹಾತ್ಮರ ಸಂಕ್ಷಿಪ್ತ ಇತಿಹಾಸವಿದೆ (ಕ್ರ. ೨೧). ನಾಮ ಸ್ಮರಣೆಯ ಬಗ್ಗೆ ಇರುವ ಗೀತಗಳು ಅತಿ ಉದ್ಬೋಧಕವಾಗಿವೆ. ನಿತ್ಯನಿಜವಾದ ಘನ ವಸ್ತುವು ಭಕ್ತಿಯಿದ್ದಲ್ಲಿ, ಗುರುಬೋಧವಿದ್ದಲ್ಲಿ ಹಾಗೂ ಸತ್ಸಂಗವಿದ್ದಲ್ಲಿ ಪ್ರಕಟವಾಗುವದು. ಸದ್ಭಕ್ತಿಯಿಂದ ನಾಮಸ್ಮರಣೆ ಮಾಡಬೇಕು. ಕಿವಿ ಬಾಯಿಗಳೆಂಬ ಬರಣಿಯಲ್ಲಿ ಶುದ್ಧ ಮನವೆಂಬ ಹಗ್ಗದಿಂದ ಮಂಥನ ನಡೆಯಬೇಕು. ಅಂದರೆ ಶ್ವಾಸದಲ್ಲಿ ನಾಮ ಪೋಣಿಸ ಬೇಕು (ಕ್ರ. ೨೨). ಕಲ್ಲಿನಂತೆ ಶಿಷ್ಯನಿದ್ದರೂ ಸದ್ಗುರುವಿನ ಬೋಧಾಮೃತ ಸ್ಪರ್ಶದಿಂದ, ಬಂಗಾರ ಅಂದರೆ ಅಮೋಲಿಕ ವಸ್ತುವಾಗುತ್ತಾನೆ (ಕ್ರ. ೨೩). ಸದ್ಗುರುವಿನ ಪ್ರಿಯ ಶಿಷ್ಯನೆಂದರೆ ದೇವರಿಗೆ ಮೀಸಲಾದ ಹೋರಿ. ಇಂಥ ಗೂಳಿಯನ್ನು ಎದುರಿಸ ಬೇಡ. ನಿಜವಾಗಿಯೂ ನೀವು ಆ ಗೂಳಿಯನ್ನು ಎದುರಿಸಿದರೆ ಅದು ನಿಮ್ಮ ಬರು-ಹೋಗುಗಳನ್ನು (ಜನ್ಮ ಮರಣಗಳನ್ನು) ನಿಲ್ಲಿಸಿಬಿಡುವದು. ಅದು ಷಡ್ರಿಪುಗಳನ್ನು ಪುಡಿ ಪುಡಿ ಮಾಡಿ ಅಷ್ಟಮದ ಗಳನ್ನು ಬಂಧಿಸಿ, ದ್ವೈತ ಭಾವವನ್ನು ಬದಿಗಿರಿಸಿ, ಒಂದೇ ಸತ್ ತತ್ವ ಅಂದರೆ ಪರಮಾತ್ಮನೊಡಗೂಡಿ ಆರ್ಭಟಿಸುತ್ತದೆ. ಪ್ರೇಯ (ವಿಷಯಸುಖ)ವನ್ನು ಬಿಟ್ಟು ಶ್ರೇಯ (ಆತ್ಮಕಲ್ಯಾಣ)ವನ್ನು ಸ್ವೀಕರಿಸುತ್ತದೆ. ಷಟ್-ಚಕ್ರ ಭೇದಿಸಿ, ಅಮೃತರಸ

ಸೇವಿಸಿ ಬ್ರಹ್ಮರಂಧ್ರದಲ್ಲಿ ಸೇರುತ್ತದೆ (ಕ್ರ. ೨೪). ಮುಂದೆ ನಾವು ಓದುತ್ತೇವೆ, ಒಂದು ಅತ್ಯುಚ್ಚ ಜೋಗುಳ ಗೀತೆ. ಪಿಂಡಾಂಡದಲ್ಲಿ ಅಂದರೆ ಜೀವಾತ್ಮನಲ್ಲಿ ಬ್ರಹ್ಮಾಂಡವನ್ನು ಅಂದರೆ ಪರಮಾತ್ಮನನ್ನು ತೋರಬೇಕೆಂದು, ಹಾಗೂ ಶ್ರೇಷ್ಠ ಭಕ್ತರ ಪ್ರೇಮಕ್ಕೆಂದು ನಾಮರೂಪ ಧರಿಸಿ, ಇಳೆಯಲ್ಲಿ ಅವತರಿಸಿದ ದತ್ತಾತ್ರೇಯನಿಗೆ ಜೋ ಜೋ. ಈ ತ್ರಿಮೂರ್ತಿಯೇ ಸೃಷ್ಟಿ, ಸ್ಥಿತಿ, ಲಯಕ್ಕೆ ಕಾರಣ. ಅವನ ಸ್ಫುರಣ ಮಾತ್ರದಿಂದ ಮಾಯೆಯೆಲ್ಲ ಅಡಗಿ ವಿಶ್ವವೆಲ್ಲ ಅವನ ಚಿದ್ವಿಲಾಸವಾಗುತ್ತದೆ. ಅವನ ಆನಂದವೆಂದರೆ ಉಚ್ಚ ಬೋಧಾನಂದ, ಅಂದರೆ ಚಿದಾನಂದ. ಅವನು ನಿತ್ಯ ಶುದ್ಧ, ಬುದ್ಧ ಸರ್ವಾಂತರ್ಯಾಮಿ. ಅವನೇ ಶಿವಶಕ್ತಿಗಳ ಐಕ್ಯ. ಅಪರೋಕ್ಷಾನುಭೂತಿಯಿಂದಲೇ ಅವನ ಜ್ಞಾನವು ನಮಗಾಗುವದು. ಭಕ್ತರ ಕ್ಲೇಶನಾಶನಿಗೆ ಜೋ ಜೋ (ಕ್ರ. ೨೫). ನಂತರದ ಗೀತವು ಭಗವಂತನ ದಶಾವತಾರ ವರ್ಣನೆಯ ಗೀತವು (ಕ್ರ. ೨೬). ಮುಂದಿನ ೧೩ ಗೀತಗಳಲ್ಲಿ ದೇವ ದೇವತೆಗಳ ಹಾಗೂ ಯತಿ ಮಹಂತರ ಸ್ತವನವಿದೆ. ಕ್ರಮಾಂಕ ೨೭ ರಲ್ಲಿ ಯಲಗೂರ ಹನುಮಂತ ದೇವರ ಸ್ತುತಿಯಿದೆ. ಕ್ರಮಾಕ ೨೮ ರಲ್ಲಿ ಹನುಮಂತ ದೇವರ ಜೋಗುಳವಿದೆ. ಕ್ರಮಾಂಕ ೨೯ ರಲ್ಲಿ ಸರಡಗಿಯ (ತಾ. ಜೇವರಗಿ, ಜಿ. ಗುಲ್ಬರ್ಗಾ) ಶ್ರೀನಿವಾಸನ ಸ್ತುತಿ ಮತ್ತು ಕ್ರಮಾಂಕ ೩೦ ರಲ್ಲಿ ತಿರುಪತಿಯ ವೆಂಕಟೇಶನ ಸ್ತುತಿಯಿದೆ. ಕ್ರಮಾಂಕ ೩೧ ರಲ್ಲಿ ಮಳಖೇಡದಲ್ಲಿಯ (ತಾ. ಚಿತ್ತಾಪುರ, ಜಿ. ಗುಲ್ಬರ್ಗಾ) ಬಿಂದುಮಾಧವನ ವರ್ಣನೆ ಹಾಗೂ ಕ್ರಮಾಂಕ ೩೨ ರಲ್ಲಿ ಮಾಧವಾನಂತ ಗೋವಿಂದನಿಗೆ ಮಂಗಳಾರತಿಯಿದೆ. ಕ್ರಮಾಂಕ ೩೩, ೩೪, ೩೫ ರಲ್ಲಿ ಶಂಕರನ ಸ್ತುತಿಯಿದೆ. ಬನಶಂಕರಿ ದೇವಿಯನ್ನು ಸ್ತುತಿಸುವ ಮುಂದಿನ ಗೀತದಲ್ಲಿ (ಕ್ರ. ೩೬) ಪ್ರಾಸ, ನಾದಮಾಧುರ್ಯ ಪದಲಾಲಿತ್ಯ ಅದ್ಭುತವಾಗಿವೆ. ಮುಂದಿನ ಮೂರು ಗೀತಗಳು (ಕ್ರ. ೩೭, ೩೮, ೩೯) ಪರಬ್ರಹ್ಮರೂಪಿಣಿ, ತ್ರಿಪುರಸುಂದರಿ ಬನಶಂಕರಿ (ಅರ್ಥಾತ್ ಪಾರ್ವತಿ)ಗೆ ಮಂಗಳಾರತಿಯ ಗೀತಗಳು. ಕುಂಟೋಜಿ (ತಾ. ಮುದ್ದೇಬಿಹಾಳ, ಜಿ. ಬಾಗಲಕೋಟ) ಗ್ರಾಮದ ಆರಾಧ್ಯ ದೈವತ ಬಸವೇಶ್ವರನ ಸ್ತುತಿ ಕ್ರ. ೪೦ ರಲ್ಲಿ ಇದೆ. ಕ್ರ. ೪೧ ರಲ್ಲಿ ಸವಣೂರಲ್ಲಿಯ (ಜಿ. ಧಾರವಾಡ) ಸತ್ಯಬೋಧಯತಿಗಳ ಸ್ತವನವಿದ್ದು, ಕ್ರ. ೪೨ ರಲ್ಲಿ ದೇವರ ಗಿರಿಯ (ದೇವದುರ್ಗ, ಜಿ. ರಾಯಚೂರ) ಅಪ್ಪಯ್ಯನವರ ಸ್ತುತಿಯಿದೆ. ಇನ್ನು ಬರುವದು ಶಿವ ಸುಖದ ವರ್ಣನೆ. ಅಷ್ಟರಿಪುಗಳನ್ನು ಸುಟ್ಟು ಕೋಹಂ ಎಂಬ ಸಂದೇಹ ವಳಿದು ಪರಮಾತ್ಮನೊಬ್ಬನೇ ಸತ್ಯ, ಎಂಬ ಪ್ರತೀತಿಯೇ ಶಿವ ಸುಖವು, ಚಿನ್ಮಯ ಜ್ಞಾನ-ಪ್ರಕಾಶದಲ್ಲಿ

ಸೋಹಂಭಾವದ ಅಪರೋಕ್ಷಾನುಭೂತಿಯೇ ಶಿವಸುಖವು (ಕ್ರ. ೪೩). ಮುಂದಿನ ಗೀತವು ಶಿವಸುಖದಾರಿಯ ಬಗ್ಗೆ ಇದೆ. ಪರಮಾರ್ಥ ಮಾರ್ಗವು ಭಗವದಾನಂದ ಪಡೆಯುವ ಮಾರ್ಗ. ಇದು ಸೂಕ್ಷ್ಮಾತಿಸೂಕ್ಷ್ಮ. ಕೂದಲ ಎಳೆಗಿಂತ ಸಣ್ಣದು ; ಸಾಸಿವೆ ಕಾಳಿನ ಸಹಸ್ರ ಭಾಗಕ್ಕಿಂತಲೂ ಸಣ್ಣದು. ಅದು ತೇಜಸ್ವಿಯಾದ ಬಂಗಾರ ಬಣ್ಣದ್ದು. ಬ್ರಹ್ಮರಂಧ್ರದಲ್ಲಿ ಸತತವಾಗಿ ಸುನಾದ ಶಬ್ದ ನಡೆದಿದೆ. ಇಂಥ ಅತೀಂದ್ರಿಯ ದಿವ್ಯ ಅನುಭವವು ನಾಸಿಕಾಗ್ರದಲ್ಲಿ ಎವೆ ಇಕ್ಕದೆ ದೃಷ್ಟಿ ಸ್ಥಿರವಾದ ಯೋಗಿಗೆ ಮಾತ್ರ ಸಾಧ್ಯ (ಕ್ರ. ೪೪). ಕೊನೆಯಲ್ಲಿ ಗುರುಪೂಜೆಯ ಅದ್ಭುತ ವಿವರಣವಿದೆ. ದೇಹವೆಂಬ ಅಷ್ಟಕಂಬದ ಮನೆಯಲ್ಲಿ, ತಮ, ರಜ, ಸತ್ವ, ಶುದ್ಧಸತ್ವ ಎಂಬ ವೇದಿಕೆ ಇಡುವೆ. ಉದಾಸೀನ ವೃತ್ತಿಯೆಂಬ ರಂಗವಲ್ಲಿ ಹಾಕುವೆ. ಅದರ ಸುತ್ತಲೂ ನಿರ್ಗುಣ ದಾರವನ್ನು ಕಟ್ಟುವೆ. ಚಿತ್ತವೆಂಬ ಅಷ್ಟ ಕಮಲದೊಳು ಇಷ್ಟಮೂರ್ತಿಯನ್ನು ಧ್ಯಾನಿಸುವೆ. ಪ್ರವೃತ್ತಿ ಸ್ಥಾನವೆಂಬ ಹಣೆಯಲ್ಲಿ ನಿವೃತ್ತಿಯೆಂಬುದೇ ವಿಭೂತಿ. ನಿರ್ವಂಚನೆಯೇ ಆಚಮನ. ಭಕ್ತಿಜಲದಿಂದ ಆ ಸರ್ವಾತ್ಮ ಗುರುಮೂರ್ತಿಯ ಚರಣ ತೊಳೆಯುವೆ. ಗುರುಪಾದ ತೀರ್ಥವೇ ಪಾವನ ಮುಕ್ತಿ ; ಸದ್ವಾಸನೆಯೇ ಶ್ರೀಗಂಧ ; ಜಡ ವೃತ್ತಿಯೇ ಅಕ್ಷತೆ, ಸದ್ಭಾವವೇ ಗುರುವಿಗೆ ಅರ್ಪಿಸಬೇಕಾದ ಪರಿಮಳ. ಮೂರು ಗುಣಗಳನ್ನು ಹೊಸೆದು, ಚರಾಚರ ಪುಷ್ಪಗಳನ್ನು ನಿರ್ಗುಣವಾದ ಸೂತ್ರದಲ್ಲಿ ಹೆಣೆದು ಗುರುವಿಗೆ ಮಾಲೆಯನ್ನು ಹಾಕುವೆ. ಅಹಂಕಾರದ ಧೂಪ ಸುಟ್ಟು, ಜ್ಞಾನದ ಜ್ಯೋತಿಯಿಂದ ಗುರುವಿಗೆ ಆರತಿ ಬೆಳಗುವೆ. ಜೀವಭಾವವನ್ನು ನೈವೇದ್ಯವೆಂದು ಅರ್ಪಿಸುವೆ. ವಾಚ್ಯಾರ್ಥವೇ ತಾಂಬೂಲ, ಲಕ್ಷ್ಯಾರ್ಥವೇ ದಕ್ಷಿಣೆ. ಅಕ್ಷಯವೇ ಮಂತ್ರಪುಷ್ಪ. ಇಂಥ ಅದ್ಭುತ ಪರಾಪೂಜೆ ನೋಡಲು ಸನಕಾದಿ ಋಷಿ ಮುನಿಗಳು, ದೇವತೆಗಳು ಅಂತರಿಕ್ಷದಲ್ಲಿ ಬಂದು ನಿಂತಿಹರು. ತಾಳ, ಮದ್ದಲಿ, ಭೇರಿ, ಝಾಂಗಟಿಗಳ ನಿನಾದದಲ್ಲಿ ಅವರು ಗೀತ ನರ್ತನ ಮಾಡುತ್ತಿದ್ದಾರೆ. ಚಿದಾನಂದದಿಂದ ಅದ್ವಯವೆಂಬ ಸಾಷ್ಟಾಂಗವೆರಗಲು ಅಷ್ಟಸಿದ್ಧಿಗಳೆಲ್ಲ ತಾವಾಗಿ ಸೇವೆಗೆ ನಿಂತವು (ಕ್ರ. ೪೫).

## ಶಿವರಾಮ

ಇವರ ಎರಡು ಪದಗಳು ಉಪಲಬ್ಧವಿದ್ದು ಮೊದಲನೆಯ ಪದದಲ್ಲಿ ಅದ್ವೈತ ಸಿದ್ಧಾಂತವನ್ನು ನೋಡುತ್ತೇವೆ. ಎಲ್ಲವೂ ಮಾಯೆ, ಅಂದರೆ ಸುಳ್ಳು ; ಆದರೆ ನಿಜದಂತೆ ಆಭಾಸವಾಗುತ್ತದೆ. ಇದನ್ನು ವಿಶದಗೊಳಿಸಲು, ಅಸಮಂಜಸ

ಅಂದರೆ ಪರಸ್ಪರ ವಿರುದ್ಧ ವಿಷಯಗಳ ಸಮೃದ್ಧ ರಾಶಿಯನ್ನೇ ಈ ಪದದಲ್ಲಿ ಶಿವರಾಮರು ಹೇಳಿದ್ದಾರೆ. ಗಂಧರ್ವ ನಗರದಿಂದ ಬಂಜೆಯ ಮಗನು ಬಂದು ಭೀಷ್ಮನ ಮಗಳನ್ನು ಮದುವೆಯಾದನು. ಅವನ ಕೊರಳಲ್ಲಿ ಕೈಯಿಲ್ಲದವನು ಆಕಾಶ ಪುಷ್ಪಗಳ ಮಾಲೆ ಹಾಕಿದನು. ಪರ್ವತದ ತುದಿಯ ಭಾಗದಲ್ಲಿ ಮೃಗಜಲದ ನದಿಯು ಹರಿಯುತ್ತದೆ. ಅದರಲ್ಲಿ ಕಲ್ಲಿನ ಹರಗೋಲು ಇದೆ. ಅದರ ಮೇಲೆ ಬಂಜೆಯ ಮಗ ಕುಳಿತಿದ್ದಾನೆ. ಮೊಲ ಎದ್ದು ಆ ಹರಗೋಲನ್ನು ಅಪ್ಪಳಿಸಲು ಬಂಜೆಯ ಮಗ ಹರಿದು ಹೋದ. ಮೃಗಜಲದಲ್ಲಿಯ ಮೀನಗಳು ಆ ಬಂಜೆಯ ಮಗನ ಶವವನ್ನು ಹೊರತೆಗೆದು ಅದನ್ನು ವನಕ್ಕೆ ಒಯ್ದು ದಹನ ಮಾಡಿದವು. ಈ ಎಲ್ಲ ಘಟನೆಗಳನ್ನೂ ಕುರುಡನು ಕಂಡನು. ಹೆಳವನು ಎಲ್ಲರಿಗೆ ಹೇಳಲು ಓಡಿದನು. ಕಿವುಡನಿಗೆ ಮೂಕನು ಈ ಎಲ್ಲ ವೃತ್ತಾಂತವನ್ನು ಹೇಳಿದನು. ಹೀಗಿದೆ ಈ ವಿಚಿತ್ರ ಸಂಸಾರ, ಮಾಯೆಯ ವಿಸ್ತಾರ (ಕ್ರ. ೧). ಸ್ವಹಿತ ಹೇಳುವವನೇ ನಿಜವಾದ ಗೆಳೆಯನು. ಅಂತಃಕರಣ ಶುದ್ಧವಿರದಿದ್ದರೆ ವ್ರತನೇಮವೇಕೆ ? ದಂಭ ಅಭಿಮಾನಗಳು ಇರುವ ವರೆಗೆ ಯಾವ ಸತ್ಕಾರ್ಯವೂ ನೆರವೇರದು. ಜ್ಞಾನ ಒಂದೇ ಇದೆ, ಅದೆಂದರೆ ಜ್ಞೇಯ ; ಅರ್ಥಾತ್ ಪರಮಾತ್ಮನ ಪ್ರತ್ಯಕ್ಷ ಅನುಭೂತಿ. ಚಿತ್ತ ವೃತ್ತಿ ನಿರೋಧವಾಗದ ಹೊರತು ನಿಜವಾದ ಧ್ಯಾನವಾಗಲರಿಯದು. ಹೀಗೆ ಮಹತ್ವದ ಉಪದೇಶವನ್ನು ಈ ಗೀತದಲ್ಲಿ ನಾವು ಕೇಳುತ್ತೇವೆ ( ಕ್ರ. ೨).

## ಗುರು ರಾಮಲಿಂಗ

ಇವರ ಮೂರು ಗೀತೆಗಳು ನಮಗೆ ದೊರೆತಿವೆ. ಒಂದು ಜೋಗುಳ ಪದ, ಎರಡು ಮಂಗಳಾರತಿಯ ಪದಗಳು. ಪಂಚ ಮಹಾಭೂತಗಳ ತೊಟ್ಟಿಲ ಮಾಡಿ ೨೫ ತತ್ತ್ವಗಳ ನವಾರ ಹೊಂದಿಸಿ, ಪಂಚಕೋಶವೆಂಬ ಹಾಸಿಕೆ ಹಾಸಿ, ಪಂಚ ತತ್ವಾತೀತನ ಜೋಗುಳ ಹಾಡಿರಿ. ಆತ್ಮಾರಾಮನು ನಿಜಸುಖರೂಪನು. ಸಚ್ಚಿದಾನಂದನು. ಪಾಪರಹಿತನು. ಸದೈವ ಧ್ಯಾನರತರಾದ ಶರಣರ ಹೃದಯ ದಲ್ಲಿರುವ ಚಿದ್ದೀಪನು (ಕ್ರ. ೧). ಮಂಗಳಾರತಿಯ ಗೀತದಲ್ಲಿ ಯಾಳಗಿಯ ಗುರುರಾಮಲಿಂಗ ದೊರೆಯ ಆಧ್ಯಾತ್ಮಿಕ ಜೀವನ, ಅವರ ನಿರ್ಯಾಣ ಮಹೋತ್ಸವದ ವರ್ಣನೆಯಿದೆ. (ಕ್ರ. ೨). ಗುರುಪಾದಾಂಗುಷ್ಠದ ತೀರ್ಥವು ಜನನ ಮರಣವನ್ನು ಹಿಂಗಿಸುವದು. ಅಜ್ಞಾನ ಮಲನಾಶ ಮಾಡುವ, ಸುಜ್ಞಾನ ವೈರಾಗ್ಯ ಸಿದ್ಧಿಸುವ, ಪವಿತ್ರ ಪಾದೋದಕಕ್ಕೆ ಜಯ ಮಂಗಳಂ (ಕ್ರ. ೩).

## ಶ್ರೀಪತಿ

ಸಿದ್ಧಬಸವ ಅಂದರೆ ರಾಮನಾಥ. ಇವರು ಸಂಪ್ರದಾಯದ ಪುಣ್ಯ ಪುರುಷರು. ಇವರ ಜೀವನ ಚರಿತ್ರೆ, ಅವರು ಮಾಡಿದ ಅನೇಕ ಚಮತ್ಕಾರಗಳು ಇವುಗಳ ಸಂಕ್ಷಿಪ್ತ ವರ್ಣನೆ, ಶ್ರೀಪತಿ ಇವರ ಗೀತದಲ್ಲಿದೆ (ಕ್ರ. ೧).

## ನರಸಿಂಹ

ಇವರ ಗೀತದಲ್ಲಿ ಸದ್ವಸ್ತುವಿನ ಸ್ವರೂಪದ ವಿವರಣೆಯಿದೆ. ಇದರ ವರ್ಣನೆಯನ್ನು ನೇತಿ, ನೇತಿ ಎಂದೇ ಮಾಡಬಹುದು. ಸರ್ವವ್ಯಾಪಕವಾದ ಪರವಸ್ತುವು ಸದ್ಗುರುವಿನ ಕೃಪೆಯಿಂದ ಎನಗೆ ದೃಷ್ಟಿಗೋಚರವಾಯಿತು (ಕ್ರ. ೧).

## ವಿಶ್ವಪತಿ

ತಮ್ಮ ಗೀತದಲ್ಲಿ ಇವರು ಶಿವಯೋಗವು ಯಾರಿಗೆ ಸಾಧ್ಯವಿಲ್ಲ ಎಂಬದನ್ನು ಸುಂದರ ರೀತಿಯಿಂದ ಉಪದೇಶಿಸುತ್ತಾರೆ. ಮನದಲ್ಲಿ ಆಶೆಯಿದೆ, ರೋಷವಿದೆ, ಅಹಂಕಾರವಿದೆ, ಉನ್ಮತ್ತತೆಯಿದೆ, ಇಂಥ ಹೀನನಿಗೆ ಶಿವಯೋಗವು ಅಸಾಧ್ಯ. ನಶ್ವರ ದೇಹವೇ ತನ್ನ ನಿಜಸಾರ ತತ್ವವೆಂದು ತಿಳಿಯುವ ಹಾಗೂ ಪಾಪ ಕರ್ಮಗಳನ್ನು ಹೇಸದೆ ಮಾಡುವವನಿಗೆ ಶಿವಯೋಗವು ಹೇಗೆ ಸಾಧ್ಯವಾದೀತು ? ಆತ್ಮಕಲ್ಯಾಣ ಮಾಡಿಕೊಳ್ಳದವ, ಅದರಂತೆ ಷಡ್ರಿಪುಗಳ ಆಧೀನನಾದವನಿಗೆ ಶಿವಯೋಗವು ಎಂದೂ ಸಾಧ್ಯವಿಲ್ಲ. ಸ್ಥೂಲ, ಸೂಕ್ಷ್ಮ, ಕಾರಣ ದೇಹದಲ್ಲಿಯೇ ಬದ್ಧನಾಗಿರುವ ಭೋಗ ಲಂಪಟನಿಗೆ ಶಿವಯೋಗ್ಯವು ಎಂದಿಗಾದರೂ ಸಾಧ್ಯವೇ ? (ಕ್ರ. ೧).

## ಸಿದ್ಧಗುರು ತ್ರಿಪುರಾಂತಕ

ಇವರ ಒಂದು ರಗಳೆಯಲ್ಲಿಯ ವ್ಯವಹಾರ – ನೀತಿ ಹಾಗೂ ಪಾರಮಾರ್ಥಿಕ ಉಪದೇಶವು ಉದ್ಬೋಧಕವಾಗಿದೆ (ಕ್ರ. ೧). ಈ ರಗಳೆಯ ವೈಶಿಷ್ಟ್ಯವೆಂದರೆ ಕೆಲವೆಡೆಯಲ್ಲಿ ಮೊದಲನೆಯ ಸಾಲಿನ ಕೊನೆಯ ಶಬ್ದವು, ಎರಡನೆಯ ಸಾಲಿನ ಪ್ರಾರಂಭದ ಶಬ್ದವಾಗುತ್ತದೆ. ಇವರ ಮತ್ತೊಂದು ಕೃತಿಯೆಂದರೆ ಅಕ್ಷರಮಾಲಾ. ಇದೂ ಒಂದು ವೈಶಿಷ್ಟ್ಯಪೂರ್ಣ ಕೃತಿಯು. ಈ ಕೃತಿಯು ಶಬ್ದಚಮತ್ಕೃತಿಗಳಿಂದ

ಕೂಡಿದೆ. ಸ್ವರಗಳನ್ನು ಹಾಗೂ ಕ ವರ್ಗಾದಿಗಳನ್ನು ಅ ದಿಂದ ಅಃದ ವರೆಗೆ ನಡಿಸುವ ಸಾಹಸ ಇದರಲ್ಲಿದೆ. ಕೊರತೆ ಆದ ಮಾತಿಗೆ ಹೊರತಾದ ಮಾತುಗಳನ್ನು ಅಂದರೆ ಇತರ ಭಾಷೆಗಳ (ಹೆಚ್ಚಾಗಿ ಮರಾಠಿ ಭಾಷೆಯ) ಶಬ್ದಗಳನ್ನು ಉಪಯೋಗಿಸಿ ಕಾವ್ಯ-ಹಾರವನ್ನು ಮಾಡುತ್ತಾರೆ ಸಂತಕವಿ ಸಿದ್ಧಗುರು ತ್ರಿಪುರಾಂತಕರು. ಚಿಕ್ಕ ಮಕ್ಕಳಲ್ಲಿ ಶಬ್ದಕುತೂಹಲ ಹುಟ್ಟಿಸಿ, ಮನೋರಂಜನೆಯ ಮಾಧ್ಯಮದಿಂದ ಅವರ ಶಬ್ದ ಭಾಂಡಾರವನ್ನು ಹೆಚ್ಚಿಸುವ ಉದ್ದೇಶದಿಂದ ಈ ಕೃತಿಯನ್ನು ಅವರು ಮಾಡಿರಬಹುದು. ಇಲ್ಲಿ ಹೆಚ್ಚಾಗಿ ಶಬ್ದಗಳ ಆಡಂಬರವಿದ್ದರೂ, ತಾತ್ತ್ವಿಕ, ನೈತಿಕ ಹಾಗೂ ಆಧ್ಯಾತ್ಮಿಕ ವಿಚಾರಗಳ ಕೊರತೆಯಿಲ್ಲ. ಪರಾತ್ಪರ ಸತ್ಯವು ಅದ್ವೈತ, ಅಗಣಿತ, ಆದ್ಯಂತರಹಿತವಾದದ್ದು. ಉದಯಾಸ್ತಗಳು ಅದಕ್ಕಿಲ್ಲ. ಉಚ್ಚನೀಚಗಳೆಂಬ ಭೇದಗಳಿಲ್ಲ. ಚೈತನ್ಯ ತತ್ತ್ವವು ವಿಶ್ವದ ಒಳಹೊರಗೆಲ್ಲ ತುಂಬಿದೆ. ಪರಮೇಶ್ವರನ ಸ್ವರೂಪವು ಬುದ್ಧಿಗೆ ಅಗೋಚರ. ಅವನ ಸಾಕಾರ ರೂಪವೇ ತಿಳಿಯದು. ನಿರಾಕಾರವಂತೂ ಬುದ್ಧಿಗೆ ಅತಿ ದೂರ. 'ಉಪ್ಪಾರ ಈಶ್ವರಣ್ಣ, ಬಡಿಗೇರ ಬೊಮ್ಮಣ್ಣ, ಕಟ್ಟಲೀ ಜಾಣರು ಸೃಷ್ಟಿ ರಚನಾ.' ಆ ದಿವ್ಯ ಶಿಲ್ಪಿಯ ಅದ್ಭುತ ಕುಶಲತೆಯಿಂದ ಬ್ರಹ್ಮಾಂಡವು 'ಮುಟ್ಟಿತು ಮುಗಿಲಿಗೆ, ದಟ್ಟಿಸಿತು ಭೂಮಿಗೆ, ಪಟ್ಟದರಸನು ನಮ್ಮ ಗುರುರಾಯನು.' ನರದೇಹ ಆದುದಕೆ ನಾಗಭೂಷಣನನ್ನು ಭಜಿಸಬೇಕು. ನರಜನ್ಮ ಬಹಳ ಕಷ್ಟ. ಗುಣಕರ್ಮಗಳು ಎನಗೆ ಕಾಡುತ್ತಿವೆ. ಘೋರ ಸಂಸಾರದಿಂದ ಹೊರಬೀಳುವ ಉಪಾಯವೇನು ? ಸದ್ಗುರುವಿಗೆ ಶರಣುಹೋಗಿ ಅವನಿಂದ ಉಪದೇಶ ಪಡೆದು ಜೀವನವನ್ನು ಸಾರ್ಥಕ ಮಾಡಿಕೊಳ್ಳಬೇಕು. 'ದಾವ ದರುಶನದೊಳಗೆ ದೇವ ದರುಶನ ಮೇಲು.' ಜಪತಪ ಮಾಡಿ ಜಾಗೃತನಾಗಬೇಕು. ದೇಹ ಭಾವ ಅಳಿದು ಆತ್ಮನೊಡಗೂಡು, ಎಂದು ಅವರ ಉಪದೇಶ. ಸಂತರಲ್ಲಿ ಕಾಮಧೇನು ಕರೆವುತಲಿದೆ. ಶಿವಶರಣನಿಗೆ ಜನ್ಮ-ಮೃತ್ಯುಗಳ ಸೋಂಕಿಲ್ಲ. ಆತ್ಮಜ್ಞಾನವೆಂದರೆ 'ದೀಪಬೆಳಕಿಲಿ ನೋಡಿಪ್ಪ, ಜ್ಞಾನದ ಸ್ವರೂಪ ಸಾರಗುಹ್ಯ'. ತಮ್ಮ ಈ ಕೃತಿಯ ಬಗ್ಗೆ ಗುರು ತ್ರಿಪುರಾಂತಕರೇ ಹೇಳುತ್ತಾರೆ. 'ಗುರು ತ್ರಿಪುರಾಂತಕನ ಅರಿವಿನ ಪದವಿದು ; ಅರಿತವರಿಂದ ಇದನ್ನು ತಿಳಿಯಬೇಕು. ಶಂಭು ಶಂಕರ ಶರಣು, ಸಹಸ್ರ ಶರಣು', ಹೀಗೆ ಈ ಕೃತಿಯ ಇತಿ ಶ್ರೀ (ಕ್ರ. ೨).

## ಜ್ಞಾನಬೋಧ

ನಮಗೆ ಉಪಲಬ್ಧವಿದ್ದ ಇವರ ೧೩ ಗೀತಗಳಲ್ಲಿ ಒಂದು ದೃಷ್ಟಿಯಿಂದ,

ಪಾರಮಾರ್ಥಿಕ ಜೀವನದ ಪ್ರಾರಂಭ, ಅದರ ಬೆಳವಣಿಗೆ ಹಾಗೂ ಅದರ ಪರಿಪೂರ್ಣತೆ ಇವುಗಳನ್ನು ನಾವು ನೋಡುತ್ತೇವೆ. ಇದು ಸಂಕ್ಷಿಪ್ತ ಪರಮಾರ್ಥ ಸೋಪಾನ. ತ್ರೈಲೋಕ್ಯದ ಜನನಿ-ಜನಕನು ಅಂದರೆ ನಿರ್ಗುಣ, ನಿರ್ವಿಕಾರ ಪರಬ್ರಹ್ಮನು ಯಶೋದೆಗೆ ಮಗನಾದದ್ದು, ಅತಿ ಸೋಜಿಗ. ಸಚ್ಚಿದಾನಂದ ಸ್ವರೂಪನು ವಿದುರನ ಮನೆಯಲ್ಲಿ ಊಟಮಾಡಿ ತಣಿದನು, ಇದೂ ಅತಿ ಸೋಜಿಗ. ಭಾನುಕೋಟಿ ತೇಜಃಪುಂಜನಾದ ಪರಮಾತ್ಮನು ಭಕುತಿಗೆ ಒಲೆದುದು ಇದೂ ಸೋಜಿಗವೇ (ಕ್ರ. ೧). ಪರಮಾರ್ಥದ ಕಡೆಗೆ ನಿನ್ನ ಲಕ್ಷವಿಲ್ಲ. ನಿನ್ನ ಕೆಟ್ಟ ನಡತೆ ಇನ್ನೂ ನಷ್ಟವಾಗಿಲ್ಲ. ನೀನು ಗುರುವಿಗೆ ಶರಣು ಹೋಗಿಲ್ಲ. ಅವಿವೇಕ ಮತ್ಸರಗಳನ್ನು ಬಿಡಲಿಲ್ಲ ; ಇದು ಉಚಿತವೇ ? (ಕ್ರ. ೨). ಇಲ್ಲಿಯ ವರೆಗೆ ಕೇವಲ ಪರರ ದೋಷ ಹುಡುಕಿದಿ. ಎಲ್ಲವೂ ನನ್ನದೆಂದಿ. ವಿವೇಕ-ವೈರಾಗ್ಯ ನಿನಗೆ ದೂರಾದವು. ನುಡಿಯಂತೆ ನಡೆಯಲಿಲ್ಲ. ದೈನ್ಯಾವಸ್ಥೆ ಹೇಗೆ ಬಿಟ್ಟೀತು ? ಕಷ್ಟವಂತೂ ತಪ್ಪಲಿಲ್ಲ. ಇನ್ನಾದರೂ ಎಚ್ಚರೋ (ಕ್ರ. ೩). ಅಹಂಕಾರ, ಅಸಹಿಷ್ಣುತೆ, ಪರಪೀಡೆ, ದಾಂಭಿಕವೃತ್ತಿ ಬಿಟ್ಟು ಗುರುವಚನದಲ್ಲಿ, ಅಂದರೆ ಗುರುವು ಅನುಗ್ರಹಿಸಿದ ಮಂತ್ರದಲ್ಲಿ, ಏಕನಿಷ್ಠೆ ಇರಲಿ (ಕ್ರ. ೪). ನಿನ್ನ ನೀ ತಿಳಿದುಕೊ (know thyself ). ದೇಹ ಮಮತ್ವ ಬಿಟ್ಟು, ಭ್ರಾಂತಿಯ ಮುಸುಕು ತೆಗೆ. ಮನುಷ್ಯ ದೇಹ ಪ್ರಾಪ್ತವಾದ ಮೇಲೆ ಆತ್ಮಜ್ಞಾನವೆಂಬ ರತ್ನವನ್ನು ದೊರಕಿಸಬೇಡವೇ ? (ಕ್ರ. ೫). ಆಧ್ಯಾತ್ಮಿಕ ಪ್ರಗತಿಗಾಗಿ, ಸತ್ಸಂಗವು ಬೇಕು. ಇಂಥಾದ್ದೆಲ್ಲಿದೆ ತಾ ನೋಡಿ, ಸತ್ಸಂಗದ ಸುಖವು ? ಸಂತರು ಜ್ಞಾನಾಂಬುಧಿಗಳು, ಅವರಲ್ಲಿ ಎಲ್ಲ ತೀರ್ಥಕ್ಷೇತ್ರಗಳು ವಾಸ ಮಾಡಿವೆ. ಆದ್ದರಿಂದ ಆಯುಷ್ಯ ವ್ಯರ್ಥ ಕಳೆಯದೆ ಸದಾಚಾರ, ಸದ್ವಿಚಾರಗಳಿಂದ ನೀತಿ ಮಾರ್ಗದಲ್ಲಿ ನಡೆದು, ಪೂರ್ಣ ಜ್ಞಾನ ವೈರಾಗ್ಯ ಬೆಳೆಸಿ ಸಂತರಿಗೆ ಶಿರಬಾಗುವದು ಯೋಗ್ಯವಲ್ಲವೇ ? (ಕ್ರ. ೬). ಸದ್ಗುರುವೇ ! ನೀನು ಶರಣರಿಗೆ ಕೈವಲ್ಯದಾನಿ. ಕೃಪಾಸಿಂಧುವಾಗಿ ಆತ್ಮರೂಪ ತೋರಿಸಿದಿ. ಶಮ ದಮ ಸದ್ಗುಣಗಳನ್ನು ದಯಪಾಲಿಸಿ, ಸಂತತ ಸದ್ಬೋಧದಲ್ಲಿಟ್ಟು ನೀನು ಕಾಯುವೆ. ಆದ್ದರಿಂದ ಅರಗಳಿಗೆ ನಿನ್ನ ಬಿಟ್ಟು ಇರಲಾರೆನು (ಕ್ರ. ೭). ತಾಮಸ ಗುಣಗಳನ್ನು ಕಡಿದು, ರಾಮ ರಾಮ ಬೀಜ ಮಂತ್ರ ನೀಡಿ, ಜ್ಞಾನದೀಪವನ್ನು ತೋರಿಸಿದ ಸದ್ಗುರುವನ್ನು ಹೇಗೆ ಮರೆಯಲಿ ? ಸ್ವಾನುಭವ ಪ್ರಾಪ್ತವಾಗಿ, ಪಾಪ ಪುಣ್ಯ ದ್ವಂದ್ವವು ಕರಗಿ ಹೋಗಿ, ವಿಶ್ವವೆಲ್ಲ ರಾಮರೂಪವಾಯ್ತು, ಆ ಪರಂಜ್ಯೋತಿ ಸದೋದಿತ ಗುರು ಕಾರುಣ್ಯದಿಂದ (ಕ್ರ. ೮). ಗುರುರಾಯನು ತನ್ನ ಕೃಪಾದೃಷ್ಟಿಯಿಂದ ಪರಬ್ರಹ್ಮನನ್ನು ಮುಟ್ಟಿ

ಕೊಟ್ಟನು. ಆ ಬ್ರಹ್ಮಸಂಸ್ಪರ್ಶದಿಂದ ಎಲ್ಲ ಮಾಯೆ ಹೋಯಿತು. ನಿರಾಶೆಯೆಲ್ಲ ನಷ್ಟವಾಗಿ ಹರುಷಕ್ಕೆ ಹರುಷವಾಯಿತು (ಕ್ರ. ೯). ಸಾಧುಸಂತರು ಭವ ಬಂಧನದೊಳಗೆ ಎಂದೂ ಸಿಲುಕರು. ಪದ್ಮ ಪತ್ರದಂತೆ ಅಲಿಪ್ತರು. ಚಿನ್ಮಯ ರೂಪದಲ್ಲಿ ಬೆರೆತಿರುವ ಅವರು, ಜಗಕ್ಕೆ ಮಾತ್ರ ಏನೊಂದರಿಯದ ಮರುಳರಂತೆ ಕಾಣುವರು (ಕ್ರ. ೧೦). ಸಂತರ ಸಹವಾಸದಿಂದ ಎನ್ನಲ್ಲಿ ಪರಮ ಚಿದ್ಘನಾನಂದ ತುಂಬಿ ತುಳುಕಿತು. ಆ ಅಮಿತ ಸುಖವನ್ನು ಯಾರಿಗುಸುರಲಿ ? ಅವರ ಪಾದ ಧೂಳಿಯಿಂದ ನಾಲ್ಕೂ ಮುಕ್ತಿಗೆ ಮೀರಿದ ಪದವನ್ನು ನಾನು ಗಳಿಸುವೆ (ಕ್ರ. ೧೧). ಗುರುಕೃಪೆಯಿಂದ ಇಮ್ಮನವಿದ್ದದ್ದು ಒಮ್ಮನವಾಗಿ ಕರ್ಮವೆಲ್ಲ ಬ್ರಹ್ಮರೂಪಾಗಿ ತೋರಿತು. ನಿರ್ಮಲ ನಿಜವಸ್ತು ದೃಷ್ಟಿಗೋಚರವಾಯಿತು. ಎತ್ತ ನೋಡಿದತ್ತ ಸದ್ವಸ್ತುವೇ ಪರಿಪೂರ್ಣವಾಗಿ ಕಾಣಿಸಿತು. ಎನ್ನ ಸಂದೇಹವೆಲ್ಲ ಹೋಯಿತು. ಎಂದಿಗೂ ಅಳಿಯದ ಸೌಭಾಗ್ಯ ದೊರೆಯಿತು (ಕ್ರ. ೧೨). ಗುರು ಪೂಜೆಯನ್ನು ಮಾಡುವದು ಸಾಧ್ಯವೇ ? ದಶ ಪ್ರಾಣಗಳಲ್ಲಿ, ಎಲ್ಲ ಜ್ಞಾನೇಂದ್ರಿಯ ಕರ್ಮೇಂದ್ರಿಯಗಳಲ್ಲಿ, ಪಂಚ ಮಹಾಭೂತಗಳಲ್ಲಿ, ತಪಸ್ವಿಗಳು ಉಚ್ಚರಿಸುವ ಓಂಕಾರ ಶಬ್ದದಲ್ಲಿ ಶಶಿ ಸೂರ್ಯನ ಕ್ಷೇತ್ರಗಳಲ್ಲಿ, ಲೋಕತ್ರಯ ಗಳಲ್ಲಿ, ಅಂತರ್ಬಾಹ್ಯ ವ್ಯಾಪಕನಾದ ಹಾಗೂ ತಾನೇ ತಾನಾದ ಪರಾತ್ಪರ ಗುರುರೂಪ ತತ್ತ್ವವನ್ನು ಪೂಜಿಸುವದೆಂತು ? (ಕ್ರ. ೧೩).

## ಅಜ್ಞಾತ

ದೃಶ್ಯವಿಶ್ವವೆಲ್ಲ ಕೇವಲ ಆಭಾಸ ; ಓಂಕಾರದ ಹೊರತು ಯಾವದೂ ಸತ್ಯವಲ್ಲ. ಓಂಕಾರದಲ್ಲಿಯ ಅಕಾರ, ಉಕಾರ ಮಕಾರ ಇವು ಜಾಗೃತಿ, ಸ್ವಪ್ನ ಸುಷುಪ್ತಿ ಅವಸ್ಥೆಗಳ ದ್ಯೋತಕಗಳು. ಅರ್ಧ ಮಾತ್ರೆ ಅಂದರೆ ತುರ್ಯಾವಸ್ಥೆ. ಈ ಅವಸ್ಥೆಯಲ್ಲಿ ಪ್ರಪಂಚದ ಯಾವ ಗೊಂದಲವೂ ಇಲ್ಲ. ಇದೇ ಅಪರೋಕ್ಷಾನು ಭೂತಿ. ಇದರಲ್ಲಿ ಯೋಗಿಗಳು ಅನುಭವಿಸುವ ದಶನಾದಗಳೆಲ್ಲ ಅಂತರ್ಭೂತ ವಾಗುತ್ತವೆ. ಈ ಕವಿಯು ಮನಿಹಾಳ (ತಾ. ಜೇವರಗಿ, ಜಿ. ಗುಲ್ಬರ್ಗಾ)ದ ಗ್ರಾಮ ದೈವತ ಶಿವನ ಉಪಾಸಕನೆಂದು ಸಂದರ್ಭದಿಂದ ತಿಳಿಯುತ್ತದೆ (ಕ್ರ. ೧).

## ಭವತಾರಕರ ಜೀವನ ಚರಿತ್ರೆ

ಕನ್ನಡ ಆಧ್ಯಾತ್ಮಿಕ ಸಾಹಿತ್ಯವು ವಿಪುಲವಿದೆ. ಈ ಸಮೃದ್ಧ ಸಾಹಿತ್ಯಕ್ಕೆ

ಸುಪರಿಚಿತ ಸಂತ ಕವಿಗಳ ಕೊಡುಗೆಯಷ್ಟೇ ಅಲ್ಲ ಅಜ್ಞಾತ ಕವಿಗಳ ಅಂದರೆ ಪ್ರಸಿದ್ಧಿಗೆ ಬಾರದ ದಿವ್ಯ ಜೀವಿಗಳ ಸೇವೆಯೂ ವಿಸ್ಮಯಕಾರಕವಾಗಿದೆ. ಬೆರಿಟೂರೇಶ, ನಿರುಪಾಧಿಸಿದ್ಧ, ಗಿರಿಮಲ್ಲೇಶ, ನರಸಿಂಹ ಹೀಗೆ ಎಷ್ಟೋ ಸಂತಕವಿಗಳ ಪಾರಮಾರ್ಥಿಕ ಗೀತಗಳು ಈಗಲೂ ಜನರ ಬಾಯಲ್ಲಿವೆ.

ಇಂಥ ಅಜ್ಞಾತ ಸಂತ ಕವಿಗಳಲ್ಲಿ ಭವತಾರಕರೂ ಒಬ್ಬರು. ೧೯೫೭ ರಲ್ಲಿ ತಾಪಸ ಕೃಷ್ಣರಾಯರು 'ಭವತಾರಕರ ಗೀತಗಳು' ಎಂಬ ಚಿಕ್ಕ ಪುಸ್ತಕವನ್ನು ಪ್ರಸಿದ್ಧಿಸಿದರು. ಈ ಪುಸ್ತಕವು ಈಗ ಸಿಗುವುದಿಲ್ಲ, ಕೋಳಿವಾಡದ ವಿಶ್ವನಾಥ ಶಾಸ್ತ್ರಿ ತಿ. ನರಗುಂದ ಇವರು ಪರಿಶ್ರಮಬಟ್ಟು ಈ ಗೀತಗಳನ್ನು ಸಂಗ್ರಹಿಸಿದರು. ೧೯ನೆಯ ಶತಮಾನದ ಪೂರ್ವಾರ್ಧದಲ್ಲಿ ಗದಗ ಜಿಲ್ಲೆಯ ಮಲ್ಲಿಗವಾಡ ಎಂಬ ಗ್ರಾಮದಲ್ಲಿ ಭವತಾರಕರು ವಾಸಿಸುತ್ತಿದ್ದರು. ಇವರ ನಿಜವಾದ ನಾಮಧೇಯ ನರಸಪ್ಪ ಕುಲಕರ್ಣಿ ಎಂದು. ಇವರು ಮಲ್ಲಿಗವಾಡದ ಶಾನಭೋಗರು. ಈ ಗ್ರಾಮದ ದೈವತ ಅಂದರೆ ಸೋಮೇಶ್ವರನ ಇವರು ಏಕನಿಷ್ಠ ಭಕ್ತರು. ಇವರು ಅಪಾರ ವೈರಾಗ್ಯಶಾಲಿಗಳು. ಪ್ರಪಂಚದಲ್ಲಿದ್ದು ಪರಮಾರ್ಥದಲ್ಲಿ ಅತಿ ಉಚ್ಚ ಪದವಿಯನ್ನು ಪಡೆದವರು. ಅದ್ವೈತ ವೇದಾಂತದ ಸಿದ್ಧಾಂತಗಳನ್ನು ಜನಸಾಮನ್ಯರಿಗೂ ತಿಳಿಯುವಂತೆ ಉಪದೇಶಿಸಿದ್ದಾರೆ. ಇವರ ಪ್ರಿಯ ಶಿಷ್ಯ ಕಲಿವಾಳದ ನಿಂಗಪ್ಪ ಎಂಬ ಒಬ್ಬ ಒಕ್ಕಲಿಗ. ಪ್ರಪಂಚದಲ್ಲಿ ಮುಳುಗಿದ್ದ ಅವನನ್ನುದ್ದೇಶಿಸಿ, ಅವನನ್ನು ಎಚ್ಚರಿಸಲು ೪ ಪದಗಳನ್ನು ಭವತಾರಕರು ರಚಿಸಿದ್ದಾರೆ. ಮಲ್ಲಿಗವಾಡದ ಹತ್ತಿರವೇ ಇದ್ದ ಕೋಳಿವಾಡ ಗ್ರಾಮದಲ್ಲಿ ಹುಲಗಪ್ಪ ನೆಂಬ ಆತ್ಮಾನುಭಾವಿಯಿದ್ದ. ಇವನು ಭವತಾರಕರ ಸಮಕಾಲೀನ. ಇವನು ವಾಲೀಕಾರ. ಈ ಇಬ್ಬರೂ ಭಕ್ತಶ್ರೇಷ್ಠರಲ್ಲಿ ಬಹಳ ಅತ್ಮೀಯತೆ. ಸಮಾಜದ ಎಲ್ಲ ಸ್ತರಗಳಲ್ಲಿ ನೀತಿನಿಷ್ಠರು, ಆತ್ಮಾನುಭವಿಗಳು ಆಗಿನ ಕಾಲದಲ್ಲಿ ಇದ್ದರು, ಇದು ಸ್ಪಷ್ಟವಾಗುತ್ತದೆ. ಯಾವ ಜಾತಿಯವನೆ ಇರಲಿ, ಯಾವ ಕಸುಬಿನವನೇ ಇರಲಿ, ಅವನೂ ಭಗವದ್ಭಕ್ತನಾಗಿ ಸಾಕ್ಷಾತ್ಕಾರಿ ಮಹಾತ್ಮನಾಗುತ್ತಿದ್ದ, ಇದನ್ನು ನೆನಪಿ ನಲ್ಲಿಡಬೇಕು. ನಿರ್ಭಯ ವೃತ್ತಿ, ವ್ಯವಹಾರ ಚಾತುರ್ಯ, ಭವತಾರಕರ ವ್ಯಕ್ತಿತ್ವದ ವೈಶಿಷ್ಟ್ಯಗಳು. ಅವರು ಭಕ್ತ-ನಿಂದಕರನ್ನು, ಸಮಾಜ ಕಂಟಕರನ್ನು ಕಠೋರ ಶಬ್ದಗಳಿಂದ ದೂಷಿಸುತ್ತಾರೆ. ನರಸಪ್ಪನವರ ಆಧ್ಯಾತ್ಮಿಕ ಗುರುಗಳು ಭವತಾರಕರು. ಇವರ ಬಗ್ಗೆ ಯಾವ ವಿವರಣೆಗಳೂ ತಿಳಿದಿಲ್ಲ. ನರಸಪ್ಪನವರು ಗುರುಗಳ ಹೆಸರನ್ನೇ ತಮ್ಮ ಕಾವ್ಯದ ಮುದ್ರಿಕೆಯಾಗಿ ಇಟ್ಟುಕೊಂಡಿದ್ದಾರೆ. ಇವರು

ಎಲ್ಲವನ್ನೂ ಗುರುವಿನಲ್ಲಿ ಅರ್ಪಿಸಿದ ಪ್ರಪನ್ನ ಭಕ್ತರು : ಅಹಂಕಾರದ ಲವಲೇಶವೂ ಇಲ್ಲದ ಮಹಾ ಪುರುಷರು. 'ನಾನು ಏನೂ ಹೇಳುವುದಿಲ್ಲ, ಗುರು ಭವತಾರಕ, ತಂದೆ ಭವತಾರಕ, ಪರಬ್ರಹ್ಮ ಭವತಾರಕರ ಶಾಶ್ವತವಾದ ಉಪದೇಶದ ಕೇವಲ ವಾಹಕ ನಾನು.' ಈ ಪ್ರಕಾರದ ಪೂರ್ಣ ಶರಣಾಗತಿ ಯನ್ನು ಇವರಲ್ಲಿ ಕಾಣುತ್ತೇವೆ. ನಿಜಗುಣ ಶಿವಯೊಗಿಗಳ ಬಗ್ಗೆ ಇವರಿಗೆ ಬಹಳ ಆದರ ಭಾವವಿದೆ. ತಮ್ಮ ಒಂದು ಗೀತದಲ್ಲಿ 'ಆರು ಶಾಸ್ತ್ರವ ಮಾಡಿದ ಕರುಣದಿ ಆ ನಿಜಗುಣಶಿವಯೋಗಿ' ಎಂದು ಅವರ ಕರುಣಾರಸ ನೇತ್ರಕ್ಕೆ ವಂದಿಸುತ್ತಾರೆ. ಇವರು ದೊಡ್ಡ ಯೋಗಿಗಳು. ಇವರ ಗೀತಗಳಲ್ಲಿ ಆಸನ, ಶ್ವಾಸ ನಿಲ್ಲಿಸುವುದು (ಕುಂಭಕ), ಭ್ರೂಮಧ್ಯ ದೃಷ್ಟಿ, ಆರು ಮನಿ (ಷಟ್ ಚಕ್ರ), ಮೂರು ಕೋಣೆ (ಇಡಾ, ಪಿಂಗಳಾ, ಸುಷುಮ್ನಾ ನಾಡಿಗಳ ಸಂಗಮ) ಈ ಯೋಗದಲ್ಲಿಯ ಪಾರಿಭಾಷಿಕ ಶಬ್ದಗಳು ಬರುತ್ತವೆ. ಇವರ ಶೈಲಿಯಲ್ಲಿ ಲಾಲಿತ್ಯವಿದೆ, ನಾದ ಮಾಧುರ್ಯವಿದೆ, ಅರ್ಥ ಗೌರವವಿದೆ, ಕೆಲವು ಗೀತಗಳಲ್ಲಿ ಆದಿ ಪ್ರಾಸವಿದ್ದರೆ, ಇನ್ನೂ ಕೆಲವು ಗೀತಗಳಲ್ಲಿ ಅಂತ್ಯ ಪ್ರಾಸವಿದೆ. ಆದಿ, ಅಂತ್ಯ ಎರಡೂ ಪ್ರಾಸಗಳಿದ್ದ ಗೀತಗಳಿಗೂ ಇವರ ಕಾವ್ಯದಲ್ಲಿ ಕೊರತೆಯಿಲ್ಲ. ಜೀವನದೆಡೆಗೆ ದುಃಖ, ದೌರ್ಮನಸ್ಯ, ಉದ್ವಿಗ್ನತೆ, ನೈರಾಶ್ಯ ಈ ದೃಷ್ಟಿಯಿಂದ ಇವರು ನೋಡುವುದಿಲ್ಲ. ಉತ್ಸಾಹ ಪೂರ್ಣವಾದ, ಹರ್ಷಿತ ದೃಷ್ಟಿ ಇವರದು. 'ಘನಸುಖ, ನಿತ್ಯ ಸುಖ, ಪೂರ್ಣಾನಂದ, ಪರಮಾನಂದ, ಬೋಧಾನಂದ' ಈ ವಾಕ್ ಪ್ರಯೋಗಗಳು ಇವರ ಗೀತಗಳಲ್ಲಿ ಮೇಲಿಂದ ಮೇಲೆ ಕಂಡುಬರುತ್ತವೆ. 'ನಲಿವುದು' ಈ ಕ್ರಿಯಾಪದವೂ ಕೂಡ ಅನೇಕ ಸ್ಥಳ ಗಳಲ್ಲಿ ಕಾಣುತ್ತದೆ. ಆಪತ್ತು, ಬಿಕ್ಕಟ್ಟಿನ ಪ್ರಸಂಗ, ಸತ್ವ ಪರೀಕ್ಷೆ ಏನೇ ಬರಲಿ, ಇಲ್ಲವೆ ಯಾವುದೇ ಪರಿಸ್ಥಿತಿಯಲ್ಲಿ ಪರಮಾತ್ಮನಿಡಲಿ, ಬಂದದ್ದೆಲ್ಲ ಪ್ರಭುವಿನ ಪ್ರಸಾದ, ಆದದ್ದೆಲ್ಲ ಒಳಿತೇ ಆಯಿತು, ಈ ನಿತಾಂತ ವಿಶ್ವಾಸವೇ ಇವರ ಜೀವನಯೋಗ.

ಗುರುದೇವ ರಾ.ದ. ರಾನಡೆಯವರ ನಿಂಬರಗಿ ಆಧ್ಯಾತ್ಮಿಕ ಸಂಪ್ರದಾಯದಲ್ಲಿ ಭವತಾರಕರ ಎಷ್ಟೋ ಗೀತಗಳು ಪ್ರಚಲಿತವಿವೆ. ಧ್ಯಾನಕ್ಕೆ ಕುಳಿತಾಗ ಅಂದರೆ ನಾಮಸ್ಮರಣೆ ಮಾಡುವಾಗ, ಮನಸ್ಸು ಏಕಾಗ್ರವಾಗಲು ಇಂಥ ಪಾರಮಾರ್ಥಿಕ ಗೀತಗಳನ್ನು ಸಾಧಕರನೇಕರು ಹೇಳುತ್ತಾರೆ. ರಾನಡೆಯವರು ತಮ್ಮ Pathway to God in Kannada Literature ಈ ಗ್ರಂಥದಲ್ಲಿ ಭವತಾರಕರ ನಾಲ್ಕು ಗೀತಗಳ ಮೇಲೆ ವಿಸ್ತೃತ ಭಾಷ್ಯ ಬರೆದಿದ್ದಾರೆ. ಅವರು ಹೇಳುತ್ತಾರೆ,

"Bhavataraka is a writer of great Vedantic learning among the Karnatak mystics.... Bhavataraka was not only conversant with Sanskrit literature, but was also well-versed in Vedanta philosophy" (Pp. 73-74 ; 1970 edition). ೨೫ ನೊವ್ಹೆಂಬರ್ ೧೯೫೧ ರಂದು ಲಿಂಗರಾಜ ಕಾಲೇಜ ಬೆಳಗಾಂವ ಇಲ್ಲಿ ರಾನಡೆಯವರ Epitome of Karnataka Mysticism ಈ ವಿಷಯದ ಮೇಲೆ ಒಂದು ವ್ಯಾಖ್ಯಾನ ವಾಯಿತು. ಅಂದಿನ ಮುಂಬಯಿ ಪ್ರಾಂತದ ಮುಖ್ಯಮಂತ್ರಿಗಳಾದ ಬಿ.ಜಿ. ಖೇರರು ಅಧ್ಯಕ್ಷರಿದ್ದರು. ಆಗ ರಾನಡೆಯವರು ನುಡಿದದ್ದೇನಂದರೆ : "Bhavataraka seems to be a healthy type of the contemplative mystic, far away from the pessimistic philosopher. He finds his beatific joy in his association with and contemplation of the world." ಇದಕ್ಕೂ ಮುಂದೆ ಹೋಗಿ ಅವರು ತಮ್ಮ ಭಗವದ್ ಗೀತೆಯ ಮೇಲಿನ ಗ್ರಂಥದಲ್ಲಿ ಪರಮಾತ್ಮನ ದಿವ್ಯ, ಅದ್ಭುತ, ವಿರಾಟ್ ರೂಪದ ವಿವರಣೆ ಮಾಡುವಾಗ ಜ್ಞಾನೇಶ್ವರ, ಕಬೀರ, ತುಲಸೀದಾಸರ ಗೀತಗಳನ್ನು ಉದಾಹರಿಸಿದ್ದಾರೆ. ಜೊತೆಗೆ ಭವತಾರಕರ 'ದೃಷ್ಟಿಯೊಳಗೆ ದೃಷ್ಟಿ ನಿಂತಿತು' ಈ ಗೀತದ ಮೇಲೆಯೂ ಉದ್ಬೋಧಕ ಭಾಷ್ಯ ಬರೆದಿದ್ದಾರೆ. ಒಟ್ಟಿನಲ್ಲಿ, ಹಿಂದಿ ಸಂತ ಸಾಹಿತ್ಯದಲ್ಲಿ ಕಬೀರ, ತುಲಸಿದಾಸರಿಗೆ, ಅದರಂತೆ ಮರಾಠಿ ಸಂತ ಸಾಹಿತ್ಯದಲ್ಲಿ ಜ್ಞಾನೇಶ್ವರ, ತುಕಾರಾಮ ಇವರಿಗೆ ಯಾವ ಉನ್ನತ ಸ್ಥಾನವಿದೆಯೊ ಅದೇ ಉಚ್ಚಸ್ಥಾನ ಕನ್ನಡ ಸಂತ ಸಾಹಿತ್ಯದಲ್ಲಿ ಭವತಾರಕರಿಗೆ ಇದೆ, ಎಂದರೆ ಅತಿಶಯೋಕ್ತಿ ಆಗಲಾರದು.

## ಗೀತೆಗಳ ಸಾರ

ಸಾಮಾನ್ಯವಾಗಿ ಭವತಾರಕರ ಗೀತಗಳಲ್ಲಿ ಬ್ರಹ್ಮ, ಜೀವ, ಜಗತ್ತು, ನೈತಿಕ ಉಪದೇಶ, ಪಾರಮಾರ್ಥಿಕ ಅನುಭವ ಈ ವಿಷಯಗಳ ವಿವರಣೆ ಇದೆ. ಮೊದಲು ಬರುವದು ಬ್ರಹ್ಮತತ್ತ್ವದ ಸ್ವರೂಪ. ಪರಬ್ರಹ್ಮವು ನಿರಪೇಕ್ಷ, ಕ್ರಿಯಾಕರ್ಮರಹಿತ, ಎಲ್ಲಕ್ಕೂ ಮೀರಿದ ತತ್ತ್ವವು. ಅದಕ್ಕಿಂತ ಹೆಚ್ಚಿನದೇನೂ ಇಲ್ಲ. ಅಲ್ಲಿಯೇ ಪರಾಕಾಷ್ಠೆಯಾಯಿತು (ಕ್ರಮಾಂಕ ೧). ಆದರೂ ಈ ಸತ್ಯವಾದ ಬ್ರಹ್ಮತತ್ತ್ವದಲ್ಲಿ ಮಾಯೆಯೆಂಬ ಅಸತ್ಯವಿದೆ. ಅರಿವಿನಲ್ಲಿ ಮರವು ಇದೆ. ಅಪರೋಕ್ಷಾನುಭೂತಿ ಅಂದರೆ ಪ್ರತ್ಯಕ್ಷ ಪರಮಾತ್ಮನ ದರ್ಶನವಾದ ಮೇಲೆ,

ಅಸತ್ಯ, ಅಜ್ಞಾನ, ವಿಸ್ಮೃತಿ ಇವೆಲ್ಲ ಹರಿದು ಹೋಗುತ್ತವೆ (ಕ್ರ. ೨). ಮಾಯೆಯ ಪ್ರಭಾವವು ಅಷ್ಟಿಷ್ಟಲ್ಲ. ಸುರ, ನರ, ಮುನಿಗಳು ಮಾಯಾಪಾಶದಲ್ಲಿ ಸಿಕ್ಕಿರುವರು. ಪಾರ್ವತಿಯೇ ಮೋಹಿತಳಾಗಿ ಶಿವನ ಪಾಶದಲ್ಲಿ ಬೀಳಲಿಲ್ಲವೆ ? (ಕ್ರ. ೩). ಜಗತ್ತಿನ ರೀತಿಯೇ ವಿಚಿತ್ರವೆನಿಸುತ್ತದೆ. ದುರ್ಜನರಿಗೆ, ಅಧಮರಿಗೆ ಎಲ್ಲ ಅನುಕೂಲವಾಗಿದೆ, ಎಂದು ತೋರುತ್ತದೆ. ಇಂಥವರಿಗೆ ಸಾಧು ಸಂತರ ಬಗ್ಗೆ ಆದರವಿಲ್ಲ. ಗುರು ಭಕ್ತರಿಗೆ ಮಾತ್ರ ಯಾವ ಅಭಿಮಾನವೂ ಇಲ್ಲ (ಕ್ರ. ೪). ಕ್ಷಣಭಂಗುರವಾದ ಲೌಕಿಕ ಸಂಪತ್ತನ್ನು ಸಂಗ್ರಹಿಸಿದೆವು, 'ತಲೆಯಲ್ಲಿ ನಿಂದು ನಗುವಳು ಮೃತ್ಯು ದೇವತೆ' ಈ ಸತ್ಯವನ್ನು ಮರೆತೆವು. ಇಹದಲ್ಲಿ ಸುಖವಿಲ್ಲ, ಪರದಲ್ಲಿ ಪದವಿಯಿಲ್ಲ. ಕರ್ಮ ಬಾಧೆಯು ತಪ್ಪಲಿಲ್ಲ. ಅಪರೂಪ ನರದೇಹದ ಪ್ರಾಪ್ತಿಯಾಯಿತು. ಆದರೆ ಸದ್ಗತಿಯ ಮಾರ್ಗ ದೂರಾಯಿತು (ಕ್ರ. ೫). ಮಡದಿ, ಮಕ್ಕಳು, ಒಡವೆ ವಸ್ತುಗಳು ಲೌಕಿಕ ಅಧಿಕಾರ ಇವೆಲ್ಲ ಮಿಥ್ಯೆ. ಬ್ರಹ್ಮ ಒಂದನ್ನು ಬಿಟ್ಟು ಉಳಿದದ್ದೆಲ್ಲ ಸುಳ್ಳೇ ಸರಿ. ಬ್ರಹ್ಮ ಸಂಸ್ಪರ್ಶವಿಲ್ಲದೆ ಪರಾತ್ಪರ ಸತ್ಯವೆಂದಿಗೂ ದೊರೆಯದು. (ಕ್ರ. ೬). ಮುಂದಿನ ಎರಡು ಗೀತಗಳ ಸ್ಪಷ್ಟ ಅರ್ಥವಾಗದು. ಹರ್ಷ, ವಿಷಾದ, ಹಸಿವು, ನೀರಡಿಕೆ, ಮುಪ್ಪು, ಸಾವುಗಳು ಶಾರೀರಕವಿರುವವು. ಶಬ್ದ, ಸ್ಪರ್ಶ, ರೂಪ, ರಸ, ಗಂಧ ಈ ತನ್ಮಾತ್ರೆಗಳಿಂದ ಸುಖ ದುಃಖಗಳು ಜೀವಕ್ಕೆ ಅಂಟುವವು. ಶರೀರ, ಮನಸ್ಸುಗಳ ಉಪಾಧಿಯಿಂದ ಜೀವನು ಬಂಧನ ಕ್ಕೊಳಗಾಗುತ್ತಾನೆ. ದೇಹಭಾವ ಬಿಡಲಾರದೆ ಆತ್ಮಬೋಧ ಸಿಗದು (ಕ್ರ. ೭). ಸಂಚಿತ, ಕ್ರಿಯಮಾಣ, ಪ್ರಾರಬ್ಧ ಇವು ದೇಹಕ್ಕೆ ಸಂಬಂಧಿಸಿದವುಗಳು. ಆದ್ದರಿಂದ ಅವುಗಳನ್ನು ಬಿಟ್ಟು ಬಿಡು. ಸ್ಥೂಲ, ಸೂಕ್ಷ್ಮ, ಕಾರಣ ಈ ಮೂರೂ ದೇಹಗಳನ್ನು ತ್ಯಜಿಸಿ ಮಹಾಕಾರಣ ಅಂದರೆ ಬ್ರಹ್ಮತತ್ತ್ವವೇ ನಿನ್ನ ಉಚ್ಚ ಗುರಿಯಾಗಲಿ (ಕ್ರ. ೮). ಈ ಮಾಯಾ ಪ್ರಪಂಚವು ಏನಿದೆ ? ಇದು ನಿನಗೆ ತಿಳಿದಿದೆಯೋ ? ನಿನ್ನದೇ ಎನ್ನುವ ದೇಹ ನಿಜವಾಗಿ ನಿನ್ನದಲ್ಲ. ಆದರೆ ದೇಹಭಾವ ಹೋಗಲಿಲ್ಲ. ಎಲ್ಲರೂ ಆಶೆಗೆ ಬಲಿಯಾಗಿದ್ದಾರೆ. ನಿಜವಾದ ಭಕ್ತನು ದೇಹಧಾರಿಯಾದರೂ ಜೀವನ್ಮುಕ್ತನು (ಕ್ರ. ೯). ನಿನ್ನ ದೇಹವೇ ಗುಡಿ. ಆದರೆ ಆ ಗುಡಿಯಲ್ಲಿ ಮಮತೆ, ಭೇದ ಭಾವವೆಂಬ ಕಸವು ತುಂಬಿದೆ. ಕಸವನ್ನೆಲ್ಲ ತೆಗೆದು ಗುಡಿಯನ್ನು ಸ್ವಚ್ಛ ಮಾಡಬೇಡವೇ ? (ಕ್ರ. ೧೦). ಸ್ಥೂಲ, ಸೂಕ್ಷ್ಮ, ಕಾರಣ ಈ ದೇಹಗಳೆಲ್ಲವೂ ತೋರಿಕೆಗಳು. ತುರ್ಯಾತೀತ ಅಥವಾ ಉನ್ಮನಿ ಅವಸ್ಥೆ ಇದೇ ಸತ್ಯ (ಕ್ರ. ೧೧). ದೇಹದಿಂದ ಆತ್ಮಕ್ಕೆ ಆನಂದವೆಂದೂ ದೊರೆಯದು. ಆದರೂ ಅದನ್ನು ನಿಷ್ಫಲ ವೆಂದು ತ್ಯಾಜ್ಯ ಮಾಡುವದು ಸರಿಯಲ್ಲ. ದೇಹವೇ ಸತ್ಕರ್ಮಕ್ಕೆ ಅನುಕೂಲ

ವಾಗುವದು. ದೇಹವು ನಾಮರೂಪಾತ್ಮಕ ಅಂದರೆ ಅಸತ್ಯವಾಗಿದ್ದರೂ ನೇಮ ನೀತಿಗಳನ್ನು ನಡೆಯಿಸಲು ಅದೇ ಸಾಧನವು. ಜೀವವಿರುವ ವರೆಗೆ ದೇಹ ಸಂಬಂಧ ತಪ್ಪಿದ್ದಲ್ಲ. ಯಾರಿಗೆ ಉನ್ಮನಿ ಅವಸ್ಥೆ ಪ್ರಾಪ್ತವಾಗಿದೆಯೋ ಅವರು ಎಲ್ಲ ದೇಹ ಸಂಬಂಧದಿಂದ ದೂರಾದವರು (ಕ್ರ. ೧೨). ಮನವೆಂಬ ಮರ್ಕಟವ ತಾಳಲಾರೆನು. ಜ್ಞಾನೇಂದ್ರಿಯ ಕರ್ಮೇಂದ್ರಿಯಗಳು ದೇಹಕ್ಕೆ ಸಂಬಂಧಪಟ್ಟವು ಗಳು. ಆದರೆ ಮನಸ್ಸಿನ ಮಧ್ಯಸ್ಥಿಯಿಲ್ಲದೆ ಅವು ಕೆಲಸ ಮಾಡಲಾರವು. ಕಣ್ಣು ನೋಡುವುದೆಂದರೆ, ಮನಸ್ಸೇ ನೋಡುವದು, ಕಣ್ಣಲ್ಲ. ದೇಹವಿರುವ ವರೆಗೆ ಮನಸ್ಸಿನ ಕಾಟ ತಪ್ಪದು. ದೇಹ-ಬುದ್ಧಿಯು ಆತ್ಮ-ಬುದ್ಧಿಯಾಗದ ಹೊರತು ಮನದ ಪೀಡೆ ತಪ್ಪದು (ಕ್ರ. ೧೩). ನಿನ್ನ ತನುವು ಮಣ್ಣಿಗೆ ಎರವು. ಮಾಯಾ ಮರವು ಮುಸುಕಿ ಸತ್ಯ ಮಿಥ್ಯಾ ನಿನಗೆ ತಿಳಿಯದಾಯ್ತು. ಆದ್ದರಿಂದ ಭಗವದ್ಭಕ್ತರ ಪಾದಸೇವಿಸಿ ಆತ್ಮಜ್ಞಾನದ ಮಾರ್ಗ ಬೇಗನೆ ಹಿಡಿ (ಕ್ರ. ೧೪). ಮನುಷ್ಯನಿಗೆ ಎಷ್ಟು ಗರ್ವ ? ಎಷ್ಟು ಅಭಿಮಾನ ? ಈ ಮಾನಾಭಿಮಾನ, ಈ ಅಹಂಕಾರ ಬರಲಿಕ್ಕೆ ಮನುಷ್ಯನಲ್ಲಿ ಏನಿದೆ ? ರಾವಣನೇ ಮಹಾಜ್ಞಾನಿ ; ಅವನಿಗಿಂತ ಮನುಷ್ಯನು ಹೆಚ್ಚಿನ ಜ್ಞಾನಿಯೇ ? ದುರಭಿಮಾನ ಬರಲು ಇವನಿಗೆ ಪರಶಿವನ ವರವಿದೆಯೇ ? (ಕ್ರ. ೧೫). ನರದೇಹವು ಪ್ರಾಪ್ತವಾಗುವುದು ಅತಿ ದುರ್ಲಭ. ಈ ದೇಹದ ಸಹಾಯದಿಂದಲೇ ಪರ ಗತಿಯು ಪ್ರಾಪ್ತವಾಗುತ್ತದೆ (ಕ್ರ. ೧೬). ವಿಷಯ ಸುಖ ವಿಷ ಸಮಾನವೆಂದು ಇನ್ನೂ ಮನದಟ್ಟಾಗಲೊಲ್ಲದು. ಮನದ ಚಾಂಚಲ್ಯ ಅಳಿಯಲಿಲ್ಲ. ಸದ್ಗುರುವು ಕಾಣಿಸಲಿಲ್ಲ. ಆಧ್ಯಾತ್ಮಿಕ ಮಾರ್ಗ ತೋರಲಿಲ್ಲ. ಪರವಸ್ತುವಿನ ದರ್ಶನವಾಗಲಿಲ್ಲ. ನಿರ್ವಿಷಯದ ಬೋಧಾನಂದ ದೊರೆಯಲಿಲ್ಲ (ಕ್ರ. ೧೭). ಪಾರಮಾರ್ಥಿಕ ತತ್ತ್ವವು ಮನ ಮಾತುಗಳನ್ನು ಮೀರಿದ್ದರಿಂದ ಅದನ್ನು ಇತರರಿಗೆ ತಿಳಿಸುವುದು ಅಸಾಧ್ಯ. ಗುರುಬೋಧದಿಂದ ಅದರ ಸ್ವರೂಪ ಹೊಳೆಯುವುದು. ಭೇದ ಬುದ್ಧಿ ಅಳಿದು, ಸತ್ಸಂಗತಿಯನ್ನು ಹಿಡಿದು ನಿಜಾನಂದವಾದ ಬೋಧಮುಕ್ತಿಯನ್ನು ಸಾಧಿಸುವುದು ನಿನ್ನ ಆದ್ಯ ಕರ್ತವ್ಯ (ಕ್ರ. ೧೮). ಅಜ್ಞಾನ ಅಂಧಃಕಾರದಿಂದ ತುಂಬಿದ ಈ ಜೀವನವೇ ಒಂದು ಕಾರಿರುಳಿನಂತೆ ಅದೆ. ಇಲ್ಲಿ ವಿಷಯ ಸುಖಕ್ಕೆ ಮೋಹಿತರಾದಿರಿ. 'ಎದ್ದೇಳು' ಎಂದು ಎಚ್ಚರಿಕೆ ಕೊಡುವ ಚಿತ್ ಸೂರ್ಯನು ಬರುತ್ತಲಿದ್ದಾನೆ. ಹಿಂದಾದುದಾಗಲಿ. ಮುಂದಾದರೂ ಒಂದು ಕ್ಷಣ ಬಿಡದೆ ಸದ್ಗುರುವಿನ ಪಾದ ಹೊಂದಿ ಪೂರ್ಣಾನಂದ ಪಡೆಯಿರಿ (ಕ್ರ. ೧೯). ಬುದ್ಧಿಗೇಡಿತನದಿಂದ ಎಂದೂ ಸದ್ಗತಿಯಾಗದು. ನಾನು, ನನ್ನದು ಎಂಬ ಸ್ವಾರ್ಥ ಬುದ್ಧಿಯಿಂದ ಎಂಥ ಕೀಳು

ಸ್ಥಿತಿ ಪ್ರಾಪ್ತವಾಯಿತು ನಿನಗೆ. ಇನ್ನಾದರೂ ಗುರುಮಂತ್ರ ಪಠಿಸಿ ಭಕ್ತರ ಸಹವಾಸ ದಲ್ಲಿದ್ದರೆ ನೀನೇ ಸ್ವರಾಟ್ ಆಗುವಿ (ಕ್ರ. ೨೦).

ಮುಂದಿನ ನಾಲ್ಕು ಗೀತಗಳಲ್ಲಿ ಭಗವದ್ ಭಕ್ತರನ್ನು ರಕ್ಷಿಸಲು ಹಾಗೂ ಅನೀತಿಯಲ್ಲಿ ಮುಳುಗಿದ ಅವರ ನಿಂದಕರನ್ನು ಶಿಕ್ಷಿಸಲು, ಪರಮಾತ್ಮನಿಗೆ ಪ್ರಾರ್ಥನೆಯಿದೆ (ಕ್ರ. ೨೧–೨೪). ಪರತತ್ತ್ವವು ಅಂತಸ್ಥವು. ಸಾಮಾನ್ಯ ಜನರು ಕಣ್ಣು ತೆರೆದಿದ್ದರೂ ಅದು ಅವರಿಗೆ ಕಾಣಿಸದು. ಆತ್ಮಿಕ ಅನುಭವವಿದ್ದ ಭಕ್ತನಿಗೆ ಮಾತ್ರ ಅವನು ಕಣ್ಣು ಮುಚ್ಚಿದರೂ, ಆ ದಿವ್ಯ ರೂಪವು ಅವನಿಗೆ ಕಾಣಿಸುವುದು. ಆ ರೂಪದ ದಿವ್ಯತೆಯಿಂದ ಉಳಿದ ಎಲ್ಲ ವಸ್ತುಗಳು ಕಳೆಗುಂದುವುವು (ಕ್ರ. ೨೫). ನಿನ್ನೊಳು ನೀ ನೋಡು. ಸದ್ಗುರುವಿನ ಅನುಗ್ರಹ ಪಡೆದು ನಾಮಸ್ಮರಣೆ ಮಾಡಿದರೆ ಅಗಣಿತ ಆಧ್ಯಾತ್ಮಿಕ ಸಂಪತ್ತು ಕೈಸೇರುವುದು (ಕ್ರ. ೨೬). ಪರಿಪೂರ್ಣ ವಾದ ಸದ್ವಸ್ತುವು ದೃಶ್ಯ ಅದೃಶ್ಯಗಳನ್ನು ಮೀರಿದೆ, ಎಂದು ಶ್ರುತಿಗಳು ಸಾರುತ್ತವೆ. ಆ ಚಿತ್‌ತತ್ತ್ವವು ಸರ್ವವ್ಯಾಪಿ, ಹಾಗೂ ದ್ವಂದ್ವಾತೀತ. ಈ ನರದೇಹಕ್ಕೆ ಬಂದ ಮೇಲೆ ಆ ಪರ ವಸ್ತುವನ್ನು ನೋಡಬೇಕಲ್ಲವೆ ? (ಕ್ರ. ೨೭). ವೇದೋಪನಿಷತ್ತು ಗಳು ಜೀವ ಶಿವರ ಭೇದ ಹೇಳಿಲ್ಲ. ಗುರುಭವತಾರಕನ ಐಕಾಂತಿಕ ಭಕ್ತನಾದರೆ ನೀನೇ ಪರಬ್ರಹ್ಮನಾಗುವಿ (ಕ್ರ. ೨೮).

ದೇಹ, ಮನ, ಸ್ಮೃತಿ ಇವುಗಳಿಗೆ ಸಾಕ್ಷಿಯಾದ ಚಿನ್ಮಯಾತ್ಮನು ಬೇರೆಯೇ ಇರುವನು. ಜನನ ಮರಣಗಳೆಲ್ಲ ದೇಹಕ್ಕೆ ಸಂಬಂಧಿಸಿದವು. ಉನ್ಮನಿ ಅವಸ್ಥೆ ಯಲ್ಲಿರುವವನಿಗೆ ಅವುಗಳು ಎಂದೂ ತಾಕುವುದಿಲ್ಲ. ನಿತ್ಯಾನಿತ್ಯ–ವಸ್ತು– ವಿವೇಕವಾದ ಮೇಲೆ ಮಿಥ್ಯಾ ವಿಷಯಗಳೆಲ್ಲ ನಶಿಸುತ್ತವೆ. ತಾನೇ ಪರಿಪೂರ್ಣ ಸದ್ವಸ್ತು, ಎಂದು ಪ್ರತೀತಿಯಾಗುತ್ತದೆ. ಇಂಥ ಜೀವನ್ಮುಕ್ತನ ಸಂಚಿತವೆಲ್ಲ ನಷ್ಟವಾಗಿ ಹೋಗುತ್ತದೆ. ಅವನಿಗೆ ಕ್ರಿಯಮಾಣವಂತೂ ಇಲ್ಲವೇ ಇಲ್ಲ. ಅವನು ಶಾಂತಿ ಸಮಾಧಾನಗಳಿಂದ ಪ್ರಾರಬ್ಧವನ್ನು ಭೋಗಿಸಿ ಎಲ್ಲ ಬಂಧನಗಳ ಆಚೆಗೆ ಹೋಗುತ್ತಾನೆ (ಕ್ರ. ೨೯). ಭವತಾರಕರು ಇನ್ನೂ ಸದ್ಗುರುವಿನ ಲಕ್ಷಣಗಳನ್ನು ವಿವರಿಸುತ್ತಾರೆ. ಸದ್ಗುರುವು ದಶೇಂದ್ರಿಯಗಳ ಬಂಧನದಲ್ಲಿದ್ದ ನನ್ನನ್ನು ಮುಕ್ತನಾಗಿ ಮಾಡಿದನು. ಚಿತ್ತದ ಚಾಂಚಲ್ಯವನ್ನು ನಿಲ್ಲಿಸಿ ಎಲ್ಲ ಕಡೆಗೆ ಆತ್ಮನ ಪ್ರಕಾಶವನ್ನು ತೋರಿಸಿದನು. ಷಡ್ರಿಪುಗಳನ್ನು ನಾಶ ಮಾಡಿ ಷಟ್‌ಚಕ್ರ ಭೇದನ ಕ್ರಿಯೆಯನ್ನು ಕಲಿಸಿದನು. ನನ್ನ ಜೀವ ಭಾವ ಹೋಗಿ ಅವನ ಕೃಪೆಯಿಂದ ಪರಮಾನಂದ ಪ್ರಾಪ್ತಿಯಾಯಿತು (ಕ್ರ. ೩೦). ಅವನ ಕೃಪೆಯಿಂದ ಆಸನ ಸ್ಥಿರವಾಯಿತು.

'ದೃಷ್ಟಿ, ಮನ, ಪವನ ಬೆರೆಸಿ' ನಾಸಾಗ್ರದಿ ನೋಡಲು, ದೇದೀಪ್ಯಮಾನ ಪ್ರಕಾಶವು ಕಾಣಿಸಿತು. ಹೀಗೆ ಶ್ರೀಗುರುವು ಪರಬ್ರಹ್ಮವನ್ನು ತೋರಿಸಿದ ಮೇಲೆ ಶಾಸ್ತ್ರಾಗಮಗಳನ್ನು ಓದುವದೇಕೆ ? (ಕ್ರ. ೩೧). ನೀನು ಅನೇಕ ಯೋನಿಗಳಲ್ಲಿ ಬಂದು ದುಃಖ ದುರಿತಗಳಿಂದ ಬೆಂದೆ ; ಹೆಣ್ಣು, ಹೊನ್ನು, ಮಣ್ಣುಗಳನ್ನು ನೆನೆಸಿ ಕೆಟ್ಟೆ. ಸ್ವರೂಪ ಅಂದರೆ ಆತ್ಮ-ರೂಪ ತಿಳಿಸಿ ಸದ್ಗತಿಕೊಡುವ ಸದ್ಗುರುವಿನ ಅನುಗ್ರಹ ಪಡೆಯಬಾರದೆ ? (ಕ್ರ. ೩೨). ನಿನ್ನ ನೀ ತಿಳಿದುಕೊ. ಹಾಲು ತುಪ್ಪ ಬಿಟ್ಟು ಅಡವಿಯ ಹುಲ್ಲನ್ನು ಮೆಲ್ಲಬೇಡ. ನಿಜವಾಗಿಯೂ ನೀನು ಚಿನ್ಮಯಾತ್ಮಕ ಬ್ರಹ್ಮನೇ ಇರುವಿ. ಸಾಧು ಪುರುಷರ ಮಾರ್ಗದರ್ಶನದಿಂದ ಬೋಧಾಮೃತ ದೊರಕಿಸಿದ ಮೇಲೆ ಯಾವ ಕುಂದು ಕೊರತೆಗಳೂ ಇರಲಾರವು (ಕ್ರ. ೩೩). ಮಾಯಾ ಮೋಹ ಕಳೆದು, ವಿಷಯ ವಾಸನೆ ಬಿಟ್ಟು, ಪಂಚ ಕೋಶಗಳನ್ನು ಮೀರಿ ಚಿನ್ಮಯಾತ್ಮಕನಾಗುವದೇ ನಿತ್ಯ ಪರಾನಂದದ ಅವಸ್ಥೆ, ಅದೇ ನಿಜ ಮುಕ್ತಿ (ಕ್ರ. ೩೪). ಸಂಸಾರದ ಆಸಕ್ತಿ ಬಿಟ್ಟು ನೀತಿ ಮಾರ್ಗದಲ್ಲಿ ಪರಿಪೂರ್ಣನಾಗಿ ಸದ್ಗುರು ಬೋಧಾಮೃತ ಸೇವಿಸಿ ಬ್ರಹ್ಮಜ್ಞಾನವನ್ನು ದೊರಕಿಸು (ಕ್ರ. ೩೫). ಆದಿಯಲ್ಲಿ ಪರಮೇಶ್ವರನೇ ಅವರವರ ಯೋಗ್ಯತೆಯಂತೆ ಜೀವರಿಗೆ ಪಾಲು ಹಂಚಿದ್ದಾನೆ. ಆದ್ದರಿಂದ ಇತರರ ವಸ್ತುಗಳ ಆಶೆ ಯಾಕೆ ? ಕೊನೆಗೆ ದೇಹವು ಮಣ್ಣಿನ ಪಾಲು ಆಗುವುದು. ಪುಣ್ಯಕ್ಕೆ ಸುಖ, ಪಾಪಕ್ಕೆ ದುಃಖ ಕಟ್ಟಿಟ್ಟದ್ದೇ. ಭಕ್ತಿಯಿಂದಲೇ ಮುಕ್ತಿ ; ಯಾಕಂದರೆ ಭಕ್ತರ ಹೊಣೆಗಾರಿಕೆ ಪರಮಾತ್ಮನ ಮೇಲೆ ಅದೆ (ಕ್ರ. ೩೬). ಮೂರು ಮಲಗಳನ್ನು ಬಿಡಲಿಲ್ಲ. ಕೇವಲ ಕುಲದಭಿಮಾನ ದಲ್ಲಿಯೇ ಬಿದ್ದೆ. ದೇಹವೇ ಕ್ಷೇತ್ರ. ಅದನ್ನು ಅಗಿದು ಹಸನ ಮಾಡದೆ, ಬಿತ್ತಿದರೆ ಯಾವ ಫಲ ಬರುವದು ? ವೇದಶಾಸ್ತ್ರಗಳ ಕೇವಲ ಪಠನದಿಂದ ದುರಾಗ್ರಹ ಬುದ್ಧಿ ಮಾತ್ರ ಬಂತು. ನಾನು ಯಾರು ?, ಇದರ ವಿವೇಕ ನನಗಾಗಲಿಲ್ಲ (ಕ್ರ. ೩೭). ಸುಮ್ಮನೆ ದೊರಕುವುದೇ ಬ್ರಹ್ಮ ಪದವಿಯು ? ತನುಮನಗಳು ಸದೈವ ಜಾಗ್ರತವಿರಬೇಕು. ಯಾವುದಾದರೂ ಪ್ರಾಪಂಚಿಕ ಬಯಕೆ ಇಟ್ಟು ಕಾರ್ಯ ಮಾಡಿದರೆ, ಅದರ ದುಷ್ಪರಿಣಾಮವು ನಿಶ್ಚಿತ. ಬಾಣ ಎಸೆದ ಮೇಲೆ ತಿರುಗಿ ಬರಲಾರದು (ಕ್ರ. ೩೮). ಕಾಪುರುಷರಂತೆ ಕಲ್ಲಾಗಬೇಡ. ಸಂಸಾರವ ನೆಚ್ಚಬೇಡ. ಇನ್ನಾದರೂ ಎಚ್ಚರೋ, ಶಿವಾನುಭವವನ್ನು ಇಲ್ಲಿಯೇ ದೊರಕಿಸಬೇಡವೇ ? (ಕ್ರ. ೩೯). ಸಂಸಾರದಲ್ಲಿ ಆಸಕ್ತನಾದ ಮನುಷ್ಯ ಹಾಗೂ ಸಂಸಾರದಲ್ಲಿ ವಿರಕ್ತ ನಾದ ಸತ್ಪುರುಷ ಇವರಲ್ಲಿ ಮಹದಂತರವಿದೆ. ಸ್ನಾನ ಸಂಧ್ಯಾ ಜಪತಪಗಳಲ್ಲಿ ಕರ್ಮಠರು ಆಸಕ್ತರಾಗಿ ಕ್ಷಣಿಕ ಸಂಸಾರವೇ ಸತ್ಯವೆನ್ನುವರು. ಸಂತರು ಪರಮಾತ್ಮ

ನೊಬ್ಬನೆ ಸತ್ಯ, ಉಳಿದದ್ದೆಲ್ಲ ಮಿಥ್ಯೆ ಎನ್ನುವರು. ಜಾಗ್ರತ್, ಸ್ವಪ್ನ, ಸುಷುಪ್ತಿ ಅವಸ್ಥೆಗಳಲ್ಲಿ ಸಾಮಾನ್ಯರು ಬಳಲುತ್ತಿದ್ದರೆ, ಸಂತರು ಮೂರೂ ಅವಸ್ಥೆಗಳನ್ನು ಮೀರಿ ತುರ್ಯಾವಸ್ಥೆಯಲ್ಲಿರುವರು (ಕ್ರ. ೪೦). ನರ ಜನ್ಮಕ್ಕೆ ಬಂದು ಗಳಿಸಿದ್ದಾದರೂ ಏನು ? ದುರ್ಗುಣ ಕಳೆಯಲಿಲ್ಲ. ಸದ್ಗುಣ ಸೇವಿಸಲಿಲ್ಲ. ಕತ್ತಲೆಯಲ್ಲಿಯೂ ಪ್ರಕಾಶ ನೋಡುವ ಒಳಗಣ್ಣು ಅಂದರೆ ದಿವ್ಯ ದೃಷ್ಟಿಬೇಕು. ದೃಢದಿಂದ ರಾಮನಾಮ ನೆನೆದರೆ, ಹುಟ್ಟು ಸಾವುಗಳ ಚಕ್ರ ತಪ್ಪುವದು. ಆಗ ಭಕ್ತನು ನಿಷ್ಕಾಮನಾಗುವನು. ಘನಾನಂದ ಸೇವಿಸುವನು (ಕ್ರ. ೪೧). ಚಿಂತೆ ಮಾಡಿ ಮಾಡಿ ಭ್ರಾಂತನಾಗಬೇಡ. ನಿಶ್ಚಿಂತತೆಯ ಮಾರ್ಗ ಹೇಳುವೆ. ಅಂತರಂಗದಲ್ಲಿ ಶಾಂತಿಯನ್ನು ತಾಳಿ, ಪತಿತ ಪಾವನ ರಘುನಾಥನ ನಾಮವ ಗುಪಿತದಿ ಜಪಿಸು. ಜೀವ ಪರಮಾತ್ಮರ ಐಕ್ಯ ಅನುಭವಿಸದೇ ಸುಮ್ಮನೇ ಬಾಯಿಯಿಂದ 'ಶಿವಃ ಅಹಂ, ಶಿವಃ ಅಹಂ' ಎಂದು ಜಪಿಸಿದರೇನು ಬಂತು ? ದೃಶ್ಯವೆಲ್ಲ ನಶ್ವರವಿದೆ. ದುರ್ಜನರ ಸಂಗಬೇಡ ; ಸತ್ಯಸಂಧನಾಗು. ಭಗವಂತನ ಕೃಪೆಗೆ ಪಾತ್ರನಾಗು (ಕ್ರ. ೪೨). ಗುರು ಭಕ್ತಿಯಿದ್ದಲ್ಲಿ ಜೀವನ್ಮುಕ್ತಿಯಿದೆ. ಗುರುವೇ ಪರ ದೈವತವೆಂದು ತಿಳಿ. ಅವನ ಬೋಧವನ್ನು ಸ್ಮರಿಸು. ಸಾಧು ಸಂತರಿಗೆ ಶರಣು ಹೋಗು (ಕ್ರ. ೪೩). ತನ್ನ ತಾನೇ ತಿಳಿದು ಧನ್ಯನಾಗುವ ರೀತಿ ಹೇಗಿದೆ, ಎಂದರೆ ಮೊದಲು ವಿವೇಕ ಬುದ್ಧಿ ಬೇಕು. ನಿತಾಂತ ಭಕ್ತಿ ಬೇಕು. ಸಂತಸಜ್ಜನರ ಸಹವಾಸಬೇಕು. ವಿಷಯ ವಾಸನೆ ಬಿಟ್ಟು ನಾಸಿಕಾಗ್ರದಲ್ಲಿ ಮನಸ್ಸು ಸ್ಥಿರವಾಗಬೇಕು. ಅಂದರೆ ದಿವ್ಯನಾದ ಕೇಳುವದು. ಕರ್ಮ ಬಂಧನವನ್ನು ದಾಟಿ ಜಯಶೀಲನಾಗಿ ಮುಂದೆ ಭವಕ್ಕೆ ಬಾರದಂತೆ ಸದಾನಂದದಲ್ಲಿ ನಲಿಯುವದೇ ಕೃತಕೃತ್ಯನಾಗುವ ಬಗೆ (ಕ್ರ. ೪೪). ಪರಮೇಶ್ವರನೇ ! ನಿನ್ನ ಪಾದವ ನಂಬಿದೆ. ನನ್ನ ಅವಗುಣಗಳನ್ನು ಲಕ್ಷಿಸಬೇಡ, ಪರಮಾನಂದವನ್ನು ಪಾಲಿಸು (ಕ್ರ. ೪೫). ಸಂತ ಸಜ್ಜನರನ್ನು ಮನ್ನಿಸಿ ಅವರನ್ನು ರಕ್ಷಿಸಿದಂತೆ, ಬೇಗ ಬಂದು ನನ್ನನ್ನೂ ರಕ್ಷಿಸು (ಕ್ರ. ೪೬). ಆತ್ಮಜ್ಞಾನವಾದರೆ ನೀನೇ ಶಿವನೆಂಬ ದೃಢ ಅನುಭವವಾಗುತ್ತದೆ. ನಾಮಸ್ಮರಣೆ ಮಾಡದೆ ಸುಮ್ಮನೆ ಒರಲುವದರಲ್ಲಿ ಏನೂ ಅರ್ಥವಿಲ್ಲ (ಕ್ರ. ೪೭). ಸಾಧುಸಂತರು ಸಂಶಯಾತೀತರು. ದೇಹ ಮನಗಳ ಪರಿವೆ ಅವರಿಗಿಲ್ಲ : ವ್ರತ ನೇಮಗಳಿಲ್ಲ. ಅವರು ದ್ವಂದ್ವಾತೀತರು. ಕೋಪ ತಾಪ ರಹಿತರು. ಎತ್ತ ನೋಡಿದತ್ತ ಅವರು ಭಗವಂತನನ್ನೇ ಕಾಣುತ್ತಾರೆ. ಭಗವಂತನನ್ನು ಬಿಟ್ಟು ಉಳಿದ ಯಾವದೂ ಅವರಿಗೆ ಗೋಚರಿಸದು (ಕ್ರ. ೪೮). ಇಂದಿನ ದಿನವೇ ಶಿವರಾತ್ರಿಯು ಸಾಧಿಸಿತು. ಇನ್ನು ದೇಹಾಭಿಮಾನ, ವಿಷಯ ಸುಖಗಳು ಇಲ್ಲದಂತೆ ಆದವು, ಜೀವನ್ಮುಕ್ತನಾದೆ.

ಭವದೊಳಗಿದ್ದರೂ ಅದರ ಲೇಪವಿಲ್ಲ. ಅದರ ಭಯವಿಲ್ಲ (ಕ್ರ. ೪೯). ಪರವಸ್ತುವಿನಲ್ಲಿ ತಲ್ಲೀನರಾದ ಪುಣ್ಯ ಪುರುಷರ ಆಚರಣೆಯು, ಪಾಪಿ ಜನಕ್ಕೆ ಅರ್ಥವಾಗದು. ಆ ಮಹಾತ್ಮರು ನಿಶ್ಚಿಂತರು. ಆನಂದ ಭರಿತರು. ಸದೈವ ಪರಮಾತ್ಮನಲ್ಲಿ ಧ್ಯಾನರತರು. ಜನ್ಮ ಮರಣಾತೀತರು. ಅಸತ್ಯ, ಮಾಯಾ, ಮೋಹ ಎಲ್ಲ ಕಳೆದು ನಿತ್ಯ ವಸ್ತುವಿನಲ್ಲಿ ಪರಿಪೂರ್ಣರಾಗಿರುವರು (ಕ್ರ. ೫೦). ಶಿವಯೋಗಿಯು ಷಡ್ರಿಪುಗಳನ್ನು ಗೆದ್ದು, ತ್ರಿಗುಣಾತೀತನಾಗಿ, ಷಟ್‌ಚಕ್ರವನ್ನು ಭೇದಿಸಿ, ಅದ್ವಯ ಬೋಧದೊಳಗೆ ಲಯಗೊಂಡ ತನ್ನ ಸದ್ಗುರುವನ್ನು ಸದಾ ಭಜಿಸುತ್ತಿರುವನು (ಕ್ರ. ೫೧). ಭೋಗ ಸುಖವ ತ್ಯಾಗ ಮಾಡಿ, ಆಗಮೋಕ್ತದಿಂದ ನಡೆಯುವ ಶಿವಯೋಗಿಯು ಬಂದಿರುವನು. ತಮ್ಮ ನಿಜ ಸ್ವರೂಪವನ್ನು ಮರೆತ ಮತ್ತು ಅಹಂಕಾರದಿಂದ ಪೀಡಿತರಾದ ಬದ್ಧಜನರ ಎಲ್ಲ ಕರ್ಮ ಕಳೆದು, ಶರಣಾಗತರಾದ ಅವರಿಗೆ ಪರಬ್ರಹ್ಮ ತೋರಿಸುವಂಥ ಅಲೌಕಿಕ ಸಾಮರ್ಥ್ಯದ ಶಿವಯೋಗಿಯು ಬಂದಿದ್ದಾನೆ. ತತ್ತ್ವಮಸಿ ಈ ಮಹಾವಾಕ್ಯದ ರಹಸ್ಯ ತಿಳಿಸಿ, ಮಾಯಾ ಮೋಹಾಂಧಕಾರವನ್ನು ನಾಶಮಾಡಿ, ಆ ಶಿವಯೋಗಿಯು ನಿತ್ಯಸುಖವನ್ನು ಕೊಡುವನು. ಅವನು ಎಲ್ಲ ಭಕ್ತವೃಂದಕ್ಕೆ ಆನಂದ ಪದವಿಯ ನೀಡುವ ದಯಾಸಿಂಧುವು. (ಕ್ರ. ೫೨), ಪರಮಾರ್ಥವು ಗುಹ್ಯಗೂಢವಲ್ಲ. ಇದರ ರಹಸ್ಯ ಪ್ರತ್ಯಕ್ಷ ಶಿವನೇ ಪಾರ್ವತಿಗೆ ಹೇಳಿದ್ದಾನೆ. ಪರಮಾರ್ಥ ಪ್ರಾಪ್ತವಾದ ಪುರುಷನಿಗೆ ಜನನ ಮರಣ ಭಯವಿಲ್ಲ. ಎಲ್ಲ ಸಾಧುಸಂತರು ಒಂದೇ ಪ್ರಕಾರದ ಸದ್ಗತಿ ಪಡೆದಿದ್ದಾರೆ (ಕ್ರ. ೫೩). ಸಾಧು ಸಜ್ಜನರಿಗೆ ಸಂಚಿತ, ಕ್ರಿಯಮಾಣ ಈ ಪ್ರಕಾರದ ಯಾವ ಕರ್ಮಬಾಧೆಯೂ ಇಲ್ಲ. ಕೆರೆ, ಬಾವಿಯ ನೀರು ಸಂತ ಮಹಾತ್ಮರ ಪಾದ ಸ್ಪರ್ಶದಿಂದ ಪವಿತ್ರವಾದ ಮೇಲೆ, ಅದು ಸಾಮಾನ್ಯವಾದ ನೀರಲ್ಲ ; ಅದು ಪಾವನಕೆ ಪಾವನ ಮಾಡುವ ಪಾದೋದಕ. ಬ್ರಹ್ಮಸಂಸ್ಪರ್ಶವನ್ನು ಸದೈವ ಅನುಭವಿಸುವ ಮಹಾತ್ಮನು ನರನಲ್ಲ ; ಅವನು ಸಾಕ್ಷಾತ್ ಪರಮಾತ್ಮನು (ಕ್ರ. ೫೪). ಕಾಲಕರ್ಮವನ್ನು ಕಾಲಿಲೆ ಒದೆಯುವ, ಪುಣ್ಯ ಪುರುಷನು ಅಜ್ಞಾನ ರೂಪೀ ಕತ್ತಲಿಗೆ ಅಂಜುವದಿಲ್ಲ. ಭ್ರೂಮಧ್ಯದಲ್ಲಿ ತನ್ನ ದೃಷ್ಟಿ ನಿಲ್ಲಿಸಿದ ಈ ಪುರುಷನು ವಿಷಯ ವಾಸನೆಗೆ ಎಂದೂ ವಶವಾಗನು. ಅಮೃತ ಸೇವಿಸಿದ ಈತನು ಅಂಬಲಿಗಾಗಿ ಎಂದೂ ಹಂಬಲಿಸುವದಿಲ್ಲ. ತತ್ತ್ವಮಸಿ ಈ ಮಹಾವಾಕ್ಯದ ರಹಸ್ಯವನ್ನು ಅನುಭವಿಸಿದ ಈತನು ಮಿಥ್ಯಾವಸ್ತುಗಳಲ್ಲಿ ಎಂದೂ ಆಸಕ್ತನಾಗನು. ಭವಬಾಧೆಗೆ ಬೀಳಲಾರನು ; ಅವನು ದುಃಖ ರಹಿತನು (ಕ್ರ. ೫೫). ಆಧ್ಯಾತ್ಮಿಕ ಸಂಪತ್ತನ್ನು ಗಳಿಸಲು ಉದ್ಯುಕ್ತನಾಗು. ಈ ದಿವ್ಯಸಂಪತ್ತು ಎಂದೂ ತೀರದು.

ತನ್ನನ್ನು ಬಿಟ್ಟು ಎಂದೂ ಅದು ಅಗಲದು. ಅದಕ್ಕೆ ಕರ್ಮ ಲೇಪವಿಲ್ಲ. ಯಾವಾಗಲೂ ನಿಜದ ಅರಿವಿನೊಳಗಿರುವದರಿಂದ ಅದಕ್ಕೆ ವಿಸ್ಮೃತಿ ಎಂಬುದು ಇಲ್ಲವೇ ಇಲ್ಲ. ಆ ಮುಕ್ತಿ-ಸಂಪತ್ತು ಭಕ್ತನೆದುರಿಗೆ ಸಾರಿ ಚಲ್ಲಿದೆ (ಕ್ರ. ೫೬). ಬ್ರಹ್ಮ ಸಂಸ್ಪರ್ಶವಾದ ಮೇಲೆ ಯಾವ ವಸ್ತುವಾದರೇನು, ಅದು ಪರಮ ಪಾವನ ಪರಮಾತ್ಮರೂಪವೇ. ಸದ್ಗುರುವಿನ ಪಾದ ಸೋಂಕಲು ಉಚ್ಚ-ನೀಚ ಎಂಬ ಭಾವ, ಆ ವಸ್ತು ಈ ವಸ್ತು ಎಂಬ ಭೇದ-ಜ್ಞಾನ ಉಳಿಯಲಾರದು (ಕ್ರ. ೫೭). ಗುರು ಭಕ್ತರಿಗೆ ದುರಿತ ಬಾಧೆಗಳಿಲ್ಲ. ಕಲ್ಪವೃಕ್ಷದಲ್ಲಿ ಬಡತನವಿರುವದುಂಟೇ ? ಪರಮಾತ್ಮಯೋಗದಲ್ಲಿ ಅಚಲನಾದವನಿಗೆ ಕರ್ಮದ ಬಂಧನವಿಲ್ಲ. ಸದ್ಗುರು ಬೋಧವು ಸ್ಥಿರವಾದ ಮೇಲೆ ಕಾಮ ಕ್ರೋಧಾದಿಗಳು ಉಳಿಯಲಾರವು. ಬ್ರಹ್ಮಾತ್ಮೈಕ್ಯ ಸ್ಥಿತಿಯನ್ನು ಅನುಭವಿಸಿದವನಿಗೆ ದ್ವೈತಬುದ್ಧಿಯೆಲ್ಲಿಯದು ? (ಕ್ರ. ೫೮). ಪಂಚ ಮಹಾಭೂತಗಳನ್ನು ಗೆದ್ದು ನಿತ್ಯ ನಾಮಸ್ಮರಣೆಯಲ್ಲಿ ರತನಾಗಿ ಪರಮ ವೈರಾಗ್ಯದ ಮೂರ್ತಿಯಾದ ಯೋಗಿಯು, ಸತತ ನಡೆದ ಅನಾಹತ ನಾದವನ್ನು, ಅಂದರೆ ದಿವ್ಯ ನಾದವನ್ನು ಲಾಲಿಸುವನು. ಅವನಿಗೆ ಇಹಪರ ಎಂಬ ಭೆದವಿಲ್ಲ (ಕ್ರ. ೫೯). ಆರೂಢಯೋಗಿಯ ವಿಲಕ್ಷಣ ವರ್ತನವು ಸಾಮಾನ್ಯ ಜನಕ್ಕೆ ಅರ್ಥವಾಗದು. ಮಾತನಾಡದಿದ್ದರೂ ಅವನು ಮೌನಿಯಲ್ಲ. ಅವನು ಶಬ್ದದೊಳು ನಿಃಶಬ್ದನಾದವನು. ವ್ಯಾವಹಾರಿಕ ನೀತಿ ನಡೆವಳಿಕೆಗಳನ್ನು ಮೀರಿದವನು. ಸತ್ಸಂಗದಲ್ಲಿ ಸದಾ ನಲಿಯುವನು. ವಂದಿಸಲು ಹಿಗ್ಗನು ; ನಿಂದಿಸಲು ಕುಗ್ಗನು. ಅವನು ಪರಿಪೂರ್ಣ ಆನಂದದಲ್ಲಿ ನೆಲೆಸಿಹನು (ಕ್ರ. ೬೦). ಶ್ರೀಸದ್ಗುರುನಾಥನು ಭವಭಯ ಪರಿಹರಿಸುವನು. ಅವನ ಅನುಗ್ರಹವಾದ ಮೇಲೆ ಪುನರ್ಜನ್ಮವೆಲ್ಲಿಯದು ? ಅವನು ನಿಜವಾಗಿಯೂ ಅವತಾರಿ ಪುರುಷನು (ಕ್ರ. ೬೧). ಪರಮೇಶ್ವರನೇ ! ನನ್ನ ಎಲ್ಲ ವಾಸನೆಗಳು ನಾಶವಾಗಲಿ, ಉನ್ಮನಿ ಅವಸ್ಥೆಯಲ್ಲಿಯ ಘನವಸ್ತು ಎನಗೆ ದೊರೆಯಲಿ. ಜನನ ಮರಣಗಳ ಉಪದ್ರವವು ಹಿಂಗಲಿ. ಪರಕೆ ಪರತರವಾದ ಪರವಸ್ತು ಒಂದೇ ಇದೆ, ಎಂಬ ಅದ್ವೈತಾನುಭವ ವೆನಗಾಗಲಿ, ಎಂದು ಭಕ್ತನ ಭಾವಪೂರಿತ ಪ್ರಾರ್ಥನೆ (ಕ್ರ. ೬೨). ಸದ್ಗುರುವೇ ನಿನ್ನ ಅನುಗ್ರಹವಾದ ಮೇಲೆ ದುರಿತದ ಬಾಧೆಯಿಲ್ಲ. ನಿನಗೆ ಭಕ್ತ-ರಕ್ಷಕನೆಂದು ಬಿರುದು ಇರಲು ಕರುಣೆ ದೋರು, ಎಂದು ಬೇರೆ ಬೇಡಲೇಕೆ ? ಕತ್ತಲೆಯನ್ನು ಪರಿಹರಿಸೆಂದು ಮತ್ತೆ ಸೂರ್ಯನಿಗೆ ಪ್ರಾರ್ಥಿಸಬೇಕೆ ? (ಕ್ರ. ೬೩). ಅನಾದಿ ಕಾಲದಿಂದ ಬಂದ ಪಾರಮಾರ್ಥಿಕ ಮಾರ್ಗ ತೋರಿಸಿ ಅಭೇದ ಜ್ಞಾನವನ್ನು ಪರಿಪಾಲಿಸುವ ಸದ್ಗುರುವು ಪ್ರತ್ಯಕ್ಷ ಮಹಾದೇವನೇ. ಭವ ಸಾಗರದಲ್ಲಿ ಸಿಕ್ಕು

ನರಳುವ ಮನಷ್ಯನು ಒಮ್ಮೆಯಾದರೂ ಗುರುವನ್ನು ಸ್ಮರಿಸಿದರೆ, ಅವನಿಗೆ ಸದ್ಗತಿ ಕೊಡುವ ಗುರುದೇವನು ಸಾಕ್ಷತ್ ಶಿವನೇ. ಆಶಾಪಾಶವ ಬಿಡಿಸಿ, ಕ್ಲೇಶ ಕರ್ಮಗಳನ್ನು ಕಡಿದು ಹಾಕಿ, ಐಕಾಂತಿಕ ಧ್ಯಾನ ಮಾಡಲು ಬೋಧಿಸಿದ ಸದ್ಗುರುವು ಪ್ರತ್ಯಕ್ಷ ಪರಬ್ರಹ್ಮನು (ಕ್ರ. ೬೪). ಆತ್ಮಜ್ಞಾನವಾದ ಮೇಲೆ ಭೇದ-ಬುದ್ಧಿ ಎಲ್ಲಿಯದು ? ಶ್ರವಣ, ಮನನ, ನಿದಿಧ್ಯಾಸವು ಬಲಿಯಲು ಜಗದ ನಿಃಸಾರತೆಯು ಮನದಟ್ಟಾಗುವದು. ತತ್ತ್ವಮಸಿ ಮಹಾವಾಕ್ಯದ ಅನುಭವ ಬಂದ ಮೇಲೆ ಎಲ್ಲ ಮಿಥ್ಯಾ ವಸ್ತುಗಳು ನೀಗುವುವು. ಆಗಮೋಕ್ತ ಶಿವಯೋಗವ ಮಾಡಲು ಈಗಲೆ ಜೀವನ್ಮುಕ್ತಿ ಸಿಗುವದು (ಕ್ರ. ೬೫). ಸಹಜ ಸಮಾಧಿ ಸುಖ ಪ್ರಾಪ್ತವಾದವರಿಗೆ ಎಲ್ಲವೂ ಬ್ರಹ್ಮಮಯವಾಗುವದು. ಮಾಡಿದ ಅನ್ನ ಅವರಿಗೆ ಪವಿತ್ರ ಪ್ರಸಾದ. ಅವರು ಆಡುವದೇ ಭಗವನ್ನಾಮ ಕೀರ್ತನೆ. ಜಲವೆಲ್ಲ ಅವರಿಗೆ ಪುಣ್ಯ ತೀರ್ಥ. ಸ್ಥಳವೆಲ್ಲ ಪವಿತ್ರ ಕ್ಷೇತ್ರ. ಇಂಥ ಪುಣ್ಯ ಪುರುಷರ ಬೋಧ ಪಡೆದು ಪೂರ್ಣ ಸುಖಿಯಾಗು (ಕ್ರ. ೬೬). ಮುಂದಿನ ಮೂರು ಗೀತಗಳಲ್ಲಿ, ಈಶ್ವರ ಸಾಕ್ಷಾತ್ಕಾರದ ನಂತರ ಭವತಾರಕರ ಮುಖದಿಂದ ಸಹಜವಾಗಿ ಹೊರಬಿದ್ದ ಆನಂದೋದ್ಗಾರ ಗಳನ್ನು ಕೇಳುತ್ತೇವೆ. 'ಶಿವರಾತ್ರಿಯ ಶುಭದಿನದಲ್ಲಿ ಶಿವನ ಪ್ರತ್ಯಕ್ಷ ದರ್ಶನವೆನಗೆ ಆಯಿತು. ನಾಲ್ಕೂ ಅವಸ್ಥೆಗಳಲ್ಲಿ ಅಂದರೆ ಜಾಗ್ರತ್, ಸ್ವಪ್ನ, ಸುಷುಪ್ತಿ, ತುರ್ಯಾ ಈ ಎಲ್ಲ ಅವಸ್ಥೆಗಳಲ್ಲಿ ತನ್ಮಯನಾದೆ. ಕಿವಿಯಲ್ಲಿ ದಿವ್ಯ ನಾದವು ತುಂಬಿದೆ. ಕಣ್ಣಿನಲ್ಲಿ ಪರಮೇಶ್ವರನ ರೂಪ ತುಂಬಿದೆ. ಸದ್ಗುರುವಿನ ಕೃಪಾಪೂರ್ಣ ಉಪದೇಶ ದಿಂದ ಸದ್ವಸ್ತು ಎನ್ನ ಕೈಸೇರಿತು' (ಕ್ರ. ೬೭). ಗುಡಿಯ ತುಂಬ ದೇವರ ಕಂಡೆನು. ಬ್ರಹ್ಮಭೂತವು ಎನಗೆ ಬಡಕೊಂಡಿತು. ಅದಕ್ಕೆ ಜ್ಞಾನೇಂದ್ರಿಯ, ಕರ್ಮೇಂದ್ರಿಯಗಳಿಲ್ಲ. ಅದು ಹೆಣ್ಣು ಅಲ್ಲ ; ಗಂಡೂ ಅಲ್ಲ. ಎಲ್ಲಕ್ಕೂ ಮಿಗಿಲಾದ ಪರಾತ್ಪರ ಸತ್ಯವದು. ಅದರ ಪೂಜೆಯು, ಯಾವ ಪೂಜೆಯ ಸಾಹಿತ್ಯವಿಲ್ಲದೇ ಆಯಿತು. 'ವಿಲಕ್ಷಣದ ಮಾತೆಂದರೆ ಆ ವಸ್ತುವು ಪೂಜೆಯ ಮಾಡುವ ಪೂಜಾರಿ ಯನ್ನೇ ನುಂಗಿತು' (ಕ್ರ. ೬೮). ಮುಂದಿನ ಗೀತದಲ್ಲಿ ಪರಾನುಭವದ ಚರಮ ಸೀಮೆಯನ್ನೇ ನಾವು ಕಾಣುತ್ತೇವೆ. 'ಪರಮೇಶ್ವರನ ದಿವ್ಯ ದೃಷ್ಟಿಯಲ್ಲಿ ನನ್ನ ದೃಷ್ಟಿ ನೆಟ್ಟಿತು. ಕಣ್ಣಿನೊಳಗೆ ಕಣ್ಣು ಕಂಡೆ. ಚಿನ್ಮಯ ರೂಪವನ್ನು ಕಣ್ಣಾರೆ ಕಂಡ ಮೇಲೆ ದೃಶ್ಯ ವಿಶ್ವವು ನಷ್ಟವಾಯಿತು. ಕರ್ಮವೆಲ್ಲ ನಾಶವಾಗಿ ನಿಜವಾದ ಧರ್ಮವು ಸ್ಥಿರವಾಯಿತು. ಭೂಮಿಯಿಂದ ಆಕಾಶದವರೆಗೆ ಪರಮಾತ್ಮನ ನಿರ್ವಿಕಾರ ಆಶ್ಚರ್ಯ ಮಯ, ವಿರಾಟ್ ರೂಪವು ಕಂಗೊಳಿಸಿತು. ಎಲ್ಲ ವಿಶ್ವವ್ಯಾಪಾರವು ಭಗವಲ್ಲೀಲಾ ವಿಲಾಸವೆನಿಸಿ, ಈ ಸೃಷ್ಟಿಯಲ್ಲಿಯೇ ನಾನು ತುಷ್ಟಿಗೈದೆನು' (ಕ್ರ. ೬೯).

# ರುಕ್ಮಾಂಗದ ಪಂಡಿತರು ಜೀವನ ಚರಿತ್ರೆ

ಆಧಿಭೌತಿಕ, ಆಧ್ಯಾತ್ಮಿಕ ಹಾಗೂ ಆಧಿದೈವಿಕ ಈ ತ್ರಿವಿಧ ತಾಪಗಳಿಂದ ಪೀಡಿತರಾದ ಮಾನವರ ದುಃಖನಿವಾರಣೆ ಮಾಡಿ ಅವರಿಗೆ ಚಿರಶಾಂತಿ ಕೊಡುವ ಮಹಾ ಮಹಿಮರು ಶ್ರೀ ರುಕ್ಮಾಂಗದರು. ಇವರ ಜೀವನದಲ್ಲಿ ನಡೆದ ವೆಂದು ಪ್ರಚಲಿತವಿರುವ ಎರಡು ಘಟನೆಗಳು, ಅಂದರೆ ಪಂಢರಪುರದ ವಿಜಯ ವಿಠ್ಠಲನ ಉದರರೋಗ ನಿವಾರಿಸಿದ್ದು ಹಾಗೂ ಆದಿಶೇಷನ ತಲೆ ನೋವನ್ನು ಗುಣಪಡಿಸಿದ್ದು – ಇವುಗಳನ್ನು ಲಕ್ಷದಲ್ಲಿಟ್ಟರೆ ರುಕ್ಮಾಂಗದರ ಅಲೌಕಿಕ ಸಾಮರ್ಥ್ಯದ ಪ್ರತೀತಿಯಾಗುತ್ತದೆ. ಮನುಷ್ಯನಿಗೆ ಅಂಟಿರುವ ಆಧಿವ್ಯಾಧಿಗಳಿಗೆ ರುಕ್ಮಾಂಗದರು ಉಪಾಯ ನೀಡುತ್ತಿದ್ದರು. ಶಿಷ್ಯರ ದುರ್ಧರವಾದ ಭವರೋಗ ವನ್ನು ಕಳೆಯುವ, ಹಾಗೂ ಅವರಿಗೆ ಮುಕ್ತಿ ಪಥವನ್ನು ತೋರಿಸುವ ಸದ್ಗುರು ಗಳೆಂದರೆ ರುಕ್ಮಾಂಗದರು.

ನಮ್ಮಲ್ಲಿ ಐತಿಹಾಸಿಕ ದೃಷ್ಟಿ ಕಡಿಮೆ. ಸತ್ಪುರುಷರ ಜೀವನವನ್ನು ಅವರಿದ್ದಾಗಲೇ ಬರೆದಿಡುವ ಅಭ್ಯಾಸ ನಮ್ಮಲ್ಲಿ ಇಲ್ಲ. ಅವರ ಎಲ್ಲ ಬರಹಗಳನ್ನು ಹಾಗೂ ಅವರು ಉಪಯೋಗಿಸಿದ ಪವಿತ್ರ ವಸ್ತುಗಳನ್ನು ಸಂಗ್ರಹಿಸಿ ಈ ಸಾಹಿತ್ಯ ಸಾಮಗ್ರಿಗಳ ಆಧಾರದಿಂದ ಅವರ ವಸ್ತುನಿಷ್ಠ ಜೀವನವನ್ನು ಚಿತ್ರಿಸುವ ಹವ್ಯಾಸವೂ ನಮ್ಮಲ್ಲಿ ಕಡಿಮೆ. ಕಾಲ ಉರುಳುತ್ತ ಹೋದಂತೆ ಐತಿಹಾಸಿಕ ಅವಶೇಷಗಳು ಲೋಪ ಹೊಂದುತ್ತವೆ. ಅವರ ಪ್ರತ್ಯಕ್ಷ ಶಿಷ್ಯರ, ಅವರ ವಂಶಜರ ಸ್ಮೃತಿಯೂ ಕುಂದುತ್ತದೆ. ಹೀಗಾಗಿ ಎಷ್ಟೋ ಸತ್ಪುರುಷರ ಜೀವನದ ಬಗ್ಗೆ ನಮಗೆ ಯಥಾರ್ಥವಾದ ಜ್ಞಾನವಿಲ್ಲ. ರುಕ್ಮಾಂಗದರ ಅಗ್ರಗಣ್ಯ ಶಿಷ್ಯರೆಂದರೆ ರಾಜೀವಾ ನಂದರು. ಇವರ ಮೊಮ್ಮಕ್ಕಳಾದ ರಾಮದಾಸರು 'ಗುರು ಮಾಲಿಕಾ' ಎಂಬ ಗ್ರಂಥವನ್ನು ರಚಿಸಿದರು. ಇದು ಮರಾಠಿಯಲ್ಲಿದೆ. ಛಂದಸ್ಸು ಓವಿ ಪ್ರಕಾರದ್ದು. ಇದರಲ್ಲಿ ೧೩ ಪ್ರಕರಣಗಳಿವೆ. ಇದು ರುಕ್ಮಾಂಗದರ ಜೀವನದ ಮೇಲೆ ಪ್ರಕಾಶ ವನ್ನು ಬೀರುತ್ತದೆ. ಇದೇ ಭಕ್ತವೃಂದದ ಪಾರಾಯಣ ಗ್ರಂಥ. ಗುರುಮಾಲಿಕಾ ಈ ಚರಿತ್ರೆಯಲ್ಲಿ ಗೌಡಪಾದ, ಗೋವಿಂದ ಯತಿ, ಶಂಕರಾಚಾರ್ಯ ಈ ಗುರು ಪರಂಪರೆ ಹೇಳಲಾಗಿದೆ. ಈ ಪರಂಪರೆಯಲ್ಲಿಯೇ ಗೌರಾನಂದ ಎಂಬ ಯತಿ ಗಳಾದರು, ಎಂದು ಗ್ರಂಥದಲ್ಲಿ ಉಲ್ಲೇಖವಿದೆ. ಈ ಗೌರಾನಂದರೇ ರುಕ್ಮಾಂಗದರ ಆಧ್ಯಾತ್ಮಿಕ ಗುರುಗಳು. ಹೀಗೆ ರುಕ್ಮಾಂಗದರು ಅದ್ವೈತ ಸಂಪ್ರದಾಯ ಪರಂಪರೆಯವರು.

ರುಕ್ಮಾಂಗದರ ತಾಯಿಯವರು ಲಕ್ಷ್ಮೀದೇವಿ. ತಂದೆಯವರು ಕೃಷ್ಣಪಂಡಿತ. ವಿಜಾಪುರದಲ್ಲಿ ರಾಜ್ಯವಾಳಿದ ಎರಡನೇ ಆದಿಲ್ ಶಾಹಿ ಬಾದಶಹನ ನ್ಯಾಯ ಖಾತೆಯಲ್ಲಿ ಕೃಷ್ಣ ಪಂಡಿತರು ಉಚ್ಚ ಅಧಿಕಾರಿಗಳಾಗಿದ್ದರು. ಅಪಾರ ವಿದ್ವತ್ತೆ, ಧರ್ಮ ಪರಾಯಣತೆ, ಪರೋಪಕಾರ ವೃತ್ತಿ ಇವುಗಳಿಂದ ಇವರು ಆದರ್ಶ ಪುರುಷರಾಗಿದ್ದರು. ಮೇಲಾಗಿ ವೈದ್ಯಶಾಸ್ತ್ರ ಪ್ರವೀಣರು. ನಿರಪೇಕ್ಷ ಬುದ್ಧಿಯಿಂದ ದೀನದಲಿತರ ದುಃಖ ಪೀಡೆಯನ್ನು ನಿವಾರಿಸಲು ಸದೈವ ಸಿದ್ಧರು. ಈ ಸಾತ್ವಿಕ ದಂಪತಿಗಳಿಗೆ ಒಂದೇ ಕೊರತೆ ಎಂದರೆ ಸಂತಾನವಿದ್ದಿಲ್ಲ. ಕೃಷ್ಣಪಂಡಿತರು ಕುಟುಂಬ ಸಹಿತ ತೀರ್ಥಯಾತ್ರೆಗೆ ಹೊರಟರು. ಅನೇಕ ಪುಣ್ಯಕ್ಷೇತ್ರಗಳನ್ನು ಸಂದರ್ಶಿಸಿ ವಿರೂಪಾಕ್ಷನ ದರ್ಶನಕ್ಕಾಗಿ ಪಂಪಾಕ್ಷೇತ್ರಕ್ಕೆ ಬಂದರು. ಅಲ್ಲಿ ಗೌರಾನಂದ ಎಂಬ ಯತಿಗಳನ್ನು ಕಂಡರು. ಯತಿಗಳು ದಂಪತಿಗಳ ಮನದಲ್ಲಿ ಕೊರೆಯುತ್ತಿದ್ದ ಚಿಂತೆಯನ್ನು ತಮ್ಮ ಅಂತರ್ಜ್ಞಾನದಿಂದ ತಿಳಿದುಕೊಂಡು ಶರಣಾಗತರಾದ ಅವರಿಗೆ ಅಭಯ ಹಸ್ತ ನೀಡಿದರು. ಪರಮೇಶ್ವರನು ನಿಮ್ಮ ಇಚ್ಛೆಯನ್ನು ಪೂರ್ಣ ಮಾಡುವನೆಂದು ಆಶೀರ್ವದಿಸಿದರು. ವಿಜಾಪುರಕ್ಕೆ ಮರಳಿ ಬಂದ ಮೇಲೆ ಭಗವದನುಗ್ರಹ ಪಡೆದ ದಂಪತಿಗಳಿಗೆ ಒಂದು ಕನ್ಯಾರತ್ನವು ಪ್ರಾಪ್ತವಾಯಿತು. ಅವಳ ಹೆಸರು ಭಾಗೀರಥಿ. ಮುಂದೆ ಕೆಲವು ವರ್ಷಗಳ ನಂತರ ಪುತ್ರೋತ್ಸವದ ಭಾಗ್ಯವೂ ಅವರಿಗೆ ಲಭಿಸಿತು (ಶಕೆ ೧೫೩೨). ಈ ಗಂಡು ಮಗುವೇ ರುಕ್ಮಾಂಗದ. ದುರ್ದೈವದಿಂದ ರುಕ್ಮಾಂಗದರಿಗೆ ಚಿಕ್ಕಂದಿನಲ್ಲಿಯೇ ತಾಯಿಯ ವಿಯೋಗವಾಯಿತು. ಮುಂದೆ ಅಕ್ಕನ ಮದುವೆ, ಹಾಗೂ ಇವರ ಉಪನಯನ ಇವು ನೆರವೇರಿದವು. ನಂತರ ಸ್ವಲ್ಪೇ ದಿನಗಳಲ್ಲಿ ತಂದೆಯವರೂ ಪರಲೋಕ ವಾಸಿಗಳಾದರು. ಹೀಗಾಗಿ ರುಕ್ಮಾಂಗದರ ಹೊಣೆ ಅಕ್ಕನ ಮೇಲೆಯೇ ಬಿದ್ದಿತು. ಚಿಕ್ಕಂದಿನಲ್ಲಿ ರುಕ್ಮಾಂಗದರ ಲಕ್ಷ್ಯವು ಆಟಪಾಟದ ಕಡೆಗೇ ಇತ್ತು. ಅಭ್ಯಾಸದ ಕಡೆಗೆ ಇರಲಿಲ್ಲ. ಪ್ರಕಾಂಡ ಪಂಡಿತರ ವಂಶದಲ್ಲಿ ಹುಟ್ಟಿ ಬಂದು, ಆದರೆ ವಿದ್ಯೆಯಿಲ್ಲದೇ ತಮ್ಮನು ಉಳಿಯುವನಲ್ಲ, ಎಂಬ ಚಿಂತೆಯು ಅಕ್ಕನನ್ನು ಆವರಿಸಿತು. ಪರಮಾತ್ಮನ ಸಂಕಲ್ಪವೇನೋ ಎಂಬಂತೆ, ಅದೇ ಸಮಯಕ್ಕೆ ತೀರ್ಥಾಟನೆಗೆ ಹೊರಟ ಗೌರಾನಂದ ಯತಿಗಳು ವಿಜಾಪುರಕ್ಕೆ ಆಗಮಿಸಿದರು. ಅವರು ಕೃಷ್ಣ ಪಂಡಿತರ ಮನೆಗೆ ಬಂದರು. ಭಾಗೀರಥಿಯು ಪೂಜ್ಯಭಾವದಿಂದ ಯತಿಗಳನ್ನು ಬರಮಾಡಿಕೊಂಡು ತನ್ನನ್ನು ಪೀಡಿಸುತ್ತಿದ್ದ ಚಿಂತೆಯನ್ನು ಅವರ ಚರಣಕಮಲಗಳಲ್ಲಿ ಅರುಹಿದಳು. ಯತಿಗಳು ರುಕ್ಮಾಂಗದ

ನನ್ನು ಕೃಪಾ ಕಟಾಕ್ಷದಿಂದ ನೋಡಿ ಅವನಿಗೆ ಮಂತ್ರೋಪದೇಶ ಮಾಡಿದರು. ಅಂದಿನಿಂದ ರುಕ್ಮಾಂಗದರ ಜೀವನದಲ್ಲಿ ಆಮೂಲಾಗ್ರ ಬದಲಾವಣೆ ಯಾಯಿತು. ದೀರ್ಘ ಅಭ್ಯಾಸ ಮತ್ತು ಆಧ್ಯಾತ್ಮಿಕ ಧ್ಯಾನದಲ್ಲಿ ಅವರು ಮಗ್ನರಾದರು. ಬೆಳಿಗ್ಗೆ ಷೋಡಶೋಪಚಾರಯುಕ್ತ ವಿಜಯವಿಠ್ಠಲನ ಪೂಜೆ, ಮಧ್ಯಾಹ್ನದಲ್ಲಿ ಪುರಾಣ-ನಿರೂಪಣೆ, ಸಾಯಂಕಾಲದಲ್ಲಿ ಪ್ರವಚನ, ಕೀರ್ತನ ಹಾಗೂ ರಾತ್ರಿಯಲ್ಲಿ ಪಾರಮಾರ್ಥಿಕ ಗ್ರಂಥಗಳ ರಚನೆ ಇವು ಅವರ ದೈನಂದಿನ ಕಾರ್ಯಕ್ರಮಗಳಾದವು. ವೇದ ವೇದಾಂತಗಳ ಅಧ್ಯಯನ, ಅಧ್ಯಾಪನ ಕಾರ್ಯವೂ ನಡೆಯಿತು. ಅನೇಕ ಭಾಷಾ ಪ್ರವೀಣರಾದರು, ಸಂಗೀತ ದಲ್ಲಿಯೂ ನಿಪುಣರಾದರು. ವಂಶ ಪರಂಪರೆಯಲ್ಲಿ ಬಂದ ವೈದ್ಯಕೀಯ ವಿದ್ಯೆಯನ್ನು ಆಳವಾಗಿ ಅಭ್ಯಸಿಸಿದರು. ಪರಹಿತಾರ್ಥವಾಗಿ ಔಷಧ ತಯಾರಿಸುವ ಒಂದು ರಸಶಾಲೆಯನ್ನು ಸ್ಥಾಪಿಸಿದರು. ಈ ರಸಶಾಲೆಯಲ್ಲಿ ಚೂರ್ಣ, ಆಸವ, ಮಾತ್ರಾದಿಗಳು ಸಿದ್ಧವಾಗತೊಡಗಿದವು. ವೈದ್ಯಕೀಯ ಜ್ಞಾನದ ಪ್ರಸಾರಕ್ಕಾಗಿ ಒಂದು ಆಯುರ್ವೇದ ಪಾಠಶಾಲೆಯನ್ನೂ ತೆಗೆದರು. ಅನೇಕ ತರುಣರು ಇಲ್ಲಿ ಶಿಕ್ಷಣ ಪಡೆದು ವೈದ್ಯಕೀಯ ವ್ಯವಸಾಯ ಸಾಗಿಸುತ್ತ ಬಂದರು. ದಿನದಿನಕ್ಕೆ ರುಕ್ಮಾಂಗದರ ಶಿಷ್ಯರ ಸಂಖ್ಯೆ ಹೆಚ್ಚಾಗಹತ್ತಿತು. ಎಲ್ಲ ಕಡೆಗೆ ಅವರ ಕೀರ್ತಿ ಹಬ್ಬಿತು. ಅನೇಕ ಚಮತ್ಕಾರಗಳೂ ನಡೆದವು.

ಇವರ ಸಂನ್ಯಾಸಾಶ್ರಮದ ಹೆಸರು 'ರುಚಿರಾನಂದ ಸರಸ್ವತಿ'. ಪರಮಾತ್ಮನ ಧ್ಯಾನವು ಆತ್ಮಜ್ಞಾನಕ್ಕಾಗಿ ಹಾಗೂ ಆತ್ಮಾನಂದಕ್ಕಾಗಿ ಇದೆ. 'ಜ್ಞಾನಾರ್ಥಂ ಸುಖಕಾರಣಮ್' ಎಂದು ಶ್ರೀಮದಾನಂದ ತೀರ್ಥರು ಋಗ್ವೇದ ಮಂತ್ರ (೧.೪೦.೬)ದ ಮೇಲಿನ ತಮ್ಮ ಭಾಷ್ಯದಲ್ಲಿ ಹೇಳಿದ್ದಾರೆ. ಇದೇ ಅರ್ಥವನ್ನು 'ರುಚಿರಾನಂದ ಸರಸ್ವತಿ' ಎಂಬ ಈ ಅಭಿಧಾನವು ಸೂಚಿಸುತ್ತದೆ. ಇದರಲ್ಲಿಯ ಸರಸ್ವತಿ ಶಬ್ದವು ಆತ್ಮಜ್ಞಾನದ ಅಥವಾ ಪರಾವಿದ್ಯೆಯ ದ್ಯೋತಕವು ; ರುಚಿರಾನಂದ ಈ ಶಬ್ದವು ಆತ್ಮಾನಂದದ ದ್ಯೋತಕವು. ಹೀಗೆ ಇದರಲ್ಲಿ ಜ್ಞಾನ ಮತ್ತು ಆನಂದಗಳ ಸಂಗಮವಿದೆ. 'ಜ್ಞಾನಾನಂದ ಸ್ವರೂಪರು' ಎಂದು ರುಕ್ಮಾಂಗದರನ್ನು ಸಂಬೋಧಿಸುವದು ಯಥಾರ್ಥವೇ ಆಗಿದೆ.

ಶಕೆ. ೧೬೩೨ (ಇ.ಸ. ೧೭೧೧) ವಿಕೃತಿನಾಮ ಸಂವತ್ಸರ ಫಾಲ್ಗುಣ ಶುದ್ಧ

ದ್ವಾದಶಿಯ ದಿನದಂದು ಶ್ರೀ ರುಕ್ಮಾಂಗದರು ನಿಜಧಾಮಕ್ಕೈದರು. ಇವರ ಸಮಾಧಿಯು ವಿಜಾಪುರದ ರೇಲ್ವೆ ಸ್ಟೇಶನದಿಂದ ಪೂರ್ವಕ್ಕೆ ಒಂದು ಮೈಲಿನ ಅಂತರದಲ್ಲಿದೆ. ಆರಾಧನಾ ಮಹೋತ್ಸವವು ಪ್ರತಿವರ್ಷ ಫಾಲ್ಗುಣಶುದ್ಧ ದ್ವಾದಶಿಯ ದಿವಸ, ಭಾವ-ಭಕ್ತಿಗಳಿಂದ ನಡೆಯುತ್ತದೆ. ಅನ್ನ ಸಂತರ್ಪಣೆ ಯಾಗುತ್ತದೆ. ಜಾತಿ, ಧರ್ಮ ಯಾವ ಭೇದವಿಲ್ಲದೆ ಅಸಂಖ್ಯ ಜನರು ಉತ್ಸವದಲ್ಲಿ ಭಾಗವಹಿಸುತ್ತಾರೆ. ಈಗಲೂ ಪ್ರತಿ ಗುರುವಾರ ಸಂಜೆಗೆ ಭಾವಿಕರು ಪಲ್ಲಕ್ಕಿ ಸೇವೆಯನ್ನು ಕೈಕೊಳ್ಳುತ್ತಾರೆ. ಸಮಾಧಿಯ ವಾತಾವರಣವು ಶಾಂತ ಹಾಗೂ ಪವಿತ್ರವಿದ್ದದ್ದರಿಂದ ದರ್ಶನ ಮಾತ್ರದಿಂದಲೇ ಮನಸ್ಸು ಪ್ರಸನ್ನವಾಗುತ್ತದೆ.

## ಗೀತಗಳ ಸಾರ

ಮೊದಲಿನ ಐದು ಗೀತಗಳಲ್ಲಿ ಕೃಷ್ಣನ ಬಾಲಲೀಲೆಗಳ ಮತ್ತು ಗೋಪಿಕಾ ವಿಲಾಸಗಳ ಮನೋರಂಜನವಾದ ವರ್ಣನೆಯಿದೆ. ಈ ಪ್ರಾರಂಭದ ಗೀತಗಳು ವಾತ್ಸಲ್ಯ ರಸವನ್ನು ಸೂಚಿಸುತ್ತವೆ. ನಡುನಡುವೆ ಶೃಂಗಾರವೂ ಹಣಿಕಿ ಹಾಕುತ್ತದೆ. ಭಗವಲ್ಲೀಲಾ ವಿಲಾಸವು ದುಷ್ಟರ ಶಾಸನ ಹಾಗು ಶಿಷ್ಟರ ಪರಿಪಾಲನೆಗಾಗಿ, ಅಂದರೆ ಲೋಕ ಕಲ್ಯಾಣಕ್ಕೆ ಇದೆ. ಮುಂದಿನ ಗೀತದಲ್ಲಿ ಬಾಹ್ಯಾಡಂಬರದ ಅವಹೇಳನವಿದೆ. ಸಂಸಾರದಲ್ಲಿಯೇ ಮುಳುಗಿ ಬಿದ್ದ ಜನರು, ನಶ್ವರವಾದ ದೇಹಸಂಭ್ರಮದಲ್ಲಿಯೇ ಆಸಕ್ತರಾಗಿ, ಅಹಂಕಾರದಿಂದ ದೇವ ಧರ್ಮಗಳನ್ನು ಜರಿಯುತ್ತಾರೆ. ವೇದೋಪನಿಷತ್ತುಗಳ ರಹಸ್ಯ ತಿಳಿಯದೆ ಯಾವ ಪಾಪಕರ್ಮ ವನ್ನೂ ಮಾಡಲು ಅವರು ಹೇಸರು (ಕ್ರ. ೬). ಕಾಲಿನಿಂದ ನಡೆಯುವವನೇ ಎಡವುವನಲ್ಲವೇ ? ತಪ್ಪು ಮಾಡುವುದು ಮನುಜ ಧರ್ಮ ಆದ್ದರಿಂದ ನಮ್ಮ ಅಪರಾಧಗಳನ್ನು ಕ್ಷಮಿಸು, ಎಂದು ಭಕ್ತನ ಬೇಡಿಕೆ (ಕ್ರ. ೭). ದುಃಖದೋಷಾನು ದರ್ಶನವನ್ನು ವಿವರಿಸುವ ಗೀತಗಳು ಮುಂದೆ ಬರುತ್ತವೆ. ಭವ ಬಾಧೆಗೆ ನೊಂದೆ, ನಿನಗೆ ಶರಣು ಹೋಗಲಿಲ್ಲ, ಮುಂದೆ ದಾರಿ ಕಾಣದು. ಎನ್ನ ಕೈ ಪಿಡಿದು ಕಾಯಯ್ಯ (ಕ್ರ. ೮). ಆತ್ಮರೂಪೀ ನಿಧಾನವನ್ನು ಕಳಕೊಂಡೆ, ವಿಷಯ ವಾಸನೆಗೆ ಸಿಲುಕಿದೆ. ಜನದ, ಮನದ ನಾಚಿಕೆ ಬಿಟ್ಟೆ. ಚಿಂತೆ ಮಾಡಿ ಮಾಡಿ ದಣಿದೆ (ಕ್ರ. ೯). ಪಾಂಡುರಂಗನು ರುಕ್ಮಾಂಗದರ ಪರಮ ಆರಾಧ್ಯ ದೈವತ. ಭಕ್ತರಕ್ಷಣೆ ಗಾಗಿ ಅವನನ್ನು ಪ್ರಾರ್ಥಿಸುತ್ತಾರೆ. ಪಾಂಡುರಂಗನು ಬ್ರೊಮ್ಮಾದಿಕರಿಗೂ ವಂದ್ಯನು. ಕಾಲಕರ್ಮರಹಿತನು. ಅವ್ಯಯ ಸ್ವರೂಪನು. ಮೇಧ್ಯಾಮೇಧ್ಯವ

ಕೈಕೊಂಬುವವನು (ಕ್ರ.೧೦). ರುಕ್ಮಾಂಗದರು ನಾದ, ಲಯ ನೃತ್ಯಗಳಿಂದ ಕೂಡಿದ ಗೀತ–ಪ್ರಬಂಧ ಬರಹಗಾರರು, ಇದು ಎಲ್ಲರಿಗೆ ತಿಳಿದ ವಿಷಯ. ಗಾನ, ವಾದ್ಯ ನರ್ತನಗಳ ಸುಸಂಗತಿಯನ್ನೊಳಗೊಂಡ ಮುಂದಿನ ಗೀತವು ಬಾಲಕೃಷ್ಣನ ನೃತ್ಯವನ್ನು ವರ್ಣಿಸುತ್ತದೆ (ಕ್ರ. ೧೧). ಪರಮಾತ್ಮನು ಶರಣಾಗತರ ಪಾಲಕನು. ಗಜೇಂದ್ರನು ನಕ್ರನ ದವಡಿಯಲ್ಲಿ ಸಿಕ್ಕು ಅನನ್ಯ ಗತಿಕನಾಗಿ ಪರಮಾತ್ಮನಿಗೆ ಶರಣು ಹೋಗಲು, ಗರುಡನ ದಾರಿ ಕಾಯದೆ, ಬರಿಗಾಲಿ ನಿಂದಲೇ ಶೀಘ್ರವಾಗಿ ಬಂದು ಕರಿರಾಜನನ್ನು ಕಾಯ್ದನು (ಕ್ರ. ೧೨). ಭಕ್ತರ ಭಾವಕ್ಕೆ ಮೆಚ್ಚುವ ಪರಮಾತ್ಮನು ಶಬರಿಯ ಗುಡಿಸಲಿಕ್ಕೆ ಬಂದು ಅವಳ ಎಂಜಲದ ಬೋರೆಹಣ್ಣನ್ನು ಆನಂದದಿಂದ ತಿಂದನು. ಇಂಥ ಪರಾತ್ಪರ ತತ್ತ್ವಕ್ಕೇ ಶರಣು ಹೋಗಬೇಕು. ಚಿಲ್ಲರೆ ದೈವತಗಳ ಬೆನ್ನು ಹತ್ತಬಾರದು (ಕ್ರ. ೧೩). ಸಾಧಕನ ಆಧ್ಯಾತ್ಮಿಕ ಜೀವನದಲ್ಲಿ ಅನಿವಾರ್ಯವಾದ ನೈರಾಶ್ಯ, ನಿರ್ಗತಿಕತೆ ಯನ್ನು ಚಿತ್ರಿಸುವ ಆರ್ತತೆಯನ್ನು ಮುಂದಿನ ನಾಲ್ಕು ಗೀತಗಳಲ್ಲಿ ನೋಡುತ್ತೇವೆ, ಇದನ್ನು ಪಾಶ್ಚಾತ್ಯ ಅನುಭಾವಿಗಳು ಆತ್ಮನ ಕಾರಿರುಳು (Dark Night of the Soul) ಎಂದು ಕರೆದಿರುವರು. ಕೃಷ್ಣ ಪರಮಾತ್ಮನು ನನ್ನ ಮೇಲೆ ಕೋಪಿಸಿದನೇ ? ಅವನ ಕೃಪೆಯನ್ನು ಪಡೆಯುವದೆಂತು ? ಅವನು ನಿರಪೇಕ್ಷನು, ಅವನಿಗೆ ಯಾರ ಹಂಗೂ ಇಲ್ಲ. ಏನಾದರೂ ಹೇಳಿ ಅವನನ್ನು ಒಲಿಸುವದು ಸಾಧ್ಯವಿಲ್ಲ. ಅತಿ ಆಶೆಗೆ ಬಿದ್ದು ಬಳಲಿದೆ. ನನ್ನ ನೆಲೆ ನೋಡ ಬೇಡ ; ನಿನ್ನ ನಂಬಿದವರನ್ನು ಕಾಡುವದು ಅನಾಥ ರಕ್ಷಕನಾದ ನಿನಗೆ ಒಪ್ಪದು, ನೋಡಿದತ್ತೆಲ್ಲ ಕತ್ತಲೆ ಕವಿದಿದೆ. 'ಇತ್ತ ಬಾ' ಎಂದು ಅಭಯಹಸ್ತ ನೀಡು (ಕ್ರ. ೧೪–೧೮). ಹರಿಯನ್ನು ನಂಬಿದವರೇ ಧೀರರು, ಅವರೇ ವಿವೇಕಿಗಳು. ಅಂದಿಗಿದ್ದವರಿಗೆ ಸಾವು, ಇಂದಿಗಿದ್ದವರಿಗೆ ಸಾವು, ಆದರೆ ಇಂದಿರೇಶನ ಭಕುತರೆಂದೆಂದಿಗೂ ಸಾಯರು, ಅವರು ಜೀವನ್ಮುಕ್ತರು (ಕ್ರ. ೧೯). ವಿವೇಕ ಬುದ್ಧಿಯಿಂದ ಮದ ಮೋಹವನ್ನು ತ್ಯಜಿಸಿ ನಮ್ರನಾಗಬೇಡವೇ ? ಆದರೆ ದ್ರವ್ಯದ ಗರ್ವದಿಂದ ನಾನು ಉನ್ಮತ್ತನಾದೆ. ಪರಮಾತ್ಮ ನಿಂದಕರನ್ನು ಕೂಡಿದೆ. ಕಾಮಕ್ರೋಧಾದಿ ಷಡ್ರಿಪುಗಳ ವಶವಾದೆ. ಕೃಪಾವಲೋಕನದಿಂದ ಆ ಎಲ್ಲ ವೈರಿಗಳನ್ನು ದೂರ ಮಾಡು. ಕಾಲಕರ್ಮದ ಕಾಟಕ್ಕಾಗಿ ಬೇಸತ್ತ ನಾನು ನಿನಗೆ ಶರಣು ಬಂದಿರುವೆ. ಎನ್ನನ್ನು ಪಾರಗಾಣಿಸು (ಕ್ರ. ೨೦–೨೨). ನಿನ್ನ ಹೊರತು ಎನಗೆ ಅನ್ಯ ದೈವತವಿಲ್ಲ. ಐಹಿಕ ಭೋಗದ ಉಪರತಿ ನನಗೆ ಬರಲಿ, ಈ ನನ್ನ ಬಿನ್ನಹವನ್ನು ಮನ್ನಿಸು (ಕ್ರ. ೨೩). ಎನ್ನ ಭಕುತಿ ಸ್ಥಿರವಿಲ್ಲ. ಚಂಚಲವಿದೆ.

ಆದರೂ ನನ್ನ ಕಳವಳಿಕೆಯನ್ನು ನೋಡಿ ವೇಳೆಗೆ ಒದಗಯ್ಯ (ಕ್ರ. ೨೪). ಸತ್ಪುರುಷರಿಗೆ ಹರಿಯೇ ಸಾರಸರ್ವಸ್ವ. ಅವರೇ ಪರಮಾತ್ಮನ ಸ್ವರೂಪವನ್ನು ಸ್ಪಷ್ಟವಾಗಿ ತಿಳಿಸುತ್ತಾರೆ. ಅವರು ಅತಿ ಸಹನ ಶೀಲರು. ಎಲ್ಲ ಸಂದೇಹ ದೂರ ಮಾಡುವರು. ಕರ್ಮಪಾಶವನ್ನು ಹರಿದು ಒಗೆದವರು. ರಾಯನಿರಲಿ, ರಂಕನಿರಲಿ, ಎಲ್ಲರನ್ನೂ ಸಮಾನತೆಯಿಂದ ನೋಡುವರು. ಜ್ಞಾನಿಗಳಿದ್ದರೂ, ಸಾಮಾನ್ಯ ಜನಕ್ಕೆ ಅಜ್ಞಾನಿಗಳಂತೆ ತೋರುವರು. ಇಂಥ ಮಹಾತ್ಮರ ನೆಲೆಯನ್ನು ಯಾರೂ ತಿಳಿಯರು. (ಕ್ರ. ೨೫). ನಿಜವಸ್ತುವು ಅಂದರೆ ಪರಾತ್ಪರ ಸತ್ಯವು ಬೇರೆಯೇ ಇದೆ. ದಿವ್ಯ ಚಕ್ಷುವಿನಿಂದಲೇ ಅದರ ಅನುಭೂತಿ ಸಾಧ್ಯ. ವ್ರತ ಉಪವಾಸಗಳಿಗೆ ಅದು ಎಂದೂ ದೊರೆಯದು, ಕೇವಲ ಯಾಂತ್ರಿಕವಾದ ಅಂದರೆ ಭಕ್ತಿಭಾವಹೀನ ಜಪತಪಕ್ಕೂ ಅದು ಸಿಗದು. (ಕ್ರ. ೨೬). ಮುಂದಿನ ಎರಡು ಗೀತಗಳಲ್ಲಿ ಚಿದ್ಘನನಾದ, ನಿಖಿಲಾರಾಧ್ಯನಾದ ಶ್ರೀಕೃಷ್ಣ ಪರಮಾತ್ಮನ, ಅದರಂತೆ ಅಲೌಕಿಕ ಲೀಲೆಯ ಶಿವನ ವರ್ಣನೆಯಿದೆ (ಕ್ರ. ೨೭–೨೮). ದುರ್ಗುಣ ಗಳನ್ನು ತ್ಯಜಿಸಿ, ಸದ್ಗುಣಗಳನ್ನು ಸೇವಿಸಿ ವೈರಾಗ್ಯ ಭಾಗ್ಯಭರಿತರಾದ ಭಕ್ತರು ಹರಿಯನ್ನು ಏಕೋ ಭಾವದಿಂದ ಭಜಿಸುವರು, ಎಂದು ರುಕ್ಮಾಂಗದರ ದೃಢವಿಶ್ವಾಸ. (ಕ್ರ. ೨೯). ಮಂಗಲಾರತಿಯ ಎರಡು ಪದಗಳಿಂದ ಈ ಗೀತರತ್ನಗಳ ಮುಕ್ತಾಯ (ಕ್ರ. ೩೦–೩೧).

## ನಿವೇದನೆ

ಅದ್ವೈತದಾಸರು ಈ ಪದಪ್ರಯೋಗವೇ ಕೆಲವರಿಗೆ ವಿಸಂಗತಿ ಎನಿಸಬಹುದು. ಯಾಕೆಂದರೆ, ಎಲ್ಲಿ ಅದ್ವೈತವಿದೆಯೋ (ಅಂದರೆ ಬ್ರಹ್ಮ ಒಂದೇ ಸತ್ಯ, ಮಿಕ್ಕದ್ದೆಲ್ಲ ಸುಳ್ಳು) ಅಲ್ಲಿ ದಾಸ್ಯತ್ವ (ಅಂದರೆ ಸ್ವಾಮಿ ಸೇವಕ ಈ ದ್ವೈತ ತತ್ವ) ಇರಲಾರದು. ಅದರಂತೆ ಎಲ್ಲಿ ದಾಸ್ಯತ್ವವು ಆತ್ಯಂತಿಕ ಸತ್ಯವಿದೆಯೋ ಅಲ್ಲಿ ಅದ್ವೈತಕ್ಕೆ ಸ್ಥಾನವಿರಲಾರದು ; ಹೀಗೆ ಅನೇಕರ ಆಕ್ಷೇಪವಿರಬಹುದು. ಆದರೆ ಈ ಗ್ರಂಥ ದಲ್ಲಿ ಬರುವ ಸಂತಕವಿಗಳು ಈ ವಾದ ವಿವಾದವನ್ನು ಜರಿದು ತಮ್ಮ ದಿವ್ಯ ಜೀವನದಲ್ಲಿಯೇ ಪರಸ್ಪರ ವಿರುದ್ಧವೆಂದು ತೋರುವ ಸಿದ್ಧಾಂತಗಳ ಸಮನ್ವಯ ಮಾಡಿದ್ದಾರೆ. ಅವರು ಹೊರಟ ಮಾರ್ಗ ಭಕ್ತಿಮಾರ್ಗ. ಭಕ್ತಿ ಎಂದೊಡನೆ ಕನಿಷ್ಠ ಪಕ್ಷದಲ್ಲಿ, ಎರಡು ಸತ್ ತತ್ತ್ವಗಳು, ಎರಡು ಸದ್ವಸ್ತುಗಳು ಇರಲೇ ಬೇಕು. ಅವಕ್ಕೆ ಧ್ಯೇಯ, ಧ್ಯಾತಾ ಎನ್ನಿರಿ ; ಇಲ್ಲವೆ ಉಪಾಸ್ಯ, ಉಪಾಸಕ ಎನ್ನಿರಿ. ಸಂತಕವಿ ಗಳ ಪರಮೋಚ್ಚ ಧ್ಯೇಯವೆಂದರೆ, ಅಹಂಭಾವವಳಿದು, ಸರ್ವಸ್ವವನ್ನು

ಪರಮಾತ್ಮನಲ್ಲಿ ಅರ್ಪಿಸುವುದು. ಇಲ್ಲಿ ಸರ್ವ ಬ್ರಹ್ಮಾರ್ಪಣವಾದ್ದರಿಂದ ನಾನು, ನನ್ನದು ಎಂಬ ಭೇದ ಬುದ್ಧಿ ಉಳಿಯದು. ಭಕ್ತಿಯಿಂದ ಪ್ರಾರಂಭವಾದ ಅವರ ಆಧ್ಯಾತ್ಮಿಕ ಜೀವನ ಪರಮಾತ್ಮನಲ್ಲಿ ಲೀನವಾಗುತ್ತದೆ. ಗುರುದೇವ ರಾ.ದ. ರಾನಡೆಯವರ ವಾಕ್ಯವೊಂದು ಉದ್ಬೋಧಕವಾಗಿದೆ. It was thus that Jnanadeva, Nivrittinatha and Sopana and the rest could start by Bhakti to end in Unitive Experience (Mysticism in Maharashtra, P. 179). ಈ ಸಂದರ್ಭದಲ್ಲಿ ಅವರು ಡಾ. ಮ್ಯಾಕನಿಕಲ್‌ನ ಅಭಿಪ್ರಾಯವನ್ನು ಎತ್ತಿ ಹಿಡಿಯುತ್ತಾರೆ. "Not in the Monism of Samkaracharya, nor in the Dualism that is quite satisfied to remain two, but in the spiritual experience that transcends and includes them both, is peace to be found." ಭಕ್ತಿಯಿಂದ ಪ್ರಾರಂಭವಾದ ಅವರ ಪಾರಮಾರ್ಥಿಕ ಜೀವನದ ಪರಮಾವಧಿಯು ಅಪರೋಕ್ಷಾನುಭೂತಿಯಲ್ಲಿ ಅಂದರೆ ಐಕ್ಯಾನುಭೂತಿಯಲ್ಲಿದೆ. ಈ ಅವಸ್ಥೆಯನ್ನು ಪಡೆದ ನಂತರ ಅವರಿಗೆ ಯಾರೊಡನೆಯೂ ಸಂಘರ್ಷ, ವೈರ, ಬಡಿದಾಟವಿಲ್ಲ. ಇದನ್ನೇ ಭಗವಾನ್ ಗೌಡಪಾದರು ವರ್ಣಿಸುತ್ತಾರೆ. 'ಪರಸ್ಪರಂ ವಿರುಧ್ಯಂತೇ ತ್ವೈಃ ಅಯಂ ನ ವಿರುಧ್ಯತೇ" । ಇತರರು ತಮ್ಮ ತಮ್ಮೊಳಗೆ ವಿರೋಧ ಮಾಡಿ ಬಡಿದಾಡುವರು ; ಆದರೆ ನನ್ನದು ಮಾತ್ರ ಯಾರೊಡನೆಯೂ ವಿರೋಧವಿಲ್ಲ, ವೈಮನಸ್ಯವಿಲ್ಲ. ಹೀಗೆ ಇವರಿಗೆ ಎಲ್ಲೆಲ್ಲಿಯೂ ಸಾಮರಸ್ಯದ ಸಾಮ್ರಾಜ್ಯವೇ ಇದೆ.

ಈ ಸಂತ ಕವಿಗಳು ಅದ್ವೈತ ಮತದವರಿದ್ದರೂ ಅವರ ನಿರೂಪಣೆಯಲ್ಲಿ ಭಕ್ತಿಭಾವವೇ ಓತಪ್ರೋತವಾಗಿದೆ. ಒಂದು ದೃಷ್ಟಿಯಿಂದ ಇವರೆಲ್ಲರೂ ಸಗುಣೋಪಾಸಕರೇ. ಸಿಂದಗಿ ಸಂಪ್ರದಾಯದಲ್ಲಿ ರಾಮನಾಮವೇ ತಾರಕಮಂತ್ರ. "ನೆನೆದರೆ ದೃಢದಲಿ ರಾಮನಾಮ । ತನುವದು ಮುಂದೆ ಬಾರದು ನೇಮ", ಇದು ಭವತಾರಕರ ಉಪದೇಶದ ಸಾರ. ರುಕ್ಮಾಂಗದರಂತೂ ಪುಂಡಲೀಕವರದ ಪಾಂಡುರಂಗನ ಅಂದರೆ ವಿಜಯ ವಿಠ್ಠಲನ ನಿಃಸೀಮ ಭಕ್ತರು. ಹರಿದಾಸ ಸಾಹಿತ್ಯದಲ್ಲಿ ವಿಠ್ಠಲನೇ ಪರಮ ದೈವತವಿದ್ದಂತೆ, ಈ ಸಂತ ಕವಿಗಳಿಗೆ ವಿಜಯ ವಿಠ್ಠಲ, ಕೃಷ್ಣ, ರಾಮ ಇವೇ ಉಪಾಸ್ಯ ದೈವತಗಳು. ಇವೆಲ್ಲ ವಿಠ್ಠಲ ಶಬ್ದದ ಪರ್ಯಾಯ ನಾಮಗಳೆಂದು ಬೇರೆ ಹೇಳುವದೇ ಬೇಡ. ಹೀಗೆ ವಿಠ್ಠಲನೇ ದ್ವೈತ ಹರಿದಾಸ ಹಾಗೂ ಅದ್ವೈತದಾಸರನ್ನು ಒತ್ತಟ್ಟಿಗೆ

ಜೋಡಿಸುವ ಆಂತರಿಕ ಸೂತ್ರವೆಂದರೆ ಅನುಚಿತವಾಗಲಾರದು. ಈ ಭಕ್ತಮಣಿಗಳು ವಿಠ್ಠಲನ ದಿವ್ಯ ಸೂತ್ರದಿಂದಲೇ ಹೆಣೆಯಲ್ಪಟ್ಟಿದ್ದಾರೆ.

ಭಕ್ತಿಗಾಗಿ, ಭಕ್ತಿಯ ಬೆಳವಣಿಗೆಗಾಗಿ ಈ ಸಂತಕವಿಗಳ ಸಂಪ್ರದಾಯವು ದ್ವೈತ ಸಂಪ್ರದಾಯದ ಭದ್ರವಾದ ಅಡಿಗಲ್ಲಿನ ಮೇಲೆ ನಿಂತಿದೆ. ಜೀವಬ್ರಹ್ಮೈಕ್ಯ ಉಚ್ಚ ಧ್ಯೇಯ. ಆದರೆ ಈ ಧ್ಯೇಯವು ಕೊನೆಯ ವರೆಗೆ ಬರಿ ಭ್ರಾಂತಿಯ ಆಶೆ. ಶರೀರ ಬಂಧನ ಅಥವಾ ಮರ್ಯಾದೆ, ಅದರಂತೆ ಸಮಾಜ ಬಂಧನಗಳು ಇರುವ ವರೆಗೆ ನಮಗೆ ಪೂರ್ಣತ್ವ ಪ್ರಾಪ್ತಿಯೆಲ್ಲಿ ? ಅಂದರೆ ನಾವು ಆದರ್ಶದತ್ತ ಕ್ರಮ ಕ್ರಮವಾಗಿ ಹೆಜ್ಜೆಯಿಂದ ಹೆಜ್ಜೆಗೆ ಹೋಗುತ್ತೇವೆ. ನಮ್ಮ ಪ್ರಗತಿ ನಿರಂತರವಾಗಿ ನಡೆಯುವ ಒಂದು ಪ್ರಕ್ರಿಯೆ. ಒಮ್ಮೆಲೆ ಪ್ರಾಪ್ತವಾದ ಅಥವಾ ಪ್ರಾಪ್ತವಾಗುವ ಘಟನೆಯಲ್ಲ. ಒಂದು ದೃಷ್ಟಿಯಿಂದ ಈ ಸಂಪ್ರದಾಯದಲ್ಲಿ ದ್ವೈತ ಅದ್ವೈತಗಳ ಸಮನ್ವಯವಿದೆ, 'ದ್ವೈತದ ಹೊರತು ಅದ್ವೈತ ಪ್ರಾಪ್ತವಾಗಲಾರದು.' ಈ ಮಹತ್ವದ ವಾಕ್ಯವು ರಾಮಲಿಂಗ ವಿರಚಿತ 'ಭೀಮಾಶಂಕರರ ಚರಿತ್ರೆ' ಯಲ್ಲಿದೆ.

ಇವರ ಗೀತಗಳಲ್ಲಿ ಪರಮಾತ್ಮನ ಸಗುಣ ಮತ್ತು ನಿರ್ಗುಣ ಹೀಗೆ ಎರಡೂ ಪ್ರಕಾರದ ವರ್ಣನೆಗಳು ಇರುವವು. ಅವನು ಭಕ್ತವತ್ಸಲ, ಕರುಣಾಸಾಗರ : ಗಜೇಂದ್ರ, ಶಬರಿ ಮೊದಲಾದ ಭಕ್ತರ ಉದ್ಧಾರಕ ; ಈ ಪ್ರಕಾರದ ವರ್ಣನೆಯು ಅವನ ಸಗುಣ ರೂಪವನ್ನು ಸೂಚಿಸುತ್ತದೆ. ಅವನು ನಿಃಸಂಸಾರನು, ಅವ್ಯಯನು, ಕಾಲಕರ್ಮರಹಿತನು, ಅವನು ಬೇರೆಯೇ ಆದ ಅಂದರೆ ಅತೀತವಾದ ಸದ್ವಸ್ತುವು. ಈ ಪದಪ್ರಯೋಗಗಳು ಅವನ ನಿರ್ಗುಣ ರೂಪದ ದ್ಯೋತಕವಾಗಿವೆ. ಪರಸ್ಪರ ಭಿನ್ನವಿರುವ ಈ ಸಿದ್ಧಾಂತಗಳ ಸಮನ್ವಯವು ಅವಶ್ಯವಾದದ್ದು. ಲೋಕಮಾನ್ಯ ಬಾಳ ಗಂಗಾಧರ ಟಿಳಕರು ಈ ಗಹನ ವಿಷಯದ ತಾತ್ತ್ವಿಕ ಭೂಮಿಕೆಯನ್ನು ತಮ್ಮ 'ಗೀತಾರಹಸ್ಯ'ದ ೧೩ ನೆಯ ಪ್ರಕರಣ (ಭಕ್ತಿ ಮಾರ್ಗ) ದಲ್ಲಿ ಸ್ಪಷ್ಟಪಡಿಸಿದ್ದಾರೆ.

ಅದ್ವೈತ ವೇದಾಂತದ ಪ್ರಕಾರ ಬ್ರಹ್ಮಾತ್ಮೈಕ್ಯ ಜ್ಞಾನ ಒಂದೇ ಸತ್ಯ, ಅದೇ ಶ್ರೇಷ್ಠ ಧ್ಯೇಯ. ಆದರೆ ಇಂಥ ಬರಿ ಬೌದ್ಧಿಕ ಜ್ಞಾನ ವ್ಯರ್ಥವಾದದ್ದು. ಬೌದ್ಧಿಕ ಜ್ಞಾನಕ್ಕೆ ಶ್ರದ್ಧೆಯ ಜೋಡು ಇರಲೇ ಬೇಕು. ವಿಶ್ವದ ಮೂಲತತ್ತ್ವವು ಅವಿನಾಶಿ, ಅನಂತ, ಅನಾದಿ, ಚೈತನ್ಯರೂಪ, ಸರ್ವಜ್ಞ, ಸ್ವತಂತ್ರ ತತ್ತ್ವವೆಂದು ಬುದ್ಧಿಯಿಂದ

ನಿಶ್ಚಯಿಸಿದ ಮೇಲೆ ಅದರ ಸಾಕ್ಷಾತ್ ಅನುಭೂತಿಗೆ ಅಥವಾ ಅಪರೋಕ್ಷ ಜ್ಞಾನಕ್ಕೆ ಅವಿಚಲ ಭಕ್ತಿ, ಶ್ರದ್ಧೆಗಳು ಅತ್ಯವಶ್ಯ. ನಿಖಿಲಾಧಾರ ಸತ್ ತತ್ತ್ವವು ಮಾತುಮನಗಳಿಗೆ ಮೀರಿದ್ದು. ಅದು ಬುದ್ಧಿಯ ಆಚೆಗೆ ಇರುವದು. ಆದ್ದರಿಂದ ಅದನ್ನು ಶ್ರದ್ಧೆಯಿಂದಲೇ ಗುರುತಿಸಿ, ಯಾವದಾದರೊಂದು ರೀತಿಯಿಂದ ಅದರ ಉಪಾಸನೆಯನ್ನು ಮನುಷ್ಯನು ಮಾಡುತ್ತ ಬಂದಿದ್ದಾನೆ. ಪರಮೇಶ್ವರನಲ್ಲಿ ನಮ್ಮ ಭಕ್ತಿ ನಿಷ್ಕಾಮ ಅಥವಾ ನಿರ್ಹೇತುಕವಿರಬೇಕು. ಇಂಥ ಐಕಾಂತಿಕ, ನಿಶ್ಚಲ ಭಕ್ತಿಯಿಂದ ಸಾಧಕನು ಭಗವಂತನ ಧ್ಯಾನ ಮಾಡಿದರೆ ಅವನ ವೃತ್ತಿಯು ಭಗವದಾಕಾರವಾಗುವುದು. ಪರಮಾತ್ಮ, ಉಪಾಸ್ಯ ; ಭಕ್ತ ಉಪಾಸಕ, ಈ ಉಪಾಸ್ಯ ತತ್ತ್ವವು ಉಪಾಸನೆಗಾಗಿ ಸಗುಣ ಅಂದರೆ ವ್ಯಕ್ತ ಸ್ವರೂಪದ್ದೇ ಇರಬೇಕಾಗುತ್ತದೆ. 'ಕ್ಲೇಶಃ ಅಧಿಕತರಸ್ತೇಷಾಂ ಅವ್ಯಕ್ತಾಸಕ್ತಚೇತಸಾಮ್' (ಭಗವದ್ಗೀತೆ ೧೨.೫) ಅಂದರೆ ಅವ್ಯಕ್ತ ತತ್ತ್ವದ ಮೇಲೆ ಚಿತ್ತಸ್ಥಿರವಿಡಲು ಪ್ರಯತ್ನಿಸುವವರಿಗೆ ಎಡರುಗಳೇ ಬಹಳ. ಉಪಾಸನೆಗೆ ಅಂದರೆ ಧ್ಯಾನಕ್ಕೆ ಯಾವುದಾದರೊಂದು ವ್ಯಕ್ತವಸ್ತುವು ಬೇಕಾಗುತ್ತದೆ. ಈ ವಸ್ತುವು ಮೂರ್ತಿ, ಪಾದುಕೆಗಳು, ವೃಂದಾವನ, ಸಮಾಧಿ ಮೊದಲಾದವು ಇರಬಹುದು. ಇದಕ್ಕೆ ಆಲಂಬನವೆನ್ನುತ್ತಾರೆ. ಶ್ರುತಿ ಸ್ಮೃತಿಗಳಲ್ಲಿ ಎಲ್ಲೆಲ್ಲಿ ಉಪಾಸನೆ ಮಾಡಲು ಆದೇಶವಿದೆಯೋ ಅಲ್ಲಲ್ಲಿ ಸಗುಣ ಬ್ರಹ್ಮನ ವರ್ಣನೆ ಇದೆ. ನಿರ್ಗುಣ ತತ್ತ್ವದ ವರ್ಣನೆಯಿಲ್ಲ. ಬ್ರಹ್ಮತತ್ತ್ವ ಅವ್ಯಕ್ತ, ನಿರಾಕಾರವಿದ್ದರೂ ಅದು ಉಪಾಸನೆಯ ದೃಷ್ಟಿಯಿಂದ ಸಗುಣ ಅಂದರೆ, ಸಕಲ ಮಂಗಲಗುಣ ನಿಧಾನವಿರಲೇ ಬೇಕು. ಹೀಗಿದ್ದರೆ ಮಾತ್ರ ಆ ಪರತತ್ತ್ವದ ಮೇಲಿನ ನಮ್ಮ ಧ್ಯಾನವು ಸುಸಾಧ್ಯವಾಗುತ್ತದೆ. ಮೊದಲೇ ನಮ್ಮ ಮನಸ್ಸು ಸ್ವಭಾವತಃ ಚಂಚಲ. ಅದು ಅವ್ಯಕ್ತ ನಿರ್ಗುಣ ತತ್ತ್ವದ ಮೇಲೆ ಸ್ಥಿರವಾಗಲರಿಯದು. ಚಿತ್ತ ಚಾಂಚಲ್ಯವು ನಿಂತು, ಅದು ಏಕಾಗ್ರವಾಗಲು ಅದಕ್ಕೆ ವ್ಯಕ್ತ ಅಂದರೆ ಇಂದ್ರಿಯಗೋಚರವಾದ ನಾಮರೂಪಾತ್ಮಕ ವಸ್ತು ಬೇಕು. ಇದು ಮನಸ್ಸಿನ ಸ್ವಾಭಾವಿಕ ಸ್ವರೂಪ. ಇದನ್ನು ಲಕ್ಷದಲ್ಲಿಟ್ಟರೆ ಉಪಾಸನೆಗಾಗಿ, ಪ್ರಕಟವಿದ್ದ ಸಗುಣ ವಸ್ತುವಿನ ಆಶ್ರಯವನ್ನೇ ತೆಗೆದುಕೊಳ್ಳಬೇಕಾಗುತ್ತದೆ. ಈ ವಿಚಾರ ಸರಣಿಯೇ ಮುಂದೆ ಹೋಗಿ, ಪ್ರತ್ಯಕ್ಷ ಮನುಷ್ಯಧಾರೀ ವ್ಯಕ್ತ ಬ್ರಹ್ಮ ಸ್ವರೂಪದ ಉಪಾಸನೆ, ಪ್ರಚಾರದಲ್ಲಿ ಬಂತು. "ಪರಮೇಶ್ವರನು ಸರ್ವಸಾಕ್ಷೀ, ಸರ್ವವ್ಯಾಪೀ, ಸರ್ವಶಕ್ತಿಮಾನ್, ಸರ್ವಜ್ಞ, ಸ್ವತಂತ್ರನಿದ್ದರೂ, ಯಾವನು ನಮ್ಮೊಡನೆ ಮಾತಾಡುವನೋ, ಯಾವನು ನಮ್ಮ ಮೇಲೆ ಪ್ರೀತಿ ಮಾಡುವನೋ, ಯಾವನು ನಮ್ಮನ್ನು ಸನ್ಮಾರ್ಗಕ್ಕೆ ಹಚ್ಚಿ ಸದ್ಗತಿ ಕೊಡುವನೋ ಇಂಥ ಸಕಲೈಶ್ವರ್ಯಸಂಪನ್ನ, ದಯಾಸಾಗರ, ಭಕ್ತ ವತ್ಸಲ, ಪರಮ ಪವಿತ್ರ

ಪರಮೋದಾರ, ಪರಮಕಾರುಣಿಕ – ಸ್ವಲ್ಪದರಲ್ಲಿ ಹೇಳುವದಾದರೆ – ಸಗುಣ, ಪ್ರೇಮಗಮ್ಯ, ಕಣ್ಣಿಗೆ ಕಾಣುವ, ಪ್ರತ್ಯಕ್ಷ ರೂಪಧಾರಿಯನ್ನೇ, ಸಾಧಕನು ಉಪಾಸನೆಗಾಗಿ ಸ್ವೀಕರಿಸುತ್ತಾನೆ" (ಟಿಳಕರ ಗೀತಾರಹಸ್ಯ ಪುಟ ೩೯೬ – ೩೯೭). ಭಕ್ತಿ ಭಾವವು ಬಲಿತು ಸಾಧಕನು ಧ್ಯಾನದ ಚರಮ ಸೀಮೆಯನ್ನು ಮುಟ್ಟಿದ ಮೇಲೆ ಬ್ರಹ್ಮಾತ್ಮೈಕ್ಯ ಜ್ಞಾನದ ಅನುಭವವಾಗಿ, ಉಪಾಸ್ಯ, ಉಪಾಸಕ, ಉಪಾಸನೆ ಈ ತ್ರಿಪುಟಿಯ ಲಯವಾಗುತ್ತದೆ. ಭಕ್ತನ ಚಿತ್ತವು ಉಪಾಸ್ಯ ದೈವತದ ಮೇಲೆ ಹೇಗೆ ಹೇಗೆ ಸ್ಥಿರವಾಗುವದೋ, ಹಾಗೆ ಹಾಗೆ ಅವನ ಭೇದ ಬುದ್ಧಿಯೂ ಕಡಿಮೆ ಆಗುತ್ತ ಹೋಗುತ್ತದೆ. ನಾನು, ನನ್ನದು ಈ ಅಹಂಕಾರ ಅಳಿಯುತ್ತ ಹೋಗುತ್ತದೆ. ಧ್ಯೇಯ, ಧ್ಯಾತಾ ಈ ಭೇದದಿಂದ ಸುರುವಾದ ಧ್ಯಾನದ ಪರ್ಯವಸಾನವು ಅಭೇದವಾದ ಬ್ರಾಹ್ಮೀಸ್ಥಿತಿಯಲ್ಲಿದೆ. ಇದಕ್ಕೆ ಅದ್ವೈತಭಕ್ತಿ ಎಂದರೂ ಸಲ್ಲುವದು. ಹೀಗೆ ಅದ್ವೈತ ಭಕ್ತಿಯಾಗಲಿ ಅಥವಾ ಅದ್ವೈತದಾಸ ಈ ಪದ–ಪ್ರಯೋಗವಾಗಲಿ, ವದತೋ ವ್ಯಾಘಾತವಲ್ಲ ; ಅದು ಅಂತಿಮ, ಪರಾತ್ಪರ ಸತ್ಯವಿದೆ.

ಸಂಪಾದನ ಕಾರ್ಯದ ಮೊದಲು ಪ್ರಸ್ತಾವ ಎತ್ತಿ ತಮ್ಮಲ್ಲಿದ್ದ ಎಲ್ಲ ಹಸ್ತಲಿಖಿತ ಪ್ರತಿಗಳನ್ನು ಕೊಟ್ಟು ಡಾ. ಕೃಷ್ಣ ಕೊಲ್ಹಾರ ಕುಲಕರ್ಣಿ ವಿಜಾಪುರ ಇವರು ಪ್ರೋತ್ಸಾಹಿಸಿದರು. ಶ್ರೀನರಗುಂದ ಧಾರವಾಡ ಇವರು ಭವತಾರಕರ ಸಾಹಿತ್ಯ ಕೊಟ್ಟು ಆಶೀರ್ವದಿಸಿದರು. ಶ್ರೀ ಬಿ.ಬಿ. ಫಡಕೆ ಹಾಗೂ ಸೌ. ಸುನಂದಾತಾಯಿ ಫಡಕೆ, ಧಾರವಾಡ ಇವರು ದುರ್ಮಿಳ ಗೀತಗಳನ್ನು ದೊರಕಿಸು ವದರಲ್ಲಿ ಬಹಳ ಶ್ರಮಪಟ್ಟರು. ಡಾ. ಎ.ಡಿ. ಕುಲಕರ್ಣಿ ವಿಜಾಪುರ ಹಾಗೂ ಪ್ರೊಫೆಸರ ಎನ್.ವ್ಹಿ. ಥೊಬ್ಬಿ, ವಿಜಾಪುರ ಇವರ ಸಹಾಯವಿದ್ದದ್ದರಿಂದಲೇ ರುಕ್ಮಾಂಗದರ ಗೀತಗಳ ಸಂಕಲನ ಕಾರ್ಯವು ನೆರವೇರಿತು. ಪ್ರೊಫೆಸರ ಥೊಬ್ಬಿಯವರು ಎಷ್ಟೋ ಕಠಿಣ ಶಬ್ದಗಳ ಅರ್ಥ ತಿಳಿಪಡಿಸಿದರು; ಇಷ್ಟೇ ಅಲ್ಲ, ತಮ್ಮಲ್ಲಿದ್ದ ಎಲ್ಲ ಪುಸ್ತಕಗಳನ್ನು ಕೊಟ್ಟು ನನ್ನನ್ನು ಕಾರ್ಯ ಪ್ರವೃತ್ತ ನಾಗಿ ಮಾಡಿದರು. ಡಾ. ಮುರಲೀಧರ ಮುಧೋಳ ಹಾಗೂ ಡಾ. ವ್ಹಿ.ಎ. ದಿವಾಣಜಿ ಇವರು ಉಪಯುಕ್ತ ಸಲಹೆ ಸೂಚನೆಗಳನ್ನು ನೀಡಿದರು. ಶ್ರೀ ಜಿ.ಕೆ. ಜೋಶಿ, ತಾಂಬಾ ಇವರ ಮಾರ್ಗದರ್ಶನವು ಯಾವಾಗಲೂ ಇತ್ತು. ಶ್ರೀ ಎನ್.ವ್ಹಿ. ಕುಲಕರ್ಣಿ ಪುಣೆ ಹಾಗೂ ಶ್ರೀ ಎಮ್.ಕೆ. ಕುಲಕರ್ಣಿ ಪುಣೆ ಇವರು ಕೃಷ್ಣದಾಸ ಮುದಗಲ್ಲ ಇವರು ಬರೆದ ಯುದ್ಧಕಾಂಡದ ಪ್ರತಿಯೊಂದರ ಝೆರಾಕ್ಸ್ ಕಾಪಿ ಕಳಿಸಿ ನಿಂತು ಹೋದ ಕೆಲಸವನ್ನು ಮುಂದುವರಿಸಿದರು. ಶ್ರೀ ಕೇಶವರಾವ ಕುಲಕರ್ಣಿ ಸಿಂದಗಿ ಇವರು ಅನೇಕ ವಿಷಯಗಳ ವಿವರಣೆ

ಮಾಡಿದರು. ಸಿಂದಗಿ ಸಂಪ್ರದಾಯದ ಈಗಿನ ಮಠಾಧಿಪತಿಗಳಾದ ಶ್ರೀ ಸದಾಶಿವಪ್ಪಯ್ಯನವರ ಆಶೀರ್ವಾದ ಬಲವು ಇದ್ದೇ ಇತ್ತು. ಡಾ. ಸೌ. ಅಶ್ವಿನಿ ಜೋಗ ಇವರು ಅನೇಕ ರೀತಿಯಿಂದ ಸಹಾಯ ಮಾಡಿದರು. ಶ್ರೀ ದೇವೀಸಿಂಗ ದೊಡ್ಡಮನಿ ಸೊಲ್ಲಾಪುರ ಇವರು ಮುದ್ರಣ ಪ್ರತಿಯನ್ನು ಓದಿ ಅನೇಕ ತಿದ್ದುಪಡಿಗಳನ್ನು ಮಾಡಿದರು. ಈ ಎಲ್ಲ ಮಹನೀಯರ ಉಪಕಾರವನ್ನು ಎಷ್ಟು ಸ್ಮರಿಸಿದರೂ ಕಡಿಮೆಯೇ ಇದೆ. ಡಾ. ಹಾವನೂರ ಶ್ರೀನಿವಾಸರಾಯರ ಅಮೋಲಿಕ ಸಹಾಯದಿಂದ ಈ ಕೃತಿಗೆ ಮೂರ್ತ ಸ್ವರೂಪ ಬಂದಿತು. ಇವರಿಗೆ ನನ್ನ ವಿಶೇಷ ಕೃತಜ್ಞತೆಗಳು ಸಲ್ಲಬೇಕು.

**ಬಿ.ಆರ್. ಕುಲಕರ್ಣಿ**

# ಕೀರ್ತನೆಗಳ ಕ್ರಮಸೂಚಿ

**ಶಿವರಾಮರ ಹಾಡುಗಳು**



**ಗುರುರಾಮಲಿಂಗರ ಹಾಡುಗಳು**

೧

ಶಾಂಭವಿ ದಯಮಾಡೆ ಸಿಟ್ಟು ಬಿಡು ।
ಮುನಿಯದೆ ಎನ್ನ ಕೂಡ ।
ಕೋಪವು ಮಾಡಬೇಡ ಎನಗಾರ ।
ಕರುಣ ದೃಷ್ಟಿಲಿ ನೋಡ ಪ

ವಿಷಯದ ಬಲೆಯೊಳಗೆ ನಾ ಸಿಲುಕಿ ।
ಮರೆತೆನು ಸರ್ವಾಶಂಕೀ ।
ಪ್ರಾಯ ಪ್ರಾಯದ ಮದದಿಂದ ಬಹುಸೊಕ್ಕಿ
ಬಿಟ್ಟೆನು ನಿನಗಿಂದು ಮೂರ್ತಿ ೧

ರಜ ತಮ ಸಂಗದಲಿ ನಾ ಕೆಟ್ಟೆ ।
ನಿನ್ನ ಸ್ಮರಣೆಯ ಬಿಟ್ಟೆ ।
ಕಾಮ ಕ್ರೋಧದಲಿ ಬಹು ಸುಟ್ಟೆ ।
ತಿಳಿಯದು ನಿನ್ನ ಗುಟ್ಟೇ ೨

ಮನಸಿಗೆ ತರದಿರೆ ಎನ್ನ ದೋಷ ।
ಮಾಡೆನ್ನ ದುರಿತವಿನಾಶಾ ।
ಕಲಿಕಾಲಸುತನಾ ಭವಪಾಶಾ ।
ಭಜಿಸುವೆ ನಿನ್ನ ಮಹೇಶಾ ೩

೨

ಸದ್ಗುರು ಮೂರ್ತಿ ರಕ್ಷಿಸೋ ನೀನು ।
ನಿನ್ನ ಪಾದವ ನಂಬಿದೆ ನಾನು ಪ

ಪೂರ್ವಾರ್ಜಿತ ಪ್ರಾರಬ್ಧದಿಂದೆ ।
ತಾಯಿ ಉದರದಲಿ ನಾ ಬಂದೆ ॥
ಮಲಮೂತ್ರ ಜಠರಾಗ್ನಿಯಲಿ ನೊಂದೆ ।
ಒಂಬತ್ತು ತಿಂಗಳೊಳಗೆ ಬೆಂದೆ ೧

ಬಾಲತ್ವದಲಿ ದುರ್ಬಲನಾದೆ ।
ಯೌವನ ಕಾಲಕೆ ಅಹಂಮತನಾದೆ ॥
ಮುಪ್ಪು ಬರಲು ಚಿಂತೆಯೊಳಗಾದೆ ।
ಸ್ವಾಮಿ ಭಜನೆಗೆ ಅಂತರನಾದೆ ೨

ಧರೆಯೊಳಗೆ ದೊಡ್ಡವನೆಂದು ।
ಭವಭಯಕಂಜಿ ಬೆನ್ನನೆ ಬಿದ್ದೆ ॥
ದೀನೋದ್ಧಾರಕನೆಂದು ಶರಣು ಬಂದೆ ।
ಭೀಮಾಶಂಕರನ ಧ್ಯಾನಕೆ ತಂದೆ ೩

## ೩

ಸದ್ಗುರುವಿಗೆ ನಾನೇನು ಮಾಡಿ ಉದ್ಧಾರಾಗುವೆ ।
ನಾನಿನ್ನುದ್ಧಾರಾಗುವೆ । ದೇಹಾತೀತನಾಗಿ
ಚರಣಕಮಲಕ್ಕೆರಗುವೆ ಪ

ತಾರಕ ಮಂತ್ರ ಉಪದೇಶ ಕರ್ಣದೊಳಿಟ್ಟಾ ಸದ್ಗುರು
ಕರ್ಣದೊಳಿಟ್ಟಾ । ಮಾಯಾ ಮೋಹದ ಬೇಡಿ ಕಡಿದು ।
ಭ್ರಾಂತಿಯ ಸುಟ್ಟಾ ೧

ನೆತ್ತಿಯ ಮ್ಯಾಲೆ ಕರವನಿಟ್ಟು ನಿಜವೇ ನೀನೆಂದಾ ।
ಅಂತರಂಗವ ತೋರಿಸಿಕೊಟ್ಟು
ಭವ ಭಯ ಬಿಡಿಸಿದಾ ೨

ಸದ್ಗುರುನಾಥಾ ಭೃಂಗವಳ್ಳಿವಾಸಾ ಆತನ
ದಯದಿಂದ । ಸಗುಣರೂಪನಾಗಿ ಮೆರೆವ ಸಹಜಾನಂದಾ ೩

೪

ಏನು ಹೇಳಲಿ ನಿನಗಿನ್ನೂ ಗುರು ಧ್ಯಾನದ ಸುಖವನ್ನು ಪ

ಸ್ವಾನುಭವದಿ ನಿಂದು ಬೆಳಗಿನೋಳ್ ಬೆಳಗುವ ।
ತಾನೆಂದು ಕಾಂಬುವ ಘನ ನಿಜವಾಗಿಹ ಅ.ಪ

ಚಿತ್ತದ ತಾಪವು ನೀಗಿ ಮಾಯಾವೃತ್ತಿಯ
ಗುಣಗಳು ಪೋಗಿ । ಎತ್ತೆತ್ತ ನೋಡಲು
ಅತ್ತತ್ತ ಪರಿಪೂರ್ಣ ಸಚ್ಚಿದಾನಂದ ಘನ ನಿಜವಾಗಿಹ ೧

ದ್ವೈತಾದ್ವೈತಗಳೆಲ್ಲ ಪೋಗಿ ಶುದ್ಧ ಚೈತನ್ಯವೇ ತಾನಾಗಿ ।
ಮಾತು ಕಳೆದು ಮೌನವೆಂಬ ಏಕಾಂತದಿ ।
ಕೂತು ಲಕ್ಷಿಸುವ ಲಕ್ಷಣನೆ ತಾನಾಗಿಹ ೨

ಮನದ ಕಲ್ಪನೆಯನ್ನು ಮರೆದು ಹಮ್ಮು ತನುವಿನ
ಮಮತೆಯ ಜರಿದು । ಅನುದಿನದಲಿ ಗುರು ರಾಮ
ಪದಾಂಬುಜ ತಾನೆಂದು ಕಾಂಬುವ ಘನ ನಿಜವಾಗಿಹ ೩

೫

ಸೈ ಸೈ ಸದ್ಗುರುವಿನ ದಯದಿಂದೆಲ್ಲಾ ಮೈ ಮರೆತೆನೆ ।
ಐ ಅದು ಏನು ಕಾರಣ ಮೈ ಮರೆದು ಮತ್ತುಳಿದೆನೆ ।
ಕೈ ಕೈ ತಲೆ ಮೇಲಿಡಲು ವೈರಾಗ್ಯ ಪಡೆದೆನೆ ।
ಥೈ ಥೈಯಂತ ಕುಣಿಸಿ ತನ್ನಂತೆ ತಾ ಮಾಡಿದನೆ ಪ

ನಾನೂ ನೀನೆಂಬುದು ಮರೆಸಿ ತಾನೇ ತಾನಾದನೆ ।
ಮಾನ ಅಪಮಾನ ಎರಡೂ ಪಾನ ಮಾಡಿದನೆ ।
ಜ್ಞಾನ ಮಾರ್ಗವ ತೋರಿ ಧ್ಯಾನ ಹೇಳಿದನೆ ।
ಖೂನ ತೋರಿಸಿ ವಿನೋದ ಮಾಡಿದನೆ ೧

ನಾದ ಶಬ್ದದಿ ಮನಲುಬ್ಧ ಮಾಡಿದನೆ ।
ವಾದಿ ದುರ್ವಾದಿಗೂಡ ಕಾದಿ ಗೆಲಿಸಿದನೆ ।
ಭೇದಾಭೇದವ ಅರಿಯದ ಹಾದೀ ತೋರಿದನೆ ।
ಈದ ಹುಲಿಯಂಥ ಮನಸು ಸಾದ ಮಾಡಿದನೆ ೨

ಭೃಕುಟಿ ಮಧ್ಯದಿ ವಸ್ತು ಪ್ರಕಟ ಮಾಡಿದನೆ ।
ಆಸನ ದ್ವಾರ ಕವಾಟವ ಬಲಿಸಿ ಶ್ವಾಶಗಳೆಲ್ಲಾ ನಿಲಿಸಿದನೆ ।
ನಾಸಿಕಾಗ್ರದ ಕೊನೆಯ ಮೇಲೆ ಭಾನು ಪ್ರಕಾಶವ ತೋರಿದನೆ ।
ಈಶನು ದತ್ತ ಮಹೇಶ ದಿಗಂಬರ ಘೋಷದೊಳಗೆ ಮನವೀಸಿದನೆ ೩

೬

ಬಾರಯ್ಯ ಬಾ ಗುರುವೆ ಪರಬ್ರಹ್ಮದರುವೆ ಪ

ತರಣಿ ಕೋಟಿ ಪ್ರಕಾಶ ಗುರು ಮೂರ್ತಿ ಪ್ರಭುವೆ ಅ.ಪ.

ಬಾರಯ್ಯ ಶಿರಸದಿ ಸುರನದಿ ತರುವೆ ।
ಮೆರೆವ ಅಗ್ನಿಯ ನೇತ್ರ ರವಿಶಶಿ ಹೊಳೆವೆ ।
ಉರಗ ಕಂಕಣ ಕರಕಪಾಲ ಪಿಡಿವೆ ।
ಹರ ಹರ ಎಂಬ ಭಕ್ತರಿಗೆ ವರವೆ ॥ ಬಾರಯ್ಯ ೧

ಕರ್ಣ ಕುಂಡಲವರ್ಣ ಪೂರ್ಣಚಂದ್ರಮನ ।
ಅರುಣ ಉದಯದ ಕಿರಣ ಹೊಳೆವ ಸುವರ್ಣ ।
ತರಣಿ ಸೆಳೆದ ವಸನ ಮಿಂಚಿನ ವರ್ಣ ।
ಶರಣು ಮಾಡುವೆ ನಿಮ್ಮ ಎರಡೂ ಚರಣ ॥ ಬಾರಯ್ಯ ೨

ಕಾಮಸಂಹಾರ ರಾಮನ್ನಾಮದ ಪ್ರೇಮಾ ।
ವಾಮಾಂಗದಲಿ ನಿಮ್ಮ ಅನ್ನಪೂರ್ಣಮ್ಮಾ ।
ಧಾಮ ಮಾಡಿದಿ ನಿಮ್ಮ ಭೃಂಗಾವಳೀ ಗ್ರಾಮಾ ।
ಭೀಮಾಶಂಕರಗೊಲಿದ ಸದ್ಗುರು ಆತ್ಮಾ ॥ ಬಾರಯ್ಯ ೩

೭

ಗುರುವಿನ ಮರಿಲ್ಯಾ‌ಂಗೆ ।
ಮರೆತು ನಾನಿರಲ್ಯಾಂಗೆ ಪ

ಮರೆತು ಹೋದ ಗಂಟಾ ।
ತೆರೆದಿಟ್ಟಾ ಕರೆದು ಕೈಯಲಿ ಕೊಟ್ಟಾ ೧

ಬೋಧ ಗಜದ ಮೇಲೆ ಕೂಡಿಸಿದಾ ।
ಭೇದಾಭೇದ ಓಡಿಸಿದಾ ೨

ಸ್ಥಿರಚರ ಜಗವೆಲ್ಲ ವ್ಯಾಪಿಸಿದ
ಪರಶಿವ ತಾನೇ ಆದ ೩

೮

ಭೂತ ಬಡೆದಿತೊ ।
ಬ್ರಹ್ಮಭೂತವ ಬಿಡಿಸುವರಾರಮ್ಮ ಪ

ಪೃಥ್ವಿ ಆಪ ತೇಜಂಗಳನೆಲ್ಲ ನುಂಗಿತು ।
ಮತ್ತೆ ಸಮೀರ ಸಹ ಆಕಾಶವ ।
ಚಿತ್ತ ಹಂಮಿನ ಮೂಲಕ ಹವಣಿಸುತಿದೆ ।
ಕರ್ತು ತಾನಾಗಿ ಸುಮ್ಮನೆ ಕೂತಿತಮ್ಮಾ ೧

ಕಳವಳ ಕಳೆದೀತು ಒಳ್ಳೆ ಬೆಳಗಾದೀತು ।
ಸುಳದ್ವಾಂಗೆ ಸುಳದೀತು ಅಳಿವಿಲ್ಲದೆ ।
ಮೂಲ ಪ್ರಕೃತಿಯ ಮೇಲೇರಿ ನಿಂತಿತು ।
ಸೊಲ್ಲದಿಂ ಸೋಂಕಲು ಬಲು ಭಯವಮ್ಮಾ ೨

ದಿಮ್ಮನೆ ಬಡದೀತು ಹಂಮನೆ ನುಂಗೀತು ।
ನಮ್ಮಗೆ ಎಲ್ಲಿಹುದು ಉಲಗಡೆಯಮ್ಮಾ ।
ಬ್ರಹ್ಮಾಂಡದಾಚೀಲಿ ಭೂತ ಕುಣಿಯುತಿದೆ ।
ಭೀಮಾಶಂಕರನ ಮನಿ ದೈವವಮ್ಮಾ ೩

೬

ಭಿಕ್ಷುಕನ ನಿಜ ಸುಖವು ಲಕ್ಷಕಗದೆಲ್ಲಿಹುದು ।
ಮೋಕ್ಷದಾ ಮಾರ್ಗವು ಅವಗಿಲ್ಲವು ಪ

ಮೋಕ್ಷ ಲಕ್ಷ್ಮಿಯುಂಟು । ಅಕ್ಷಯ ಧನವುಂಟು ।
ಕುಕ್ಷಿಯೊಳಗುಂಟು ವಾ ಭಿಕ್ಷಾನ್ನವೂ ।
ಶಿಕ್ಷೆ ಮಾಡಲು ಉಂಟು । ದೀಕ್ಷೆ ಕೊಡಲೂ ಉಂಟು ।
ರಕ್ಷಿಸುವದುಂಟು ವಾ ಸದ್ಭಕ್ತರಾ ೧

ಆನಂದ ಧನಿಯುಂಟು । ಸ್ವಾನಂದ ಸುಖವುಂಟು ।
ಧ್ಯಾನವೇ ಉಂಟು ಶ್ರೀಸದ್ಗುರುವಿನ ।
ಮೌನದಾ ಮನೆಯುಂಟು । ಜ್ಞಾನದಾ ಪ್ರಭು ಉಂಟು ।
ಮನ್ನಣೀಯುಂಟು ಸಾಧು ಸಜ್ಜನರ ೨

ಶಾಂತಿ ಸತಿಯಳು ಉಂಟು ಮತಿಯು ಪುತ್ರರು ಉಂಟು ।
ಅಂತ್ಯಕಾಲಕ್ಕೆ ರಾಮನಾಮ ಉಂಟು । ತಿತೀಕ್ಷೆ
ಸೊಸೆಯುಂಟು । ಭಕ್ತಿಭಾವನು ಉಂಟು ।
ಕೀರ್ತಿ ಬರಲುಂಟು ಈ ತ್ರೈಲೋಕ್ಯದಿ ೩

ಶಮದಮಾ ಸಖರುಂಟು । ಪ್ರೇಮ ದಾಸಿಯು ಉಂಟು ।
ಹಮ್ಮುಹಂಕಾರವೆಂಬಳಿಯರುಂಟು ।
ನಾಮದಾ ಬಲವುಂಟು । ನಮನ ಸರ್ವರಿಗುಂಟು ।
ಚಿನ್ಮಯಾನಂದವೈಕ್ಯದಲುಂಟು ೪

ಬ್ರಹ್ಮ ಪದವುಂಟು ವಾ ಬ್ರಾಹ್ಮಣರ ದಯವುಂಟು ।
ಬ್ರಹ್ಮಾಂಡದೊಳಗೆ ಸಂದೇಹವುಂಟು ।
ಬ್ರಹ್ಮಾಹಮಸ್ಮಿಯುಂಟು । ಬ್ರಹ್ಮವೇ ತಾನುಂಟು ।
ಭೀಮಾಶಂಕರ ಭಿಕ್ಷೆ ಬೇಡಲುಂಟು ೫

## ೧೦

ಧನ್ಯ ಜಗಮಾನ್ಯ ।
ನಿತ್ಯ ನಿರಂಜನ ವಸ್ತುವಾದವ ಪ

ಉತ್ತಮ ದೇಹದಿ ಬಂದೂ । ವಯೋ
ವ್ಯರ್ಥವಾಯಿತು ಹಾಯೆಂದೂ ॥
ಮಿಥ್ಯಾ ವಿಷಯದಿ ಬೆಂದೂ ।
ನಿತ್ಯಾನಿತ್ಯ ವಿಚಾರಿಸಿ ತಿಳಿದವ ೧

ವೇದೋಪನಿಷದಗಳಿಂದ ಬಹು ।
ಸಾಧಿಸಿ ತಿಳಿಯದರಿಂದ ॥
ಮೋದದಲ್ಲಿಹ ಸ್ವಾನಂದ ।
ತದ್ಬೋಧದಿ ಪರಮಾನಂದದಿ ರಮಿಪನು ೨

ಜನ್ಮ ಮರಣ ಭಯ ನೀಗಿ ।
ಘನ ಉನ್ಮನಿ ಸ್ಥಾನದಿ ತೂಗಿ ॥
ತನ್ಮಯವೇ ತಾನಾಗಿ ।
ಚಿನ್ಮಯ ರಾಮನೊಳೈಕ್ಯವ ಪಡೆದವ ೩

## ೧೧

ಮಾಡೋ ಪರಮೇಶ್ವರ ಗುರುಧ್ಯಾನಾ
ಬಿಡದಿರುವದು ಭಜನಾ ॥
ನೋಡೋ ನಿನ್ನೊಳು ನಿಜ ಖೂನಾ ।
ಪೂರ್ಣೈಕ್ಯದ ಜ್ಞಾನಾ ಪ

ಅಪರೂಪದ ನಿಜ ತನುವಿದು ನೋಡೋ
ಸೆಡಗರದೀ ಪಾಡೋ ॥
ಅಪಹಾಸ್ಯವ ಮಾಡದೆ ನೀ ಕೂಡೋ
ಘನ ಚಿನ್ಮಯ ಗೂಡೋ ೧

ಆಜ್ಞಾ ಚಕ್ರದ ಬಳಿಯಲ್ಲೀ ।
ಎರಡೂ ಕಮಲದಲ್ಲೀ ।
ಪ್ರಾಜ್ಞಾ ಝಗ ಝಗಿಸುವ ಬೆಳಕಲ್ಲೀ ।
ತಿಳಿ ನಿನ್ನೊಳಗಿಲ್ಲೀ ೨

ಮೇಲಿನ ಸ್ಥಾನದ ಸಹಸ್ರಾರ । ಗುರುತತ್ತ್ವದ ಸಾರಾ ॥
ಪೇಳಲಳವಲ್ಲವು ಸುಖ ಪೂರಾ ।
ಶಂಕರ ಪದವಿವರಾ ।
ಭೀಮಾ ಶಂಕರ ಪದವಿವರಾ ೩

## ೧೨

ಕಣ್ಣು ಮುಚ್ಚಿದರೂ ಕಾಣ
ಬರುತಿದೆ ಪ್ರಣವ ಸ್ವರೂಪ ।
ಭೃಕುಟಿ ಮಧ್ಯದಲಿ ಪ್ರಕಟವಾಗಿದೆ
ಉದಯವಾಗಿ ರೂಪ ಪ

ನಾಸಿಕಾಗ್ರದಲಿ ವಾಸವಾಗಿದೆ
ಬೀಸುವ ಗಾಳಿಗೆ ಭಿನ್ನವಿಲ್ಲದೆ ।
ಏಸೇಸು ದಿನ ತಪವ ಮಾಡಿದರೂ ಯೋ–
ಗೇಶ್ವರ ಮುನಿಗೆ ದುರ್ಲಭ ೧

ಝೇಂಕರಿಸುವದಾ ನಾದ ನೆತ್ತಿಯೊಳು
ಓಂಕಾರ ಶಬ್ದವು ಶೂನ್ಯವಾಗದೆ ।
ಶಂಕರ ಸ್ವರೂಪ ತಿಳಿದ ದತ್ತನ
ಬೀಜಮಂತ್ರ ಅಂಕುರದಿಂದೆ ೨

## ೧೩

ಜೋ ಜೋ ಜೋ ಜೋ ಜೋ ಎನ್ನ ಗುರುವೆ
ಜೋ ಜೋ ಜೋ ನಿಜ ಕಲ್ಪತರುವೆ
ಜೋ ಜೋ ಎಂದು ಜನ್ಮಕ್ಕೆ ಬರುವೆ ।
ಜೋ ಜೋ ನಿಮ್ಮ ಚರಣದಲ್ಲಿರುವೆ ಜೋ ಜೋ ಪ

ಅಷ್ಟ ಸಿದ್ಧಿಗಳೆಲ್ಲ ಬಡ್ಡಿಯ ಕೊರೆಸಿ ।
ಗಟ್ಟ್ಯಾಗಿ ವೇದದ ಕಾಲವ ನಿಲ್ಲಿಸಿ
ಅಷ್ಟತತ್ತ್ವದ ಹುರಿ ಹೆಣಿಕಿಲಿ ಬಿಗಿಸಿ ।
ತೊಟ್ಟಿಲೊಳರುವಿನ ಹಾಸಿಗೆ ಹಾಸೀ ॥ ಜೋ ಜೋ ೧

ಸಾಧನ ನಾಲ್ಕೆಂಬೋ ಹಗ್ಗವ ಹೊಸೆದು ।
ಬೋಧದ ಗಂಟು ತುದಿಯಲ್ಲಿ ಬಿಗಿದು ।
ನಾದ ಅನಾಹತ ಗಂಟೆಯ ಹೊಡೆದು ।
ಆದಿ ಗುರುವಿನ ಮಲಗಲಿ ಕರೆದು ॥ ಜೋ ಜೋ ॥ ೨

ಕಾಲಿಗೆ ಯೋಗದ ಪಾಶವ ಕಟ್ಟಿ ।
ಮೂಲ್ಯೆದು ಬ್ರಹ್ಮರಂಧ್ರಕ್ಕೆ ಮುಟ್ಟಿ ।

ಮೇಲಿನ ಜೋತೆಗೆ ಭಾಸದ ಬುಟ್ಟಿ ।
ಲೀಲೆಯಿಂದಲಿ ನೋಡು ಗುರುವಿನ ದೃಷ್ಟಿ ॥ ಜೋ ಜೋ ೩

ಮನಸೀಗೆ ಬಾರದ ಮಾತುಗಳಾಡಿ ।
ನೆನೆಹಿಗೆ ನಿಲ್ಕದ ನಿತ್ಯನ ಕೂಡಿ ।
ಕನಸು ಎಚ್ಚರದ ಗಾಢವ ನೋಡಿ ।
ಉನ್ಮನಿ ಬೆಳಗುವ ಮೂರ್ತಿಯ ಪಾಡಿ ॥ ಜೋ ಜೋ ೪

ಭಕ್ತಿ ವಿರಕ್ತಿಗೆ ಸಿಲ್ಕುವನೀತಾ ।
ಸತ್ಯ ಶರಣ್ಯಾ ಸದ್ಗುರು ನಾಥಾ ।
ಕರ್ತೃತ್ವ ಇಟ್ಟನು ಮೌನದಲ್ಲೀತಾ ।
ವೃತ್ತಿ ವಿರಹಿತ ಗಿರಿ ಪಾಲಿಸು ಗುರುತಾ ॥ ಜೋ ಜೋ ೫

## ೧೪

ಪರತರ ಪರವಸ್ತು ಸಗುಣಾವತಾರಗೆ
ಪರಮೇಷ್ಟಿ ರೂಪಿಣೀ ಸ್ಥಿತಿಸುವಗೆ ॥
ಹರಿಹರರೂಪಿಣೀ ವರದ ಸಂಹಾರಗೆ ।
ವಿರಹಿತವಾದ ಮಹದೇವಗೆ
ಮಂಗಳ ಮಂಗಳ ಜಯಮಂಗಳ ಮಹದಾತ್ಮ ಲಿಂಗಗೆ ೧

ಉತ್ಪತ್ತಿ ಸ್ಥಿತಿ ಲಯ ಕಾರಣರೂಪಗೆ ।
ಗುಪ್ತಗೂಢ ಗುಣತ್ರಯ ಸಾಕ್ಷಿಗೆ ।
ವ್ಯಾಪ್ತನಾಗಿ ತನ್ನೊಳು ತಾನಾದಗೆ ।
ಪ್ರಾಪ್ತುಳ್ಳ ಪುರುಷರ ಪಾಲಿಪಗೆ ॥ಮಂ॥ ೨

ಹಂಸ ಪರಮಹಂಸಾಶ್ರಮದೊಳಿಹಗೆ ।
ಸ್ವಸಾಕ್ಷಿ ಸರ್ವ ದಂಭ ರಹಿತ ಸದೋದಿತಗೆ ।
ವಾಸವಾಗಿಹನು ತುಂಗಭದ್ರ ನಿಲಯಗೆ ।
ದಾಸ ಭೀಮಾಶಂಕರನ ಹೃದಯಾಬ್ಜದಾತ್ಮಗೆ ॥ ಮಂ॥ ೩

## ೧೫

ಜಯ ಮಂಗಳಂ ನಿತ್ಯ ಶುಭ ಮಂಗಳಂ ।
ದಯಾಂಬುಧಿ ಶ್ರೀ ಮಹಾ ಪಾದ ತೀರ್ಥಕ್ಕೆ ಪ

ಅಜ್ಞಾನ ಮಲನಾಶ ಮಾಡುವ ತೀರ್ಥಕ್ಕೆ ।
ಜನ್ಮ ಕರ್ಮಗಳ ಪರಿಹರಿಸುವ ತೀರ್ಥಕ್ಕೆ ।
ಜ್ಞಾನ ವೈರಾಗ್ಯವನು ಸಿದ್ಧಿಸುವ ತೀರ್ಥಕ್ಕೆ ।
ಘನ ಗುರುವಿನ ನಿಜ ಪಾದ ತೀರ್ಥಕ್ಕೆ ॥ ಜಯ ॥ ೧

ತಾಪತ್ರಯವನು ಪರಿಹರಿಸುವ ತೀರ್ಥಕ್ಕೆ ।
ಅಪರಿಮಿತವಾದ ಭವ ಹರಿಸುವ ತೀರ್ಥಕ್ಕೆ ।
ಇಪ್ಪತ್ತೈದು ತತ್ತ್ವ ಪಾವನಗೈದ ತೀರ್ಥಕ್ಕೆ ।
ಕೃಪನಿಧಿ ತಾರಿಸಿದ ಗುರುಪಾದ ತೀರ್ಥಕ್ಕೆ ॥ ಜಯ ॥ ೨

ವಿಪ್ರಪಾದಾದಲ್ಲಿ ದಕ್ಷಿಣಾ ಭಾಗದಲಿ ।
ತಪ್ಪದೆ ವಾಸವಾಗಿಹ ತೀರ್ಥಕ್ಕೆ ।
ಒಪ್ಪುತೆ ಶಿರಸ್ಸಿನೊಳು ಧರಿಸಿಕೊಂಡಿಹ ಹರನ ।
ತಾಪ ನಾಶವಗೈವ ಗುರುಪಾದ ತೀರ್ಥಕ್ಕೆ ॥ ಜಯ ॥ ೩

ಜಗದೊಳಗಿನ ತೀರ್ಥ ಸಾಗರದೊಳಿರುತಿಹವು ।
ಸಾಗರಾಂತ ಸಹ ಪರಿವಾರದಿ ।
ಅಘವ ಹರಿಸುವದೆಂದು ಜಗದೊಡೆಯನ ಪಾದದಿ ।
ಬೇಗನೆ ಬಂದು ಮಡಿಯಾಗುವ ತೀರ್ಥಕ್ಕೆ ॥ ಜಯ ॥ ೪

ಕಮಲನಯನ ಕಮಲೋದ್ಭವರೆಲ್ಲರು ।
ವಿಮಲಮಹ ಪದಗಳನು ಹೃದಯದಲಿ ಧರಿಸಿ ।
ಬ್ರಹ್ಮಾಂಡಕೋಟಿಗಳನು ಉದ್ಧರಿಸುವ ತೀರ್ಥಕ್ಕೆ ।
ಭೀಮಾಶಂಕರನು ಸೇವಿಸಿದ ಗುರುಪಾದ ತೀರ್ಥಕ್ಕೆ ॥ ಜಯ ೫

## ೧೬

ಮಂಗಳಾ ವರಯೋಗಿ ರಾಯಗೆ । ಮಂಗಳಾ ಪರಮ ಅವಧೂತಗೆ ।
ಮಂಗಳಾ ಪರಮಾತ್ಮ ಶ್ರೀ ಗುರು ಸಿದ್ಧ ಬಸವಂಗೆ । ಜಯ ಜಯ ಮಂಗಳಾ ಪ

ಆದಿ ಮಧ್ಯಾವಸಾನವಿಲ್ಲದ ನಾದ ಬಿಂದು ಕಲಾ ಶೂನ್ಯಗೆ ।
ಸಾಧಿಸುವ ಸಿದ್ಧಾಂತ ಅಗಣಿತವಾದ ಬ್ರಹ್ಮವನು ।
ವೇದ ವೇದಾಂತವ ವಿಚಾರಿಸಿ ನಾದ ಋಷಿ ಅಪಾರ ಚಿಂತ್ಯನು ।
ಮೇದಿನಿಯ ಭಕ್ತರನುಗ್ರಹಕಿತ್ತ ಬಂದ ಬಸವರಾಜಯೋಗದಲಿ ೧

ಆಗಳಾ ಕ್ಷೀರಾಬ್ಧಿ ಶಯನಗೆ ಯೋಗ ನಿದ್ರೆಯಲಿರಲು ಸುರಗಣ
ಬೇಗದಿಂದಲಿ ಬಂದು ಪೊಗಳಲು ಬ್ರಹ್ಮನನು ಕೂಡೆ ।
ಭೋಗಿಶಯನಲಿ ದೇವದೇವರು ಜಾಗೃತಿ ಅವಸ್ಥೆಯಲಿ ನಿಂತನು
ರಾಗದಿಂದಲಿ ಮತ್ಸ್ಯ ಕೂರ್ಮ ವರಾಹನಾದ ಮಾಧವಗೆ ೨

ಇಲ್ಲಿಯ ಕತ್ತಲೆ ನಿವಾರಿಪನು ಜಲಜಮಿತ್ರನು ಇಳೆಗೆ ತೋರುವ
ಅಳಿಯಲಾರದೇ ಕೃಷ್ಣನಾಮವು ದೋಷರಾಶಿಯನು ।
ತಿಳಿದು ನೋಡಲು ಯೋಗ ಧ್ರುವತರಳರೆಲ್ಲರು ಬಲ್ಲರು ಆದಿ ಮಾಧವ
ಕಲಿಯೊಳಗವತರಿಸಿದ ಬಳಿಕಾ ಬಾಲಕೃಷ್ಣಂಗೆ ೩

ನೋಡಿದರೆ ದುರಿತವನು ಕೆಡುವನು, ಬೇಡಿದರೆ ಸಾಯೋಜ್ಯನೀವನು
ಮಾಡಿ ಪಾದದ ತೀರ್ಥಕೊಂಡಡೆ ಮರಳಿ ಪುಟ್ಟಗಡ । ಖೇಡನಾಗದೆ
ನಾಮಕೀರ್ತಿಯ ಮಾಡು ಮರುಳೆ ಆದಿಪುರುಷನ
ರೂಢಿಯೊಳು ಈಡ್ಯಾಡಿ ಮೆರೆದ ಬಸವರಾಜಯೋಗದಲಿ ೪

ಇಂತು ಭಕ್ತರ ಭಕ್ತಿಗೋಸುಗ ಅಚಿಂತ್ಯ ಮಹಿಮನು ಶರೀರವತಾ-
ನಂತು ಧರಿಸಿಹನಿಲ್ಲದಿದ್ದಡೆ ದೇಹ ತಾನೇ ತಾ ।
ಕಂತು ಹರನವತಾರವಲ್ಲದೆ ಭ್ರಾಂತಿ ಬಿಡಿಸಿದ ಕೊಳಕೂರದಲಿ
ಸಂತತವೆ ನೆಲೆಸಿಹನು ಬಸವರಾಜಯೋಗದಲಿ ೫

## ೧೭

ಮಂಗಳೆನ್ನಿರೀ ಸಂಗರಹಿತಗೆ ಮಂಗಳೆನ್ನಿ ಅಭಂಗಾದ್ವೈತಗೆ ।
ಮಂಗಳೆನ್ನೀ ಕೃಪಾಂಗ ಮೂರುತಿ ಲಿಂಗ ಬಸವೇಶಗೆ ॥
ಮಂಗಳೆನ್ನಿ ಜಯ ಶುಭ ಪ

ಬ್ರಹ್ಮರೂಪದಿ ಜಗವನು ಪುಟ್ಟಿಸಿ ಬ್ರಹ್ಮಜನಕನ
ನೆತ್ತಿಲಿ ರಕ್ಷಿಸಿ ಬ್ರಹ್ಮ ಮೂರುತಿ ಬಾಲಬ್ರಹ್ಮದಿ
ಚರಿಸಿದಾತಂಗೆ ಮಹಾ । ಬ್ರಹ್ಮಾಂಡಕೋಟಿ
ಉದರದೊಳಿರಿಸಿ । ಬ್ರಹ್ಮನ ಸ್ತುತಿಗೆ ನಿಲುಕದ
ಅವಿನಾಶಿ ಬ್ರಹ್ಮಾದಿ ಸುರವಂದಿತ ರುದ್ರನಾಗಿ ಸಂಹರಿಸಿ ೧

ಜಗವನುದ್ಧರಿಸಲು ದೇಹವನು ಜಗದೀಶ್ವರನು ಅವತರಿಸಿ ಬಂದಿಹನು ।
ಜಗ ಮೃಗಜಲವೆಂದು ತಿಳಿದಿರೆ ಜಗದೊಳಾಡುವಗೆ ॥
ಬಗೆ ಬಗೆಯಲಾಡುತ ಗಗನ ಗಟ್ಟಿಹನು ।
ನಿಗಮಕೆ ನಿಲ್ಕದೆ ನಿತ್ಯನೆನಿಸುವನು
ಝುಗಝುಗಿಸುವ ಆರತಿಯ ಬೆಳಗಿರೆ ಜಗದ ಜನಕನಿಗೆ ೨

ಛಪ್ಪನ್ನ ದೇಶಕೆ ಶೋಭಿಸುವ ಒಪ್ಪುವ ಕೋಳಕೂರೆಂ
ದೆನಿಸುವ ದಿಕ್ಕು ದಕ್ಷಿಣಾ ಭೀಮಾತೀರದಿ ಥಳಥಳದಿ ಹೊಳೆವ ।
ಶ್ರೀ ಮಹಾಗುರು ಇಪ್ಪತ್ತೊಂದು ಸಮಾಧಿಯೊಳಿರುವ
ತಪ್ಪದೆ ರಾಮಾತ್ಮಜನಾಗಿರುವ । ಸೊಪ್ಪೆರಾಯನು
ಸಹಜಾನಂದ ತಾ ಯೋಗಿಯಾಗಿ ಮೆರೆವ ೩

## ೧೮

ಹಲವಂಗದವನಿಗೆ ಬಲುವಂಗ ಮಾಲಿಗೆ ।
ಗುಲ್ಲು ಗುಲ್ಲಿಸಿದ ಎಲ್ಲರಿಗೆ । ಬಲ್ಲ ಮಹಾತ್ಮಗೆ
ಬಲಸೀದ ಅಯ್ಯಗೆ ಶುರದರ ಸದ್ಗುರುನಾಥಗೆ ಪ

ಮಂಗಳ, ಮಂಗಳ ಜಯ ಮಂಗಳಾ ಶುಭ ಮಂಗಳಾ
ಮಹಾ ಮಂಗಳ ಭೃಂಗವಳ್ಳಿಯ ಸದ್ಗುರುನಾಥಗೆ ೧

ಗಗನ ಗ್ರಾಸಿಗೆ ಸಾಗರವ ಶೋಷಿಪಗೆ ।
ಭೂಗೋಲವೆಲ್ಲವ ಭಕ್ಷಿಪಗೆ । ಯೋಗಿ ಜನರ ಹೃತ್ಕಮಲ
ವಾಸಿಪಗೆ । ಭೋಗ ಮೂರು ಸದ್ಗುರುನಾಥಗೆ ೨

ಅಗಾಧ ಮಹಿಮಗೆ ಅಗಣಿತ ಗಣಿತಗೆ । ನಿಗಮಕೆ
ನಿಲುಕದ ನಿರ್ಲೇಪಗೆ । ಭೃಂಗವಳ್ಳಿಯಲ್ಲಿ ನಿಂತ
ಮಹಾತ್ಮಗೆ । ಮಗ ಭೀಮಾಶಂಕರನ ಪಾಲಿಪಗೆ ೩

## ೧೯

ನಾಥಾ ಸಮರ್ಥ ಗುರುನಾಥಗೆ ಮಂಗಳ ।
ಪ್ರೀತಾ ಭಕ್ತರ ನಿಜ ದಾತಾಗೆ ಮಂಗಳ ೧

ಜನನ ಮರಣ ದಾಂಟಿಸುವಗೆ ಮಂಗಳ ।
ಘನಕೆ ಘನವಾದ ಸ್ಥಾನ ನಿತ್ಯಗೆ ಮಂಗಳ ೨

ಭೀಮಾಶಂಕರ ಗುರುಮೂರ್ತಿಗೆ ಮಂಗಳ ।
ಪ್ರೇಮಾ ಸ್ಫುರಿತ ನಿಜಗಿರಿಗೆ ಮಂಗಳ ೩

## ೨೦

ಶಂಭು ಶಂಕರ ನಿಜಲಿಂಗಗೆ ಮಂಗಳ
ಕುಂಭಿನೀಧರ ಭೂಷ ಲಿಂಗಗೆ ಮಂಗಳ ॥
ಮಂಡೀಯನಾದಿ ವ್ಯೋಮಕೇಶಗೆ ಮಂಗಳ ।
ರುಂಡಮಾಲೆಧರ ಈಶಗೆ ಮಂಗಳ ೧

ತ್ರಿಪುಟ ತ್ರಿಪುರ ಸಂಹಾರಗೆ ಮಂಗಳ
ವಿಪರೀತ ಪರಿಜ್ಞಾನ ಹರಗೆ ಮಂಗಳ ೨

ಜ್ಞಾನದಾತನು ಗುರುನಾಥಗೆ ಮಂಗಳ ।
ಏನೆಂಬೆ ಗುರುಕೃಪೆ ನಿತ್ಯಗೆ ಮಂಗಳ ೩

## ೨೧

ವೃಷಭಾರೂಡಗೆ ರವಿಶಶಿ ನಯನಗೆ ವೃಷಭಪಾವನ
ತ್ರಿಯಂಬಕಗೆ ॥ ವೃಷಭಸ್ವರೂಪದಿ ಮೆರೆವ ಆಕಾರ
ದೇವಗೆ । ವೃಷಭ ಕನ್ನಿಕೆಯರಾರುತಿ ಎತ್ತಿರೆ ವೃಷಭಾ
ಶಿವಗೆ ಸಂಗಮಗ ಜಗದೀಶ ಮಹೇಶ–
ಗಾರುತಿಯನೆತ್ತಿರೆ ವೃಷಭ ಶಿವಗೆ ಸಂಗಮಗೆ ೧

ಭಾನು ಕೋಟಿ ದಿವ್ಯ ತೇಜ ಪ್ರಕಾಶಗೆ
ಆನಂದಮಯಗೆ ಚಿನ್ಮಯಗೆ । ಮಾನಸದಿಂದಲಿ
ಮೆರೆವೆನ್ನ ದೇವಗೆ ಮಾನ ಕನ್ನಿಕೆಯರಾರುತಿ ಎತ್ತಿರೆ ।
ವೃಷಭ ಶಿವಗೆ ಸಂಗಮಗೆ ೨

ಭಾಗೀರಥಿ ಪ್ರಿಯಗೆ ಭಾಲನೇತ್ರಗೆ
ಶ್ರೀ ಗೌರಿಯ ಮನೋಹರಗೆ । ನಾಗಭೂಷಣ
ನಾರಾಯಣ ಪ್ರಿಯಗೆ ನಾಗ ಕನ್ನಿಕೆಯರಾರುತಿ ಎತ್ತಿರೆ ೩

ದೇವರ ದೇವಗೆ ದೇವ ಜಗದೀಶಗೆ । ದೇವಸನ್ಮೋಹನ
ಸ್ವಾಮಿಗೆ । ದೇವ ಸಿಂಧಾಪುರದ ಶ್ರೀ ವಿಶ್ವನಾಥಗೆ
ದೇವ ಕನ್ನಿಕೆಯರಾರುತಿ ಎತ್ತಿರೆ ೪

## ೨೨

ಆರತಿಗಾರತಿ ಬೆಳಗಿತು ತನ್ನಿಂದ ತಾನೆ ।
ಮಹಗುರುವಿಗೆ । ತನ್ನಿ । ಅರವೂ
ಮರವೂ ಎರಡಾದರುವಿಗೆ ಬೆಳಗುವ ತಾನೇ ಪ

ಸಹಸ್ರ ಸೂರ್ಯರ ಪ್ರಭೆಗಳ ಕಲೆತು ಕೋಟಿ ಶಶಿಕಿರಣಾ
ಮಹತೇಜ ಥಾಕಿಸಿ ಮುಟ್ಟಿತು ಅಡಗಿತು ಗಗನಾ ೧

ಎತ್ತೆತ್ತ ನೋಡಿದರತ್ತ ಸ್ವಪ್ರಕಾಶವೇ ।
ನಿತ್ಯ ನಿರಂಜನ ನಿಃಶಬ್ದ ಮೂಲಕ ಬೆಳಗುವ ತಾನೇ ೨

ಪರಮ ಪ್ರಕಾಶ ಪರತರ ಪರಂಜ್ಯೋತಿ ಗುರುನಾಥಾ ।
ತೆರವಿಲ್ಲದಾರುತಿ ಭೀಮಾಶಂಕರ ಬೆಳಗುತ ೩

## ೨೩

ಗಜವದನ ಗೌರೀನಂದನ ಸಾಮಗಾನ ಲೋಲಜನ
ಮನನಧ್ಯಾನ ಹರಿಹರಾದಿಗಳ ಧನ ಸುಜನ ಜನ ವತ್ಸಲನ
ಸೋಮ ಸೂರ್ಯರ ನಯನ ಸುಗುಣಿ ಗುಣ ಗಂಭೀರನ ।
ಭುಜಗ ಭೂಷಣ ಕಂಕಣನ ಭುವನ ರಕ್ಷಕನ ಭುಜ
ಚತುಷ್ಕಾಯುಧಗಳಿಂದೆಸೆವ ಶುಭ್ರ ರದನ ವಿಜಯ ಮೂರುತಿ
ವಿಘ್ನವಿಪಿನ ದಾಹಕನ ವಿಘ್ನೇಶ್ವರಗೆ ಸಹಸ್ರನಮನ ೧

ನೀನೆ ಶಾಶ್ವತ ರೂಪ ನಿನ್ನ ಕೀರ್ತಿ ಪ್ರತಾಪ ಖೂನ ಕಂಡು
ಉಸುರೆನೆಂದರೆ ಶ್ರುತಿಗಳಾಲಾಪ ಮೌನಗೊಂಡವು ಮಿಕ್ಕ
ಶೇಷಾದಿಕರ ಸ್ಫೂರ್ತಿ ನಿಂತು ಹೋಗಿರಲು ಗಣಪ ।
.......................... ನಗೇಶನ ಮಾರ್ಗದ ಕೀಲ ಕೃಪೆ
ಮಾಡಿ ತೋರಿದರು ಶ್ರೀನಾಥ ಶ್ರೀಹರಿಯ ಚಾರಿತ್ರ್ಯ
ಪೇಳಿಸಲಿಕೆ ಆಧಾರ ನೀನೇ ಸತ್ಯ ೨

ಇಂತು ವಿಘ್ನೇಶ್ವರನ ಬಲಗೊಂಡ ಬಳಿಕ ಸಮನಂತರ
ದೊಳಾ ಶಾರದಾಂಬಿಕೆ ಶ್ರೀಪಾದ ಅಂತರಂಗದ ಪೀಠದಾಸನಕೆ
ಕರಕೊಳಲು ಬಂದೊದಗು ಜಿಹ್ವಾಗ್ರದಿ । ನಿಂತು ನಡಿಸುವ
ನಿನ್ನ ಶಕ್ತಿ................................... ವಂತೆ ವಿಶ್ರಾಂತೆ
ಪಾವನ ಮೂರ್ತೆ ಪ್ರಖ್ಯಾತೆ ವರದಾತೆ ಲೋಕ ಮಾತೆ ೩

ಅಜನ ಪಟ್ಟದ ರಾಣಿ ಸುಜನ ಜನ ಕಲ್ಯಾಣಿ ಭಜಕರ
ವರದಾನಿ ಭುಜಗ ಸಮವೇಣಿ ತ್ರಿಜಗ ಜೀವರ ಜನನಿ
ತ್ರಿತಾಪ ಸಂಹಾರಿಣಿ ತ್ರಿದೇಹ ಸಂಚಾರಿಣಿ । ದ್ವಿಜತುರಂಗ ಗಮನಿ
ದಿವ್ಯಾಂಬರಾಭರಣಿ ರಜ ........................
ಗಜಗಮನಿ ಗಂಧರ್ವಗಾನ ಲೋಲಿನಿ ವಾಣೀ ರತ್ನ
ಕೃತಾಂಗಿ ಅನುಕೂಲಿನಿ ೪

ಆವರಣ ಪದಶ ಮಹಿಮಾರ್ಣವ ವರ್ಣಿಸುವ
ದೇವ ಪುರುಷಗುಂಟು ಶಕ್ತಿ ಜಗಜೀವರೊಳ-
ಗಾವನ ಕೃಪಾವಲೋಕನದಿಂದ ದೇಹ ಭಾವವ
ಬಿಟ್ಟು ನೋಡುತಿರಲು । ಗೋವು ಶುನಿ ಶ್ವಪಚ
ಬ್ರಾಹ್ಮಣ ಹಸ್ತಿ ಕೃಮಿ ಕೀಟ ಭೃತ್ವಲಯದೊಳಗುಳ್ಳ
..................................... ಕೇವಲ ಪರಬ್ರಹ್ಮ ಸ್ಫುರಣ
ಸ್ಫೂರ್ತಿಯು ತೋರದಾರಿಂದ ಗುರುವಿನ್ಹೊರತು ೫

ಗುರುವರನ ಸ್ತೋತ್ರ ನಿಗಮಾಗಮಕಗಮ್ಯವದು
ಹರಿಹರಾದಿಕರು ಗುರುಧ್ಯಾನ ಪಾರಾಯಣದಿ
ಬೆರೆದು ನಿಜಸ್ವರೂಪದೊಳಗೋಲಾಡಿ ಸ್ವಸುಖದಿಂದಿಹರು
ಗುರು ಕರುಣದಿಂದ । ಗುರುನಾಥ ಮರುಳು ಮಂಕರಿಗೆ
ಇನ್ನಾರುಗತಿ ಕರುಣದ ಜಲಧಿ ಎಂದು ಮೊರೆ ಹೊಕ್ಕೆ ನಿನ್ನ
ಶ್ರೀ ಚರಣ .......... ಮಾಡಿ ರಚಿಸುವ ೬

## ೨೪

ಸ್ವಾಮಿ ನೃಸಿಂಹ ಸರಸ್ವತಿಗೆ ಮಂಗಳಾ ।
ಕಾಮಿತ ಕಾಮ ಫಲ ತೃಪ್ತಿಗೆ ಮಂಗಳಾ ಪ

ನಿರುಪಮ ನಿತ್ಯ ನಿರ್ಮಾಯಗೆ ಮಂಗಳಾ ।
ನಿರ್ವಾಣ ಸುಖ ಯತಿರಾಯಗೆ ಮಂಗಳಾ ೧

ಭಕ್ತಜನರ ಕಲ್ಪವೃಕ್ಷಗೆ ಮಂಗಳಾ ।
ಭಕ್ತಿಯಿಂದ ಭಜಿಸುವ ಮೋಕ್ಷಗೆ ಮಂಗಳ ।
ಭೀಮಾ ಗಂಧರ್ವಪುರ ವಾಸಗೆ ಮಂಗಳಾ ।
ಶ್ರೀ ಭೀಮಾಶಂಕರ ಗುರು ಈಶಗೆ ಮಂಗಳಾ ೩

## ೨೫

ಭೀಮಾ ಭವಭಯಕತಿದೂರಾ
ಭೀಮಾಶಂಕರನವತಾರಾ ।
ಭೀಮಾತೀರದಲಿಹ ವಾಯು
ಕುಮಾರಾ ಸಮರಂಗಣಧೀರಾ ೧

ಮಾಯಾಮಯ ಮುಸುಕಿದ ಬೆಟ್ಟಾ ।
ಮಾಯಾ ವಜ್ರಾಂಗವ ತೊಟ್ಟಾ ।
ಮಾಯಾ ಪಾಶದ ಸಂಗಮವನು ಬಿಟ್ಟಾ ।
ಲಂಕಾಪುರಿ ಸುಟ್ಟಾ ೨

ಶರಣಾಗತ ಭಕ್ತರ ಕಾವಾ ।
ಶರಣ ಜನರಂತರ್ಭಾವಾ ।
ಶರಣಾ ಬ್ರಹ್ಮಾದಿಗಳಿಗೆ
ಮಹದೇವಾ ಸಂಜೀವನ ತಾವಾ ೩

ಕರ್ತಾ ನೆಲವಿಗಿ ಪುರದೊಳಗೆ ।
ಕರ್ತಾ ರಾಮರ ಸ್ಥಳದೊಳಗೆ ।
ಕರ್ತಾನುಷ್ಠಾನಿಕ ಸೇವಕರಿಗೆ ।
ಭಾವನ ಇದ್ಧಾಂಗೆ ೪

ರಾಮಾ ಲಕ್ಷ್ಮಣನ ಬಂಧೂ ।
ರಾಮನ ಸೇವಕನೆಂದೂ ।
ರಾಮಾಶಂಕರ ಭೇದಿಲ್ಲೆಂದೂ ।
ತಿಳಿದವ ಸುಖಸಿಂಧೂ ೫

## ೨೬

ಶರಣೆಂಬೆ ನಾ ಶರ್ವಾಣಿ ವರನ ।
ಸಿರಿಪತಿ ಶಾರ್ಙ್ಗಧರನ ವರಸಿಂಧು ನಗರದೊಳು ।
ಸ್ಥಿರ ಭೋಗಗೊಂಬ ಸಂಗಮನ ಪ

ಬಾಲೇಂದು ಮುಡಿದ ಭಸಿತಾಂಗ । ಕಾಳಿಗರ್ಧಾಂಗಾ ।
ಪಾಲಿಸಿ ಕೊಡುವರೆ ದೊರೆಯ ಪೇಳಲಿಕಿನ್ನಾರನ್ಯದಾರೆ ।
ಭಾಲಾಕ್ಷನ ಲೀಲಾ ವಿಲಾಸ ಭೋಳಾ ದೇವೇಶ । ಕಾಲಿ
ಗೆರಗಿ ಬ್ರಹ್ಮಾದಿಕರು ಕಾಲಾಂತಕನ ವರ ಪಡೆವರು ।
ನೀಲಕಂಧರನ ನಿಗಮೋದ್ಧಾರನ ಸ್ಥೂಲ ಶರೀರನ ಸುಖ
ಸಂಚಾರನ ಶೀಲಕ ದೂರನ । ಶಾಂತಾಕಾರನ ।
ಮಾಲಾಧರನ ಮಹಾ ಗುರುಹರನ ೧

ಸುರನದೀ ಶಿರಧರನ ಶುಭಕರನ ಪರತರಪುರ ಹರನ ।
ತರುಣೇಂದು ಕೋಟಿಗಳೊಮ್ಮೆ ನೆರೆದಂತೆ ಕಳೇವರ ಕಳೆ
ಪೊಳೆಯೆ । ನಿರವಧಿ ಸ್ವರೂಪ ನಿಜರೂಪ ಅರಿತವನ ತಾಪ ।
ಉರಿಯಪ್ಪಿದಾ ಕರ್ಪುರದಂತೆ ಕರಗದುಳಿವುದೇ ಅದರಂತೆ
ಪರಮ ಪವಿತ್ರನ ಪಾವಕ ನೇತ್ರನ ಸುರಮುನಿ ಸ್ತೋತ್ರನ

ಸುಂದರ ಗಾತ್ರನ ನರಹರಿ ಮಿತ್ರನಹಿಗಳ
ಸೂತ್ರನ ಶಿರಕರ ಪಾತ್ರನ ಶಿವಸ್ವತಂತ್ರನ ೨

ಕಮಲಾಕ್ಷನ ಕಡುಭಕ್ತಿ ಕಂಡು ಕಮನೀಯ ಚಕ್ರ ।
ಸುಮನಾ ಸಾದು ಕೊಡಲು ನೋಡೆ ತಮ್ಮ ತಮಗೆಲ್ಲ
ಕೊಂಡಾಡೆ ಶಮನಾಘ ಶಾಸನವ ಮಾಡಿದನು
ಸುಮ್ಮನಿದ್ದೀಯಲ್ಲೋ ನೀನು । ಅಮಿತ ಭಕ್ತರು
ಇಳೆಯೋಳ್ ಇಹರು ನಮಿಸಲು ಸಲಹಿಕಾವನು ।
ಅಮರರ ಹೊರೆವನ ಅಧಿಕ ಪ್ರಭಾವನ ತಿಮಿರವ ಕಳೆವನ
ತೀರದಲಿವನ ಹಿಮಸುತೆ ಜೀವನ ಹಿಡಿದಿಹ ತ್ರಿಭುವನನ ।
ಶ್ರಮಗಳನಳಿವನ ಶಂಕರ ಭೀಮಾ ಶಂಕರನ ೩

# ಅ. ಶ್ರೀರಾಮಚಂದ್ರಚರಿತ್ರಾನುಸಂಧಾನ
# ಪ್ರಥಮ ಅಧ್ಯಾಯ

## ಸುಲೋಚನಾ ವಿಲಾಪ :

ಪ್ರಾಸ್ತಾವಿಕ – ವಾಲ್ಮೀಕಿ ಋಷಿ ಪ್ರಣೀತವಾದ ರಾಮಾಯಣ ವಿಶ್ವ ಸಾಹಿತ್ಯದಲ್ಲಿ ಪೂಜ್ಯಸ್ಥಾನ ಪಡೆದಿದೆ. ಕನ್ನಡ ಕವಿಗಳೂ ಈ ಆದಿಕಾವ್ಯವನ್ನು ಭಕ್ತಿಗೌರವಗಳಿಂದ ಕಂಡಿದ್ದಾರೆ. ಈ ಪಾವನ ಪರ್ವತದಿಂದ ಕವಿಗಳು ತಮ್ಮ ಅನೇಕ ಕೃತಿಗಳಿಗೆ ವಸ್ತು ರತ್ನವನ್ನು ಪಡೆದಿದ್ದಾರೆ. ರಾಮಾಯಣದ ಯುದ್ಧಕಾಂಡ ಅತಿರಮ್ಯವಾದದ್ದು. ಅದರಲ್ಲಿ ಬರುವ ಸುಲೋಚನಾ ಕಥೆಯ ಒಂದು ಭಾಗವನ್ನು ಅಂದರೆ ಸುಲೋಚನಾ ವಿಲಾಪ ಹಾಗೂ ಸುಲೋಚನಾ ಅಗ್ನಿಪ್ರವೇಶ ಈ ಎರಡೂ ಪ್ರಸಂಗಗಳನ್ನು ಜಕ್ಕಪ್ಪಯ್ಯನವರು ತಮ್ಮ ಶ್ರೀರಾಮಚಂದ್ರ ಚರಿತ್ರಾನುಸಂಧಾನದಲ್ಲಿ ಅತಿ ರಸವತ್ತಾಗಿ ಚಿತ್ರಿಸಿದ್ದಾರೆ. ಈ ಕಥೆಯ ಮೂಲವು ಕಾಶಿರಾಜ ಗುರುವಿನ ಶಿಷ್ಯರಾದ ಕೃಷ್ಣದಾಸ ಮುದಗಲ್ಲ ಇವರ 'ಯುದ್ಧಕಾಂಡ' ಎಂಬ ಮರಾಠಿ ಕಾವ್ಯದಲ್ಲಿದೆ. ಜಕ್ಕಪ್ಪಯ್ಯ ನವರು ತಮ್ಮ ಆಖ್ಯಾನದ ನಡು ನಡುವೆ ಕೃಷ್ಣದಾಸರ ಸುಲೋಚನಾ ಅಗ್ನಿಪ್ರವೇಶದ ಎರಡೂ ಪ್ರಕರಣಗಳನ್ನು ಉದ್ಧರಿಸಿದ್ದಾರೆ. ಜಕ್ಕಪ್ಪಯ್ಯನವರ ಕನ್ನಡ–ಮರಾಠಿ ಕಾವ್ಯವು ತಾತ್ವಿಕ, ನೈತಿಕ ಮತ್ತು ಆಧ್ಯಾತ್ಮಿಕ ವಿಚಾರಗಳಿಂದ ಗಹನ ಗಂಭೀರವಾಗಿದೆ. ಕೃಷ್ಣದಾಸರು ಸಿದ್ಧಬಸವ ಸಂಪ್ರದಾಯಕ್ಕೆ, ಅಂದರೆ ಈಗ ಪ್ರಚಲಿತವಿದ್ದ 'ಸಿಂದಗಿಯ ಭೀಮಾಶಂಕರ' ಸಂಪ್ರದಾಯಕ್ಕೆ ತೀರ ಪರಿಚಿತರು, ಹಾಗೂ ಅತಿ ಸಮೀಪಸ್ಥರು ಎಂದು ಕಾಣುತ್ತದೆ. ಭೀಮಾಶಂಕರರು ಬರೆದ 'ಸದ್ಗುರು ಚರಿತ್ರ' ಈ ಮರಾಠಿ ಕವನದಲ್ಲಿ, ಕೃಷ್ಣದಾಸರು ತಮ್ಮ ಗುರುಗಳಾದ ಗುರಪ್ಪಯ್ಯ (ಗುರುನಾಥ)ನವರ ಮಿತ್ರರೆಂದೂ ಅವರು ಸ್ವತಂತ್ರವಾಗಿ ತಾರಕ ಮಂತ್ರೋಪದೇಶ ಮಾಡುತ್ತಿದ್ದರೆಂದೂ ಅವರನ್ನು ಗೌರವಿಸಿದ್ದಾರೆ.

ಜಕ್ಕಪ್ಪಯ್ಯನವರು ಕನ್ನಡ–ಮರಾಠಿ ಉಭಯ ಭಾಷಾ ಪ್ರವೀಣರು. ತಮ್ಮ ಆಖ್ಯಾನದಲ್ಲಿ ಕೃಷ್ಣದಾಸರ ಮೂಲ ಕಥಾ ಭಾಗವನ್ನು ವಿಸ್ತರಿಸಿ, ಕೆಲವೆಡೆಗೆ ಬದಲಾವಣೆಗಳನ್ನು ಮಾಡಿ ತಮ್ಮದೇ ಆದ ಒಂದು ಶೈಲಿಯಲ್ಲಿ ಸಾಹಿತ್ಯ ಸೌರಭವನ್ನು ಒದಗಿಸಿದ್ದಾರೆ. ಒಟ್ಟಿನಲ್ಲಿ ಕೃಷ್ಣದಾಸರ ವಾಕ್ಯ ವಿಚಾರಗಳನ್ನು ಎತ್ತಿ, ಹಿಗ್ಗಿಸಿ ತಮ್ಮ ಹೊಸ ಕವನಕ್ಕೆ ಹವಣಿಯಾಗುವಂತೆ ಮಾಡಿಕೊಂಡಿದ್ದಾರೆ. ಕಥಾ ನಿರೂಪಣೆ ಕನ್ನಡ–ಮರಾಠಿ ಎರಡೂ ಭಾಷೆಗಳಲ್ಲಿದ್ದರೂ ಅದು ಒಂದು ಸುಸಂಬದ್ಧವಾದ ಸಮಷ್ಟಿ ; ಒಂದು ಮತ್ತೊಂದರ ಅನುವಾದವಲ್ಲ. ಎರಡೂ ಭಾಷೆಗಳ ಕಥನವು ಪರಸ್ಪರ ಪೂರಕವಿದ್ದದ್ದರಿಂದ ಆಖ್ಯಾನವು ಸುಸೂತ್ರವಾಗಿ ಸಾಗುತ್ತದೆ. ವಾಚಕರು ಎರಡೂ ಭಾಷೆ ಬಲ್ಲವರಿರಬೇಕು. ಒಂದು ಭಾಷೆಯಿಂದ ಪ್ರಾರಂಭವಾದ ಕಥಾಭಾಗ ಮತ್ತೊಂದು ಭಾಷೆಯಲ್ಲಿ ಮುಂದೆ ಸಾಗುವಾಗ ಮಾರ್ಗದಲ್ಲಿ ತಡೆ ತೆಟ್ಟುಗಳು ಬರುವದು ಅಥವಾ ಕಥಾ ಪ್ರವಾಹವು ನಡುವೇ ನಿಂತು ಹೋಗುವದು ಸ್ವಾಭಾವಿಕ. ಆದರೆ ಜಕ್ಕಪ್ಪಯ್ಯನವರಲ್ಲಿ ಈ ದ್ವಿಭಾಷಾ ಕೃತಿಯು ಅವ್ಯಾಹತವಾಗಿ ಮುಂದುವರಿಯುತ್ತದೆ. ಅದು ಎಲ್ಲಿಯೂ ಮುಗ್ಗರಿಸುವುದಿಲ್ಲ. ಹೀಗೆ ಈ ಕೃತಿಯು ಕನ್ನಡ ಸಾಹಿತ್ಯದಲ್ಲಿ ಒಂದು ಹೊಸ ಹೆಜ್ಜೆ.

ಕಥಾಮೃತವು ಮರಾಠಿಯಲ್ಲಿ ಚಾಮರಿ ವೃತ್ತದ ಐದು ನುಡಿಗಳಿಂದ ಪ್ರಾರಂಭವಾಗಿ ಕನ್ನಡದ ವಾರ್ಧಿಕ ಷಟ್ಪದಿಯಲ್ಲಿ ಮುಂದೆ ಸಾಗುತ್ತದೆ. ಆ ಮೇಲೆ ಬರುವದು ಮರಾಠಿಯಲ್ಲಿ ಮುಂದಿನ ಕಥಾಭಾಗ. ಅದು ಕನ್ನಡದಲ್ಲಿ ವಿಕಸಿತವಾಗಿ ಮುನ್ನಡೆಯುತ್ತದೆ. ಹೀಗೆ ಎರಡೂ ಭಾಷೆಗಳಲ್ಲಿ ಹೆಣೆದ ಈ ಕುಸುಮ ಮಾಲೆಯು ಸಾರಸ್ವತ ಪ್ರಪಂಚಕ್ಕೆ ಒಂದು ಅದ್ವಿತೀಯ ಅಲಂಕಾರ. ಈ ಕೃತಿಯ ಇನ್ನೊಂದು ವೈಶಿಷ್ಟ್ಯವೆಂದರೆ, ನಿರೂಪಣೆಯು ಸುರುವಾಗುವದು ಒಂದು ಶ್ಲೋಕದಿಂದ. ಈ ಶ್ಲೋಕ ಸೂತ್ರದಂತಿದೆ. ನಂತರ ಬರುವ ಪದಗಳು ಒಂದು ದೃಷ್ಟಿಯಿಂದ ಶ್ಲೋಕದ ಮೇಲಿನ ವಿಸ್ತೃತ ಭಾಷ್ಯ. ಅವು ಶ್ಲೋಕದಲ್ಲಿಯ ಕಥಾವಸ್ತುವನ್ನು ಹಿಗ್ಗಿಸುತ್ತವೆ. ಜಕ್ಕಪ್ಪಯ್ಯನವರ ಮರಾಠಿ ಬರೆವಣಿಗೆಯಲ್ಲಿ ಕನ್ನಡದ ಪ್ರಭಾವ ನಿಚ್ಚಳವಾಗಿ ಕಾಣುತ್ತದೆ. ಆದಿ ಪ್ರಾಸವು ಕನ್ನಡ ಕಾವ್ಯದ ಜೀವಾಳ. ಅದು ಜಕ್ಕಪ್ಪಯ್ಯನವರ ಮರಾಠಿ ಕೃತಿಯಲ್ಲಿಯೂ ಪ್ರತಿಬಿಂಬಿತವಾಗಿದೆ. ಅದರಂತೆ ಇವರ ಕನ್ನಡದ ವಿವರಣೆಯಲ್ಲಿ ಮರಾಠಿ ಶಬ್ದಗಳು, ಮರಾಠಿ ಪದ–ಪ್ರಯೋಗಗಳೂ ಸಾಕಷ್ಟಿವೆ. ಜಕ್ಕಪ್ಪಯ್ಯನವರು ಮರಾಠಿಯಲ್ಲಿಯ ಸವಾಯಿ ಹಾಗೂ ಚಾಮರಿ ವೃತ್ತವನ್ನು ಕನ್ನಡದಲ್ಲಿ ಇಳಿಸಿದ್ದಾರೆ. ಇಲ್ಲಿ ಕನ್ನಡ

ಭಾಗವನ್ನು ಹಾಗೆಯೇ ಇಟ್ಟು, ಜಕ್ಕಪ್ಪಯ್ಯನವರ ಮರಾಠಿ ನಿರೂಪಣೆಯನ್ನು ಸಂಕ್ಷೇಪದಲ್ಲಿ ಕನ್ನಡಿಸಿ ಕಂಸಿನಲ್ಲಿ ಕೊಡಲಾಗಿದೆ. ಆದ್ದರಿಂದ ಓದುವಾಗ ಕಥೆಯ ಸಾತತ್ಯವು ಎಲ್ಲಿಯೂ ಕುಂಠಿತವಾಗಲಾರದೆಂದು ನಮ್ಮ ವಿಶ್ವಾಸ.

ನಮಗೆ ದೊರೆತ ಪ್ರತಿಗಳಲ್ಲಿ 'ರ' ಪ್ರತಿಯನ್ನೇ ಆಧಾರವಾಗಿಟ್ಟು ಕೊಂಡಿದ್ದೇವೆ. ಆದರೆ ಈ ಪ್ರತಿಯಲ್ಲಿ ಕೆಲವು ಅಂಶಗಳು ಕಳೆದು ಹೋಗಿವೆ ಎಂದು ಕಾಣುತ್ತದೆ. ಈ ಪ್ರತಿಯಲ್ಲಿರದ ಮೂರು ಅವತರಣಗಳು 'ಶ' ಪ್ರತಿಯಲ್ಲಿ ದೊರೆತವು. ಅವನ್ನು ಇಲ್ಲಿ ಯೋಗ್ಯವೆನಿಸಿದ ಸ್ಥಳದಲ್ಲಿ ಜೋಡಿಸಲಾಗಿದೆ. ದುರ್ದೈವದಿಂದ 'ಶ' ಪ್ರತಿಯೂ ಕೂಡ ಪೂರ್ಣವಾಗಿ ಸಿಕ್ಕಿಲ್ಲ. ಅದರ ಎಷ್ಟೋ ಭಾಗವು ನಷ್ಟವಾಗಿದೆ.

ಕಥೆಯ ಭಾಷೆ ಕನ್ನಡವಿದ್ದರೂ ಅದನ್ನು ದೇವನಾಗರಿ ಲಿಪಿಯಲ್ಲಿ ಬರೆಯಲಾಗಿದೆ. ಆದ್ದರಿಂದ ಓದಲು ಸ್ವಲ್ಪ ಕಷ್ಟ. ಕನ್ನಡದ ಲಿಪಿಯಲ್ಲಿರುವ ಹ್ರಸ್ವ 'ಎ' ಹಾಗೂ ಹ್ರಸ್ವ 'ಒ' ಇವು ದೇವನಾಗರಿ ಲಿಪಿಯಲ್ಲಿ ಇಲ್ಲ. ವಿಶಿಷ್ಟ ಶಬ್ದ ನಿರ್ಧರಿಸುವಾಗ ಇದು ಒಂದು ದೊಡ್ಡ ತೊಂದರೆ. ನಮಗೆ ದೊರೆತ ಪ್ರತಿಗಳು ಬಹಳ ಹಳೆಯವು. ಕಾಲಾಂತರದಿಂದ ದೇವನಾಗರಿ ಲಿಪಿಯಲ್ಲಿ ಬದಲಾವಣೆ ಗಳಾಗಿವೆ. ಇನ್ನೊಂದು ವಿಷಯವೆಂದರೆ ನಮ್ಮ ಪ್ರತಿಗಳಲ್ಲಿ ಅನೇಕ ಪುಟಗಳು ನಡು ನಡುವೆ ಹರಿದಿವೆ. ಕಾಗದಗಳು ಬಹಳ ಜೀರ್ಣವಾದ್ದರಿಂದ ಅನೇಕ ಸ್ಥಳಗಳಲ್ಲಿ ಪುಟದ ಮೊದಲಿನ ಸಾಲು, ಕಡೆಯ ಸಾಲು ಹಾಗೂ ಕಡೆಯ ಅಕ್ಷರಗಳು ಅಳಿಸಿ ಹೋಗಿವೆ. ಕಾಲ ಮಹಿಮೆಗೆ ಪೂರಕವೆನ್ನುವಂತೆ ಎಷ್ಟೋ ಪುಟಗಳು ಗೆದ್ದಲುಗಳ ಆಹಾರವಾಗಿ, ಪುಟಗಳಲ್ಲಿ ನಡು ನಡುವೆ ಛಿದ್ರಗಳು ಅವತರಿಸಿವೆ. 'ಛಿದ್ರೇಷ್ವನರ್ಥಾ ಬಹುಲೀ ಭವಂತಿ' ಈ ನ್ಯಾಯದಂತೆ, ತೊಡಕು ಬರೆವಣಿಗಳಿಗೆ ನಾವು ಕೊಟ್ಟ ಅರ್ಥವು ಅನರ್ಥವೇ ಆಗಿರಬಹುದು ! ಕನ್ನಡ ಭಾಷಾ ಕೋವಿದರು ನಮ್ಮ ಬರಹವನ್ನು ತಿದ್ದಿ ಯೋಗ್ಯ ಪಾಠ ತಿಳಿಸಿದರೆ ನಾವು ಅವರಿಗೆ ಚಿರ ಋಣಿಯಾಗುವೆವು. ಸಂಶಯವಿದ್ದ ಪಾಠಗಳನ್ನು ಕಂಸಿನಲ್ಲಿ ಕೊಡಲಾಗಿದೆ.

ಈ ಕೃತಿಯಲ್ಲಿ ಸಮಸ್ತ ಪದಗಳು ವಿಪುಲವಾಗಿವೆ. ಉದಾಹರಣೆಯೆಂದರೆ :– ನಿರ್ಜರ–ಪತಿ–ಶತ್ರು–ಸತಿ ಈ ಪದ. ನಿರ್ಜರೆಂದರೆ ದೇವತೆಗಳು. ಅವರ ಪತಿ (ಪ್ರಮುಖ) ಎಂದರೆ ಇಂದ್ರ ; ಅವನ ಶತ್ರು, ಇಂದ್ರಜಿತ ; ಇಂದ್ರಜಿತನ ಸತಿ

(ಹೆಂಡತಿ) ಅಂದರೆ ಸುಲೋಚನೆ. ಹೀಗೆ ಈ ಸಮಸ್ತ ಪದದ ಅರ್ಥ ಸುಲೋಚನೆ ಎಂದು ಆಗುತ್ತದೆ. ಈ ಸಂತಕವಿಗಳ ಕೃತಿಗಳನ್ನು ಅಭ್ಯಸಿಸುವಾಗ ಪುರಾಣ, ಇತಿಹಾಸಗಳ ಪರಿಚಯವೂ ಅವಶ್ಯವಿದೆ. ಜಕ್ಕಪ್ಪಯ್ಯನವರ ನಿರೂಪಣೆಯಲ್ಲಿ ಬರುವ 'ರವಿಸುತಗೆ ಮಾದಿನ ದಿವಿಜ ಕಂಟಕನಾದ', ಈ ಗೀತದ ಸಾಲನ್ನು ನೋಡೋಣ. ರವಿಸುತ ಅಂದರೆ ಸುಗ್ರೀವ ; ದಿವಿಜ (ದ್ವಿಜ) ಅಂದರೆ (ಬ್ರಾಹ್ಮಣ ನಾದ) ರಾವಣ. ಮಾದಿನ (ಅವನು ಉನ್ಮತ್ತ). ಮೊದಲು ಸುಗ್ರೀವ ರಾವಣರ ಅತಿ ಸಖ್ಯವಿತ್ತು. ಆದರೆ ಈಗ ಮಾತ್ರ ವೈರಿಗಳಾದದ್ದು ದೈವ ದುರ್ವಿಲಾಸವಲ್ಲವೇ, ಎಂದು ಸುಲೋಚನೆಯು ಪ್ರಲಪಿಸುತ್ತಾಳೆ.

ಕರುಣರಸವೇ ಈ ಕಾವ್ಯದ ಪ್ರಧಾನ ರಸ. ಭಕ್ತಿ, ವೀರ ಅದ್ಭುತ, ಹಾಸ್ಯ ರಸಗಳು ಈ ಕೃತಿಗೆ ಪೋಷಕವಾಗಿವೆ. ಸಂಭಾಷಣೆಯ ಕೌಶಲ, ಶೈಲಿಯ ಸೊಗಸು. ಮತ್ತು ರಾಮ, ರಾವಣ, ಇಂದ್ರಜಿತ, ಸುಲೋಚನೆ ಇವರ ಪಾತ್ರ ನಿರ್ಮಿತಿ ಅಪ್ರತಿಮವಾಗಿವೆ.

ಈ ಕಾವ್ಯದಲ್ಲಿ ತತ್ತ್ವಜ್ಞಾನ ವಿವೇಚನೆಯೂ ಉಚ್ಚ ಶಿಖರಕ್ಕೇರುತ್ತದೆ. ಸೃಷ್ಟಿಯೆಲ್ಲ ತೋರಿಕೆ : ಅಸತ್ಯವಾದದ್ದು, ಪರಮಾತ್ಮನೊಬ್ಬನೇ ಸತ್ಯ ; ಅವನೇ ಪರಾತ್ಪರನು, ಅಂತಿಮ ಗತಿಯು. ಜೀವವು ಅಜ್ಞಾನಬದ್ಧ. ಶರೀರ ತಾನಲ್ಲ. ಪರಮಾತ್ಮನ ಸಂಕಲ್ಪದಂತೆ ಸುಖದುಃಖಗಳೆರಡೂ ಜೀವಿಗಳಿಗೆ ಪ್ರಾಪ್ತವಾಗು ತ್ತವೆ. ವಿಧಿ ಲಿಖಿತವನ್ನು ದೇವ ದೇವತೆಗಳೂ ಮೀರಲರಿಯರು. ತಾ ಮಾಡಿದ ಕರ್ಮಫಲಗಳನ್ನು 'ಜುಣುಗಿ ತಾನುಣಲೊಲ್ಲೆನೆಂದರೆ ಅಣಕವೆ, ತಮ್ಮಪ್ಪನುಂಬನೆ' ? ಈ ಕಠೋರ ಶಬ್ದಗಳಲ್ಲಿ ಕರ್ಮ-ಸಿದ್ಧಾಂತವನ್ನು ತಿಳಿಪಡಿಸುತ್ತಾರೆ. ಎಲ್ಲ ಘಟನೆಗಳು-ಭೂತ, ವರ್ತಮಾನ, ಭವಿಷ್ಯ-ಈಶ್ವರ-ನಿರ್ದಿಷ್ಟವಾಗಿವೆ. ಅವನೇ ನಿಯಾಮಕ. ಅವನು ನಿಯಮಿಸಿದಂತೆ ನಾವು ಜೀವನ ನಾಟಕವನ್ನು ಆಡುವೆವು, ಆಡಲೇಬೇಕು. ಇಲ್ಲಿ ನಾವು ಭಗವದ್ ಗೀತೆಯಲ್ಲಿ ಹೇಳಿದ ಈಶ್ವರ-ನಿಯತಿವಾದವನ್ನು ನೋಡುತ್ತೇವೆ. ಶ್ರೀರಾಮಚಂದ್ರನು ವಿಷ್ಣುವಿನ ಅವತಾರ, ಸಾಕ್ಷಾತ್ ಪರಬ್ರಹ್ಮ, ಅಗತಿಗಳಿಗೆ ಸುಗತಿಯನೀವ ಕೃಪಾಸಿಂಧು. ಈ ಕಾವ್ಯದಲ್ಲಿ ಪರಮಾತ್ಮನ ಸಗುಣ-ನಿರ್ಗುಣ ರೂಪಗಳ ಸಮನ್ವಯವಿದೆ. ಜಕ್ಕಪ್ಪಯ್ಯನವರು ಸಾರುವ ಮುಕ್ತಿಯ ವಿವರಣೆಯು ಅತಿ ಮನೋಹರವಾಗಿದೆ :

'ರಾಮನ ದರುಶನವೇ ಮುಕ್ತಿ ।
ಶ್ರೀ ರಾಮನ ಕಾಂಬುವದೇ ಮುಕ್ತಿ ।
ರಾಮ ತಾನಾಗುವದೇ ಮುಕ್ತಿ ।
ಈ ರಾಮನೊಳಗೈಕ್ಯವೇ ಮುಕ್ತಿ ।'

ಇವು ಸುಲೋಚನೆಯಾಡುವ ಮಾತುಗಳು. ಅವಳ ಅಗ್ನಿ-ಪ್ರವೇಶದ ವರ್ಣನೆ ಅದ್ಭುತವಾಗಿದೆ :

ಕುಂಡದೊಳಗೆ ತಾ ನೋಡಿ ಕಡಲಾಗ್ನಿ ರೂಪ ತ್ರಿಪದ ।
ಮಂಡೆಯೊಳು ಶೃಂಗ ನಾಲ್ಕು ಸಪ್ತಹಸ್ತವು ।
ಕಂಡಳಯ್ಯ ದಿವ್ಯದೇಹ ಗಂಡನ ಮೇಲೆ ಸತಿಯು
ಕೊಂಡು ಬೆರೆದಳಾಗ ಶಂಕರನ ಸ್ಮರಣೆಯಲಿ ॥

ಕೊನೆಗೆ ಬರುತ್ತದೆ ಈ ಕಾವ್ಯದ ಚರಮಶ್ಲೋಕ :

ಗಂಟಿಕ್ಕಿ ಕಟ್ಟಿಕೋ ಕಂಠದಲ್ಲಿ ।
ಉಂಟು ಸಾಮ್ರಾಜ್ಯ ವೈಕುಂಠಪದ ಕುಳಿತಲ್ಲಿ ॥

ರಾಮ ನಾಮವೆಂಬ ರಮಣೀಯ ರತ್ನ ಅದು ಕಾಮ- ಕಾಮಿತ-ಫಲ-ಪ್ರದ-ರೂಪವು. ಪ್ರೇಮವೆಂಬ ಹೇಮ ಸೂತ್ರದಿ ಪೋಣಿಕೆಯ ಮಾಡಿ ಶ್ರೀ ಮಹಾಗುರು ಮುಖದೊಳೀ ಮಣಿಯ ಕೈಕೊಂಡು ಆ ದಿವ್ಯ ರತ್ನಹಾರವನ್ನು ಸದೈವ ಕಂಠದಲ್ಲಿಟ್ಟುಕೋ. ಪರಮಾತ್ಮನ ನಾಮ ಹಾಗೂ ಅವನ ರೂಪ ಇವುಗಳ ವಿಲಕ್ಷಣ ನಿರೂಪಣೆಯನ್ನು ಜಕ್ಕಪ್ಪಯ್ಯನವರಲ್ಲಿ ನಾವು ಕಾಣುತ್ತೇವೆ :

ನಾಮ ರೂಪಗಳೊಳಗೆ ನಾಮ ತಾನೇ ನಿಜವು ।
ನಾಮ ವಿರಹಿತ ರೂಪ ಘಟಿಸುದುಂಟೇ ॥
ನಾಮ ತಾನೇ ರೂಪ, ನಾಮವೆನಲಪರೂಪ ।
ನಾಮದೊಳಹೊರಗೆಲ್ಲ ರಾಮನೇ ಹಿಡಿದಿಪ್ಪ ॥

ದೇವ ದೇವತೆಗಳಿಗೆ ನಮಿಸಿ, ಸದ್ಗುರುವನ್ನು ಸ್ಮರಿಸಿ, ಶ್ರೀರಾಮಚಂದ್ರ ಚರಿತ್ರಾನುಸಂಧಾನ ಪ್ರಾರಂಭವಾಗುತ್ತದೆ. ವಿಶ್ವಾಮಿತ್ರ ಋಷಿಯ ಯಜ್ಞ ರಕ್ಷಣೆ,

ಶಿವಧನುಷ್ಯಭಂಗ, ರಾಮನ ವನಗಮನ, ಸೀತಾಹರಣ, ಜಟಾಯು ಮತ್ತು ಶಬರಿ ಇವರ ಉದ್ಧಾರ, ಸುಗ್ರೀವ, ಹನುಮಂತರೊಡನೆ ರಾಮನ ಮಿತ್ರತ್ವ, ಹನುಮಂತನ ಲಂಕಾಗಮನ – ಈ ವಿಷಯಗಳ ಸಂಕ್ಷಿಪ್ತ ಆಖ್ಯಾನವು ನಮನದ ನಂತರ ಬರುತ್ತದೆ. ಲಂಕಾದಹನವಾದ ಮೇಲೆ ಹನುಮಂತನು ರಾಮನನ್ನು ಕಾಣಲು ಬರುತ್ತಾನೆ. ಅವನಿಂದ ಸೀತೆಯ ವೃತ್ತಾಂತ ಕೇಳಿ ರಾಮನು ವಾನರ ಪರಿವಾರದೊಡನೆ ಲಂಕೆಗೆ ಹೊರಡುತ್ತಾನೆ. ಮುಂದಿನ ಕಥೆ ಸುರುವಾಗುವುದು ಕನ್ನಡ ವಾರ್ಧಿಕ ಷಟ್ಪದಿಯ :

ಆಗ ಬಳಿಕಲ್ಲಿಂದ ಕಪಿವೃಂದಮಂ ಕೂಡಿ
ರಾಘವೇಂದ್ರಂ ತೆಂಕಡಲ ತೀರಕೆ ಬರಲು
ಪೋಗಿ ಕಾಂಬುವೆನೆಂದು ಬಂದ ವಿಭೀಷಣಗೆ
ಲಂಕಾಧಿಪತ್ಯ ಕೊಟ್ಟು ।
ಸಾಗರಕೆ ಸೇತುವಂ ಕಟ್ಟಿ ಅಂಬುಧಿ ದಾಟು
ತಾಗಳಂಗದನ ಕಳುಹಲು ರಾವಣನ ಬಳಿಂ –
ಗಾಗರ್ವನಿಧಿ ಮಾತಿಗೊಪ್ಪದಿರೆ ಸಂಧಿಕಾರ್ಯವು
ನಿಂತಿತೆಂದು ಬರಲು ೧

ರಾವಣನ ಚತುರಂಗ ಗಣನೆ ಮಾಡುವರಾರು
ದೇವಾಂತಕಂ ನಾರಾಂತಕನತಿಕಾಯಾದಿ
ಆವ ಸಂತತಿ ಲಕ್ಷಾನುಲಕ್ಷ ಪುತ್ರಪೌತ್ರರು ಕುಂಭನಿಕುಂಭರು ।
ಕೇವಲ ಕೃತಾಂತಾವತಾರ ಕುಂಭಶ್ರವಣ
ಸೇವಿಸುವ ಮಂತ್ರಿಗಳು ಪ್ರಹಸ್ತ ಮೊದಲಾದ
ಭೂವಲಯದೋಳ್ ಸಮಸ್ತರು ಮಡಿದು
ನಿರ್ನಾಮನಾಗಿರಲಿಕಿಂದ್ರಜಿತನು ೨

**ಸವಾಯಿ –**

ತಂದೆಯ ಮಹಾಶೋಕಿಂದು ನಿಲಿಸ ಬೇ–
ಕೆಂದಲಿದರ ಕಡ ತಿದ್ದಲಿ ಬೇಕು

ದಂದುಗರಿಗೆ ಕೆಡಕನು ತರಬೇ-
ಕೆಂದು ಮನದೊಳಗೆ ಇಂದ್ರಾರತಿಯು
ಬಂದನವನ ಕಂಡಾಗಳೆ ನಕ್ಕು
ವಂದನೆಯಾಗ ಅಸುರೇಂದ್ರಗೆ ಮಾಡುತ-
ಲಿಂದು ನಿರೋಪ ಪಡೆದ ಮೊರೆ ಪೊಕ್ಕು ೧

(ಇಂದ್ರಜಿತನು ವಿಜಯ ಪ್ರಾಪ್ತಿಗಾಗಿ ಒಂದು ಅಭಿಚಾರ ಯಜ್ಞವನ್ನು ಪ್ರಾರಂಭಿಸುತ್ತಾನೆ. ಇದನ್ನು ತಿಳಿದು, ಕಪಿವೀರರು ಅಲ್ಲಿಗೆ ಬಂದು ಯಜ್ಞವನ್ನು ಕೆಡಿಸುತ್ತಾರೆ. ಇಂದ್ರಜಿತ ಲಕ್ಷ್ಮಣ ಇವರ ಘನ ಘೋರ ಯುದ್ಧವಾಗಿ ಅದರಲ್ಲಿ ಇಂದ್ರಜಿತನು ಮಡಿಯುತ್ತಾನೆ).

**ಪದ –**

ಚತುರಂಗ ಬಲ ಬೆರಸಿ ನಡೆದನಾಗಲೆ
ಕ್ರತುಕಾರ್ಯವನು ಯೋಚಿಸಿ ಮೃಡಗದರಾ ಮೇಲೆ
ಅತಿ ದುರ್ಗಮವು ಎನಿಸಿ ಸೆಡಗರದಿಂದಲೆ
ಪೃಥಿವೀ ಸ್ಥಲಕೆ ಬಂದು ಅತಿಕಾಯಾಗ್ರಜನೆಂದು
ಕೃತು ದ್ರವ್ಯ ತರಿಸಿ ಬೇಗ ತತುಕ್ಷಣವೀಗ ಪ

ಸುತ ತನ್ನ ಬಲವೆಲ್ಲವೂ ಸುಯಿಧಾನಕಿರಿಸಿ
ಮತ್ತೆ ತೆಗೆಯಿಸಿ ಕುಂಡವ ತ್ರಯಪದನ ಬೆಳಸಿ
ಅತ್ಯಂತ ವಿಧಿಯುಕ್ತವು ಕ್ರಿಯ ದೀಕ್ಷಾ ಧರಿಸಿ
ಚಿತ್ತೈಕದಿಂದ ಹೋಮ ಕೃತ್ಯ ನಡೆಯೆ
ಕತ್ತಲೆ ತುಂಬಿ ಧೂಮ್ರವು ಸುತ್ತಲೆಲ್ಲ ೧

ಅತ್ತ ರಾಮನು ಸಭೆಯೊಳು ಅದ್ಭುತವಿದೇನೆನುತ
ಶರಣನ ಕೇಳಲು ಸದ್ಭಕ್ತ ಗಾಧಿ ಯತಿ ಇತ್ಯರ್ಥ
ಪೇಳಲು ಸದ್ಭಾವದಿಂದ ಯತಿ ತಮ್ಮನನಪ್ಪಿ
ಮತ್ತೆ ರಣಕಾರ್ಯಕೊಪ್ಪೆ ತಥಾ ಜಯವಂತನಾಗಯ್ಯ
ಇತಿ ಶ್ರೀ ವಾಕ್ಯ ೨

ಅನುಜಗೆ ಬುದ್ಧಿಯ ಕೊಟ್ಟು । ವಿಭೀಷಣನು
ಅನುವಂತೆ ಪೋಗೆ ಲೇಸುಂಟು । ಜಾಂಬುವಂತನ
ಧನಿಯನಪ್ಪಿ ಒಪ್ಪಿಸಿ ಕೊಟ್ಟು । ಗಂಧಮಾದನ
ಹನುಮ ನಂದಿ ನಾಮಕರನು ಕೂಡಿಕೊಂಡೇ ಲಂಕಾ
ಜನಪನೊಡನೆ ನಡೆದರು ಅನುವರಕ್ಕಿವರು ೩

ಪರಮ ಪ್ರಯಾಸದಿಂದವೆ ನಡೆದು ಮಾರ್ಗ ಇವರು ।
ಬರುತ್ತಲೆ ವೈರಿಸೈನ್ಯವ ಕೆಡಹಿ ಬಿಸುಟೆ ರು–
ಧಿರಾಗ್ನಿ ಕೆಡಸಲವರು । ಬೆರಸಿ ಬಹಸ್ಯಂದನಡಗೆ ।
ಕರವಿಡಿದು ಎಳೆಯಲವಗೆ । ಹಿರಿದು ರೋಷದಿಂದಲಿ
ನೋಡೆ । ಹರಿ ವೀರರೋಡೆ ೪

ಎದ್ದು ರಾಘವಾನುಜನ ಕೂಡಿ ಅದ್ಭುತ
ಯುದ್ಧ ಮಾಡಲು ಲಕ್ಷ್ಮಣ ನೋಡುವಾದಿತ್ಯ
ಸಿದ್ಧರು ಎಚ್ಚಿಸಿ ಬಾಣ ಮಡಿಸಿಯಲವನ ।
ಪದ್ದೇಳುವಂತೆ ಶಿರಬಿದ್ದು ಕಡಿದ್ಹೋಗೆ ಕರ,
ಬಿಟ್ಟಿತು ಪ್ರಾಣ ಸ್ಮರಿಸುತ ಜಯ ಶಂಕರೆನುತ ೫

(ರಣಾಂಗಣದಲ್ಲಿ ಇಂದ್ರಜಿತನ ಪ್ರಾಣೋತ್ಕ್ರಮಣವಾದ ಮೇಲೆ ಅವನ ಹಸ್ತವು ಅವನ ಪತ್ನಿ ಸುಲೋಚನಾ ಇವಳ ಅಂಗಣದಲ್ಲಿ ಬಿದ್ದಿತು. ಆಗ ಸುಲೋಚನೆಯು ಹೇಮ ಮಂಚದ ಮೇಲೆ ಕುಳಿತು ಗೆಳತಿಯರೊಡನೆ ಸರಸ ಸಲ್ಲಾಪದಲ್ಲಿ ಮಗ್ನಳಾಗಿದ್ದಳು. ಜಕ್ಕಪ್ಪಯ್ಯನವರ ಸುಲೋಚನೆಯ ವರ್ಣನೆ ಅತಿ ಸುಂದರವಿದೆ. ಅವರ ಶಬ್ದ ಚಿತ್ರವನ್ನು ನೋಡಿ).

**ಪದ –**

ಮಂಗಲ ಮೃಗನಯನಿ ಸುಲೋಚನಿ ಪ

ನೀರೆ ಗುಣಾಗ್ರಣಿ । ಚಾರು ಯೌವನ ಖಣಿ ।
ಕೀರ ವಾಣಿ ತರುಣಿ । ಶಿರೋಮಣಿ ೧

ಮಧುಪ ಕುರಳ ವೇಣಿ । ಮಧುರ ಪಿಕ ಧ್ವನಿ ।
ಅಧರ ಪ್ರವಾಳ ಮಣಿ । ಪದುಮ ಪಾಣಿ ೨

ಸೋಮ ಶುಭಾನನಿ । ಹೇಮ ಕೋಮಲಾಂಗನಿ ।
ಕಾಮ ಕಲಾ ಸದನಿ । ಸೀಮಂತಿನಿ ೩

ಮೂಗು ಸಂಪಿಗೆಯೆನೀ । ಮೂಗುತಿ ಸುಪಾಣಿ ।
ಯೋಗಿ ಸುಜನ ಮೋದಿನಿ (ಮೋಹಿನಿ) । ನಗಾಂಗನಿ ೪

ರದ ಮೌಕ್ತಿಕ ಮಣಿ । ಮದನ ದಿವ್ಯಾಂಗಿನಿ ।
ಮದ ಮುಖರಿದ ತಲ್ಲಣಿ । ಅಧಿಕ ಗುಣಿ ೫

ಕಂಬು ಕಂದ ಮಣಿ । ಬಿಂಬ ಸುಧಾಮಣಿ ।
ಕುಂಭ ಸಮಾನ ಸ್ತನಿ । ನಿತಂಬಿನಿ ೬

ಉದರ ತ್ರಿವಳಿ ಸುರ । ನದಿ ಕಿರು ತೆರೆ ಕರ ।
ಪದುಮ ಮಣಿ ವಜ್ರದುಂಗುರ । ಪದಕ ಹಾರಿ ೭

ಸುಳಿನ ....... ನೇಯಮಧ್ಯ .... ಹಾಲಿಕೆ ಸಿದ್ಧ ೮

ಬಾಳೆಯ ಸ್ತಂಭ ಕೇ .... ದಾಡೆಯಾರಂಭ ।
ಆಲ .... ಕಲಭ ..... ಶುಂಭ ೯

ಚರಣ ಚಲುವಂತಳಿ । ವರಣ ರಮಣೀಯ ।
ಕಟಿ ಮೇಖಲ । ಕಿರಣ .... ಬಾಹಳ ೧೦

ಪಂಕಜ ವಾಸಿತೆ । ಶಂಕರ ಅರ್ಚಿತೆ ।
ಸಂಕರುಷಣನಂ .... ಕರಮಾತೆ ೧೧

(ಇಂದ್ರಜಿತನ ಶಿರವನ್ನು ವೃಷಭನೆಂಬ ಕಪಿಯು ರಾಮನೆಡೆಗೆ ಒಯ್ದನು.

ಕಬಂಧವು ಮಾತ್ರ ರಣಭೂಮಿಯಲ್ಲಿಯೇ ನಿಂತಿತು. ಅಂಗಣದಲ್ಲಿ ಬಿದ್ದ ಹಸ್ತವು ತನ್ನ ಪತಿಯ ಹಸ್ತವೆಂದು ಸುಲೋಚನೆಗೆ ಸಂಶಯ ಉಂಟಾಯಿತು. ನವರತ್ನ ಮುದ್ರಿಕಾ ಮಂಡಿತ, ನಾಗ ಚಿಹ್ನಾಂಕಿತ, ಕಂಕಣ ವಿರಾಜಿತ, ಭುಜದಂಡದಲ್ಲಿ ಕೀರ್ತಿಮುಖವಿದ್ದ ಬಾಹುವನ್ನು ಕಂಡು ಇದು ತನ್ನ ಪತಿಯ ಹಸ್ತವೆಂದೇ ಗುರುತಿಸಿದಳು. ಪರಮೇಶ್ವರನು ಇದೇನು ವಿಪರೀತ ಪ್ರಸಂಗವನ್ನು ತಂದೊಡ್ಡಿದನು ಎಂದು ಶೋಕಾಕುಲಳಾದಳು. ಎದುರಿಗೆ ಬಿದ್ದ ಹಸ್ತವನ್ನು ಸಂಬೋಧಿಸುತ್ತಾಳೆ).

**ಶ್ಲೋಕ –**

ಕರದಿ ಕರವನು ಎತ್ತಿ ನೀನು ಇಲ್ಲಿಗೆ ಎನ್ನ ।
ಕರೆಯಲು ಬಂದುದು ಸತ್ಯವೇ ಸುದ್ದಿ ನಿನ್ನ ।
ಬರೆದು ಪ್ರಕಟ ಮಾಡು ಮೌನದಿ ಶಂಕರೆನ್ನ ।
ಪರಮ ವ್ರತಕೆ ಸಾಕ್ಷಿ ಇದ್ದರೆ ಗೂಢ ನಿನ್ನ ೫೫

**ಪದ –**

ಎತ್ತಿಕೊಂಡು ಪತಿಯ ಹಸ್ತ ಚಿತ್ತದಲ್ಲಿ
ಮಮ್ಮರುಗುತ । ಮತ್ತೆ ಇಲ್ಲಿಗೆ ಬಂದಂಥ
ವೃತ್ತಾಂತ ಹೇಳು ಉಚಿತ ಪ

ಕಾಯಿಕ ವಾಚಿಕ ಮಾನಸಿಕ ಶುದ್ಧ ತ್ರಿಕರಣಾ–
ದಿಯಲಿ ಪತಿವ್ರತೆಯಾಗಿದ್ದರೆ ಕೈಯ ಬರೆ ನಿನ್ನ ೧

ಪತಿದೈವೆಂತರಿತಿದ್ದರೆ ಪತಿ ಆಜ್ಞೆಯೊಳು ನಡೆದಿದ್ದರೆ ।
ಪತಿವ್ರತಾ ಧರ್ಮುಳ್ಳರೆ ಪತಿ ಸುದ್ದಿ ಬರೆ ೨

ಎನ್ನ ಪಾತಿವ್ರತ್ಯಕಿನ್ನು ಮುನ್ನ ಸಾಕ್ಷಿಕ ಶಂಕರನು ।
ಭಿನ್ನವಿಲ್ಲದಿರೆ ನೀನು ಚನ್ನಾಗಿ ಬರೆ ಖೂನು ೩

(ಸುಲೋಚನೆಯು ಹೀಗೆ ಆಡಿದ ಮೇಲೆ ಕರವು ಹೇಗೆ ಕಾರ್ಯ ಪ್ರವೃತ್ತವಾಯಿತು ? )

**ಸವಾಯಿ –**

ಪತಿವ್ರತೆ ಭೂರ್ಜ ಪತ್ರವನು ತರಿಸಲು
ಜಲನೇತ್ರ ಸುರಿಯೆ । ಆತುರದಿಂ ವರ್ತನಳಿದು
ಸಖಿವ್ರಾತಾಲಿಸೆ ನಿವಾಂತದಿ । ನನ್ನ ಪ್ರಿಯಳೆ
ಧೂರ್ತೆ ಸುಜಾತೆ ಪರಮ ವಿಖ್ಯಾತೆ
ಸ್ವಲೇಖನವನರಿಪೆ । ತನುಪಾತದೊಳೀತರ..
ದರ್ಶನ ಹೇತುವೆನಗಾಯ್ತು ಆತ್ಮಶ್ರೇಯೆ ೧

ನಾಗೇಂದ್ರಾತ್ಮಜೆ ನಾಗಗಮನೆ ಮದನಾಗಮ
ದೇವತೆ ನಾ ಗರ್ವದಲಿ । ರಾಘವ ಸಹ
ಶತ್ರೌಘವ ಕೊಲ್ಲಲುದ್ಯೋಗವ ಮಾಡಿದೆ ।
ಯಾಗ ಮುಖದಲಿ । ಮುಂಗಾವಳ ಹವಿಭಾಗ
ವಿತ್ತು ರುಧಿರಾಂಗ ವಿಧಾನದೊಳು ಗೌರವದಲಿ
ಸೋಗು ಮುಡಿದು ಜಯರಾದ ಸುಖ ಸೊಗ
ಸದಲಿ ರಾವಣಾದಿಗಳೆನುತಲಿ ೨

ಪ್ರಾಣಸಖಿಯೆ ಮತ್ ಪ್ರಾಣಧಾರೆ ಕೃಶಾನ
ಪ್ರಸನ್ನ ನಿದಾನಕೆ ತರಲು । ಏನೆಂಬೆನು ।
ಫಲಗಾಣುವ ಸಮಯದಿ, ವಾನರ ದಾಶರಥಿ ನಡೆತರಲು, ಜಾಣೆ,
ಪ್ರವೀಣೆ, ಶುಭಾನನೆ ಮಜನಕಾನುಜೆ, ಪ್ರೇರಿಸಲು ಕಪಿಗಳು ।
ಬಾನಡೇಗೆ ಹಾರುತ ನಿನ್ನ ಮೇಧ್ಯಕೆ ಹಾನಿ
ತಂದರು ಹೀನ ಹರಿಗಳು ೩

ವಾರಿಜೆಗಂಧಿ ನೀ ನಾರಿ ಶಿರೊಮಣಿ.............
..................ದರುಶನ (ಹ) ಉದ್ಧಾರ (ಬೀಳ)
.....................(ಲಕಾ) ............. ಮುಖಾ ॥

ಆ ರಘುವೀರ ಕುಲಜಗೆ ಶ.....ಕೈ ಸಾರೀತು
ಮಮ ಜೀವೋದ್ಧಾರವಾಗುದಕೆ ದಾನಕ್ಕೆ ಶೂರ
ಸುಮಿತ್ರೆ ಕುಮಾರನು ಯಾಚಕ ಭೂರಿಯ ತಿಲಕ ೪

ತರಣಿ ಕುಲೋದ್ಭವ ಪರಮ ಸುಪಾತ್ರನು
(ದೋರ.....ಚ.......ಯೂಯ ತಿ..........ದೋಳ್)
ಎರೆಸಿದನೆಂದು ಕರೆದಿತ್ತೆನು ಕೇಳ್ ಶಿರಸವ
ಫಲಿಸುದು ವರ ಸಾಯೋಜ್ಯದ ಶಿರಿ ತನಗಿಂದು ।
ಗಿರಿ ಮಂದಾರ (ದನ ತದಿ) ರಣಭೂಮಿಯೊಳು
ಉರಿವ್ರತ ಕಾಯವು ಮೋಹಕದು ನಿಂತು ।
ಶಿರ ರಘುರಾಮನ ದರುಶನ ಕೈದಿಹಲು ಕರೆಯಲು
ಕಳುಹಿದೆ ಕರ ನಿನಗೆಂದು ೫

ಸತಿ ಜನಗಳಲಿ ಉನ್ನತ ಶಿರರತ್ನವೆತ್ತಿ ಪತಿಗಾಣೆ
ನೆಂದು ಸ್ಥಿತಿ ನಿನಗಲ್ಲ । ಅತಿಶಯ ಗುಣಳನ್ನ
ಕೃತಕೃತ್ಯಳೆ (ಸ ಳ) ಎನ್ನದು ನಿನ್ನತಿಗಳೆದಿಲ್ಲ ।
ಸ್ಥಿತಿ ಕಾಲದಿಶು........ ಅತಿಥಿಯ । ಸ್ಮೃತಿ ಇರಲದು
ಶಾಶ್ವತ । ಶಿ....ತತುಕ್ಷಣದೋಳ್ ಸದ್ಗತಿ
ಪಡೆಯೆಂಬ ಸಹಿತ.... ಬಂತಲ್ಲ ೬

**ಭಾಮಿನಿ ಷಟ್ಪದಿ –**

ಮುನ್ನಲೀಶ್ವರ ಕಲ್ಪನೆಯಲಿ
ತನ್ನ ತಾನೆ ಬಹುದು ದುಃಖ ಮ–
ಹಾರ್ಣವದಿ ಸುಖವೆರಡು ದೇವಾಸುರರಿಗೊಳಗಾಗಿ ।
ತನ್ನ ಹಣೆಯಲಿ ಬರೆದುದಲ್ಲದೆ
ಇನ್ನು ತಾ ಬಯಸಿದರೆ ಬಾರದು
ತನ್ನ ವಶವಲ್ಲೀಶ್ವರಾಜ್ಞೆಯ ಮೀರಿ ನಡೆವುದಕೆ ೧

ಹಣೆಯ ಬರಹವ ಮೀರಿ ನಡೆವರೆ
ತ್ರಿಣೆಯರಿಂಗಳವಲ್ಲ ಮಿಕ್ಕಿನ
ಬಣಗುಗಳ ಪಾಡೇನು ಪೂರ್ವದ ಕರ್ಮ ಫಲಗಳನು ।
ಜುಣುಗಿ ತಾನುಣಲೊಲ್ಲೆನೆಂದರೆ
ಅಣಕವೆ ತಮ್ಮಪ್ಪನುಂಬನೆ
ಎಣಿಸಿ ನೋಡಲು ಈಶ್ವರಾಜ್ಞೆಯ ಮೀರಲಳವಲ್ಲ ೨

**ಶ್ಲೋಕ –**

ಕೊಟ್ಟ ಜೀತ ಪ್ರಮಾಣಕೆನ್ನ
ಕೊಟ್ಟು ಕೈಯ ಕಳುಹಿದನೆನ್ನ
ಬಿಟ್ಟು ಸರ್ವವು ತ್ವರಿತದಿ ಬಾಹುವಿನ
ಬಟ್ಟೆ ಲಕ್ಷಿಸುವ ಸರ್ಕನೆ ಬರೆವಣ ೬

**ಪದ –**

ಪ್ರಿಯಳೆ ನಿನ್ನ ಬಳಿಗೆ । ಪ್ರಿಯದಿ ಕರೆಸಲಿಕೆ ನಿನಗೆ ।
ಕೈಯನು ಕಳುಹಿದೆ ಈಗ । ಒಯ್ಯನೆ ಬೇಗ ಪ

ಎನ್ನ ಬಿಟ್ಟು ನಿಂತು ಇಂದು । ನಿನ್ನ ತನುವಭಿಲಾಷವಿಡಿದು ।
ತನ್ನ ಭವಕೆ ತಂದಿ ಇಂದು । ನಿನಗರುಹು ಎಂದು ೧

ಪತಿಭಕ್ತಿಯುಳ್ಳ ನೀ ಸತಿ । ಅತಿಶಯ ಶುದ್ಧಮತಿ ।
ಹಿತವಂತೆ ಪಡೆ ಪತಿ । ವ್ರತೆ ಧರ್ಮ ಸಂಗತಿ ೨

ಕೊಟ್ಟ ಭಾಷೆ ಪ್ರಮಾಣಕ್ಕೆ । ಮುಟ್ಟಿ ಶಂಕರ ಸಾಕ್ಷಿ ಇದಕೆ ।
ಕೊಟ್ಟ ಕೈಯ ಕರೆಯಲಿಕ್ಕೆ । ಅಟ್ಟಿದೆನಿದಕೆ ೩

(ಆ ಕರವು ಬರೆದ ಪತ್ರವನ್ನು ಓದುತ್ತಲೇ ಸುಲೋಚನೆಯು ಮೂರ್ಛಿತ

ಳಾಗಿ ಭೂಮಿಗೆ ಬೀಳುತ್ತಾಳೆ. ಅವಳ ಹೃದಯ ದ್ರಾವಕ ಪ್ರಳಾಪ ಸುರುವಾಗುತ್ತದೆ. ನೀನು ಇಂಥ ಪರಾಕ್ರಮಿ, ದೇವತೆಗಳಿಗೂ ಕೂಡ ಅಜೆಂಕ್ಯನಿದ್ದು ಕ್ಷುದ್ರ ಮಾನವನ ಕೈಯಿಂದ ನಿನಗೆ ಹೇಗೆ ಮೃತ್ಯು ಬಂತು, ಎಂದು ವಿಲಪಿಸುತ್ತಾಳೆ).

**ಪದ –**

ಕಂತುಹರ ಮುನಿದರೆ ದಲಿಸದಂಥ ।
ತಂತುಹುಳ ಧೀರವಾಯಿತು ಅಚ್ಚರಿ ಇಂಥ ಪ

ಇಂದು ನಕ್ಷತ್ರಗಳೊಂದಾಗಿ ದಿನಮಣಿಗೆ ।
ಬಂಧಿಸಲಡಗಿ ಹೋದೆಂಬ ಹಾಂಗ ।
ಇಂದು ಲಕ್ಷ್ಮಣ ಪ್ಲವಂಗ ವೃಂದ ಮುತ್ತಲು ನಿನಗೆ
ಚಂದುಳ್ಳ ನಿನ್ನ ವಪು ಎನ್ನ ಬಿಟ್ಹೋದಿ ಹ್ಯಾಂಗ ೧

ನರಿಯು ಹರಿಣಗಳ ನೆರೆದು ಸಿಂಹನ ಹಗಲು
ಹಿರಿದು ಮುತ್ತಲು ಜೀವವುಳಿವಂತೆ ಬಲು
(ಜೀವವುಳಿವ ಒಲು)
ಕರಿಗೆ ನೊಣಗಳು ಎರಗೆ ಅಸು ಬಿದ್ದಂತೊಲು
ನರ ಕಪಿಗಳಿಂದ ತನುವಳಿವಚ್ಚರಿ ಬಲು ೨

ರವಿಸುತಗೆ ಮಾದಿನ ದ್ವಿಜ ಕಂಟಕನಾದ ।
ಭುವನ ತ್ರಯಕ ಕಲ್ಪಾಂತಕ ಹರನಾದ ।
ಜೀವಕ್ಕೆ ಮನುಜ ಮುನಿದ । ಬಹುಚೋದ್ಯವಾಯಿತಿಂದು ।
ಭವಹರ ಶಂಕರನೆಮಗೆ ವಿಮುಖನಾದ ೩

(ಸುಲೋಚನೆಯ ಶೋಕವು ನಿಲ್ಲದಿರಲು ಗೆಳತಿಯರು ಸಾಂತ್ವನ ಮಾಡುತ್ತಾರೆ).

ಶಶಿಮುಖಿಯರೆಂದರು ಸೃಷ್ಟಿಯೆಲ್ಲ ।
ಹುಸಿ, ತೋರುವ ತೋರಿಕೆ, ಸತ್ಯವಲ್ಲ ।
ಮೃಷಾ ಶೋಕದಿಂದಾಗುವ ಹಾನಿ ಸಲ್ಲ ।
ಅಸುರೇಂದ್ರಗೆ ಪೋಗಿ ಬಿನ್ನೈಸು ಸೊಲ್ಲ ೯

ಪದ –

ಸಖಿಯರೆಲ್ಲರು ಸುಲೋಚನೆಗೆ ನುಡಿದರು ।
ನಿಕಟ ಪತಿಶೋಕ ಸತ್ತ್ವಹಾನಿ ಮಾಡಿದರು ಪ

ಪತಿವ್ರತಾ ಅಹಲ್ಯಾ, ಸೀತಾ, ತಾರಾ, ಮಂದೋದರಿ ।
ಅತಿಶಯ ಇವರೊಳಗಾದಂಥ ಕುಮರಿ ।
ಪತಿ ಪರಮೇಶ್ವರನೆಂದರಿದಿಹ ಪತಿಸಂಗಧಿಕಾರಿ ।
ಹಿತಪಥವರಿಯದೆ ಶೋಕವ ಮಾಡಲು ಹಾನಿ ಸರಿ ೧

ಇಂದ್ರಜಿತನೆ ತಾ ಲಕ್ಷ್ಮಣನೆ ತಾ ಮಾನವ ।
ಇಂದ್ರಾದಿ ಸುರರ ನಡಿಸಿಕೊಳುತಿಪ್ಪನವ ।
ಚಂದ್ರಾನನೆ ಸುರ ಸ್ತ್ರೀಯರು ಮಾಡುವರು ದಾಸ್ಯತ್ವ ।
ಚಂದ್ರಶೇಖರಗ ತಪ್ಪಿತೇನೋ ಬಿಡು ಅಳುವ ೨

ಬರೆ ತೋರುವದೆಲ್ಲ ತೋರಿಕೆ, ಕಡೆಯಲ್ಲಡಗುವದು ।
ಶರೀರ ತಾನಲ್ಲ ತನ್ನೊಳು ತೋರಿಕೆ ತೋರುವದು ।
ಪರಮ ವಿವೇಕದಲಿ ತಿಳಿ ಶಂಕರನೆ ಗತಿಯೆಂದು ।
ಹರಿದು ಬಿಸುಡು ಶೋಕ ಬಹು ನಿನಗೆ ಹೇಳುವದೇನಿಹುದು ೩

(ಸಖಿಯರ ಸಾಂತ್ವನವನ್ನು ಕೇಳಿ ಸುಲೋಚನೆಯು ತನಗಿನ್ನು ಪರಮಾತ್ಮನೇ ಗತಿ ಎಂದು ಎಲ್ಲ ರಾಜವೈಭವವನ್ನು ತ್ಯಜಿಸಿದಳು).

**ಶ್ಲೋಕ –**

ಪತಿಹೊರತಾಗಿ ಎಲ್ಲ ವಮನವನು ಮಾಡೈಶ್ವರ್ಯವನು ।
ಅತಿಸಾಧು ಬಿಟ್ಟ ಪರನಿಂದಾ ದೋಷಗುಣನು ।
ರತನಲಂಕಾರ ಕನಕ ಚತುರಂಗ ಬಲವನು ।
ಸತಿ ಹೇಯಾಕಾರ ಮನದೊಳಗೆ ಮಾಡಿದಳನಿತನು ೧೦

**ಪದ –**

ಆತ್ತರದ ಭಾಗ್ಯವನು ಪ್ರೀತಿಂದ
ಮಾಡಿದಳು ತ್ಯಾಜ್ಯವನು ಪ

ಸಜ್ಜನ ಗುಣದೋಷನಿಂದೆಯನಳಿದನು ।
ವಜ್ರಾದಿ ಧನ ಬಿಟ್ಟ ನಿರಾಶನು ।
ತ್ಯಾಜ್ಯ ಮಾಡಿದ ಕುಲಸ್ತ್ರೀಯ ವಿರಕ್ತನು ।
ಧೂರ್ಜಟಿ ಬಿಟ್ಟ ಮಾಂಗಲ್ಯವನು ೧

ಸಂಪಿಗೆಯ ತ್ಯಾಜ್ಯ ಮಾಡಿತಳಿಕುಲ ।
ಸಿಂಪಿಯ ಬಿಟ್ಟಿತು ಮುಕ್ತಾಫಲ ।
ಸಂಪೂರ್ಣ ಶಶಿ ತನ್ನಳಿದ ಪೂರ್ಣ ಕಲಾ ।
ಸಂಪತ್ತು ಬಿಟ್ಟ ಬಲಿ ಭೂಪಾಲ ೨

ಚತುರ್ದಶಿ ಭುವನದಿ ಎದುರಿಲ್ಲಾವನು ।
ಚತುರ್ಮುಖ ಪಂಚಾಂಗ ಜೋಯಿಸನು ।
ಪತಿ ಹೊರತೈಶ್ವರ್ಯ ಮಾಡಿ ವಮನವನು ।
ಸತಿ ಗತಿ ತನಗಿನ್ನು ಶಂಕರನು ೩

**ಶ್ಲೋಕ –**

ಮಂದಿರದ್ವಾರ ವಂದಿಸಿ ಕರ ।
ಅಂದಣದೊಳು ಇರಿಸಿ ಸತ್ವರ ।

ಬಂಧನವನಳಿಸಿ ಪಕ್ಷಿಮೃಗವರ ।
ನೊಂದು ನಡೆದಳು ಪತಿಯಗೋಸ್ಕರ ೧೧

**ಪದ –**

ನಿಲ್ಲದೆ ನಡೆದಳು ಲಂಕೆಗೆ ।
ಎಲ್ಲಿ ಪತಿಪಿತನಲ್ಲಿಗೆ ಪ

ಮನೆಗೆ ನಮನವ ಮಾಡಿ ಹೊರಟಳು ।
ಮನದಲಿ ಪತಿಶೋಕ ಭಾರದೊಳು ।
ಕನಸಿನಂದದಿ ಮೃಷಭಾಗ್ಯವ ತೊರೆದಳು ।
ಕನಕಂದಣದಿ ಭುಜವಿಡಿಸಿದಳು ೧

ಶುಕ ಸಾರಿಕಾ ಮಯೂರ ಮರಾಳಿರೇ ।
ಬಕ ಲಾವಕ ತಿತ್ತಿರಗಳಿರೇ ।
ನಕುಲ ಕಸ್ತೂರೀಮೃಗ ಸಾರಂಗ ಹರಿಣಿಯರೇ ।
ಭಕುತಿ ಇರಲಿ ಬಹುಪ್ರೇಮಿಯರೇ ೨

ಪುತ್ಥಳಿಗಳಿರೇ ನಾನು ಹೋಗುವೆ ಸ್ನೇಹವಿರಲಿ ।
ಮತ್ತೆ ನಿಮ್ಮನು ಶಂಕರನು ರಕ್ಷಿಸಲಿ ।
ಅತಿ ಶೋಭವಂತರಾಗಿಹುದು ಎಂದಿಗಿಲ್ಲಿ ।
ಪಥ ಹತ್ತಿ ನಡೆದಳು ಮಾವನಲ್ಲಿ ೩

(ಪತಿಯ ಶಿರಕ್ಕಾಗಿ ಸುಲೋಚನೆಯು ನಿಶಾಚರ ಸೈನ್ಯದೊಡನೆ ಮಾವನಾದ ರಾವಣನ ಕಡೆಗೆ ಹೊರಟಳು. ರಾವಣನು ತ್ರಿಕೂಟ ಕೋಟೆಯಲ್ಲಿದ್ದನು. ಕೋಟೆಯನ್ನು ರಕ್ಷಿಸುತ್ತಿದ್ದ ಸೈನಿಕರು ಸುಲೋಚನೆಯೊಡನೆ ಬರುತ್ತಿರುವ ಸೈನ್ಯವನ್ನು ದೂರಿನಿಂದ ನೋಡಿ, ದೇವತೆಗಳ ಸೈನ್ಯವು ವಾನರ ಸೈನ್ಯದ ಸಹಾಯಕ್ಕಾಗಿ ಬರುತ್ತಿದೆ ಎಂದು ಗಾಬರಿಯಾಗಿ, ಮಹಾದ್ವಾರವನ್ನು ಮುಚ್ಚಿದರು. ಸುಲೋಚನೆಯು ಇದನ್ನು ತಿಳಿದು ದೂತನೊಬ್ಬನನ್ನು ಕಳುಹಿಸಿದಳು. ರಕ್ಷಕರು ಅವನನ್ನು ಗುರುತಿಸಿ ಕೋಟೆಯ ಸಣ್ಣ ಬಾಗಿಲದಿಂದೇ ಅವರನ್ನು

ಬರಮಾಡಿಕೊಂಡರು. ಸುಲೋಚನೆಯು ರಾವಣನಿಗೆ ವಂದಿಸಿ ಪತಿಹಸ್ತ ತೋರಿಸಿ, ಬರೆವಣಿಗೆಯನ್ನು ಅವನಿಗೆ ಕೊಟ್ಟಳು).

**ಶ್ಲೋಕ** _

ಪತ್ರದಲಿ ಕೇಳಿ ತಾನು ಪುತ್ರ ಮರಣ ವಾರ್ತೆಯನು ।
ಶತ್ರುರಿಂದಾದುದೇನು ಧಾತ್ರಿಗುರುಳಿ ಬಿದ್ದನು ।
ಪುತ್ರ ನಿನ್ನ ಬಲದಿ ಧರಿತ್ರಿಸುತೆಯನು ತಂದೆ ।
ಶತ್ರುವೆಂದು ರಾಮನ ವೈರದಿ ವಿಚಿತ್ರವಾಗುದರಿಯದೆ ೧೩

**ಪದ** –

ಶತ್ರುಗಳಿಂದ ರಣದಲಿ ಪುತ್ರ ಮರಣ ವಾರ್ತೆಯ ಕೇಳಿ ।
ಪತ್ರದಿ ಕೇಳಿತಾಸನದಿಂದೆಸೆವ ಗಾತ್ರನು ಬಿದ್ದ ಧಕ್ಕಾಗಿತ್ತಲಿ ಪ

ಎಚ್ಚತ್ತು ಸಾವಧನಾಗಿ । ಹೆಚ್ಚಿತು ಶೋಕೋದ್ಭವವಾಗಿ ।
ಉತ್ಸಾಹವೆಲ್ಲ ತ್ಯಜಿಸಿತೆನಗೆ । ಹುಚ್ಚು ಹಚ್ಚಿ ಹೋದಿ ಎನಗೆ ೧

ನಾ ನಿನ್ನ ಭರವಸದಿಂದ । ಜಾನಕಿಯನು ಇಲ್ಲಿಗೆ ತಂದೆ ।
ಭಾನು ಕುಲಜನ ಸಂಗಡ ದ್ವೇಷ ಅವಮಾನೆಂದು ಕಟ್ಟಿದೆ ೨

ಶಚಿಪತಿ ದೇವರು ನಿನ್ಹೆಸರು । ವಚನದಿ ಕೇಳುತ ನಡುಗುವರು ।
ಅಚಲಜಾವರ ಶಂಕರ ಕೋಪಿಸಿದನೆ । ಶುಚಿಸುತ ಬಿಟ್ಹೋದ್ಯಾ ದೂರು ೩

**ಸವಾಯಿ** _

ಆವನ ಭಾಗ್ಯವು ವರ್ಣಿಸೆನೆಂದರೆ ।
ಸಾವಿರ ವದನುಳ್ಳವಗಳವಲ್ಲ ।
ಪಾವಕ ಶಶಿ ರವಿ ದಿವಾಧಿಪ ವಾಣೀ
ವರ ಶಿವ ಮೊದಲಾದವರೆಲ್ಲ ।

ಸೇವಕರೆನ್ನಯ ಸೇವೆಯ ಮಾಳ್ಪರು
ಆವನು ಭುವನದೊಳೆನಗಿದಿರಿಲ್ಲ ।
ಈ ವೈಭವದೆ ರಾಮನ ತಡೆಯೆ
ವಿಭು ಶಂಕರ ಹರಿದೆನಿದೆಲ್ಲ ೧

ಪದ –

ಆವನೈಶ್ವರ್ಯವನು ಜಗದೊಳಗೆ ಪೊಗಳುವಡೆ ।
ದೇವತೆಗಳೆಲ್ಲ ಕೈ ಮುಗಿದುಕೊಂಡು ।
ಆವಾವ ಸೇವೆಗಳ ಮಾಳ್ಪುದೇನು ಕೇಳುವದು ।
ರಾವಣನ ಸಿರಿಗೆ ಸರಿಯುಂಟೆ ಭುವನ ತ್ರಯದಿ ಪ

ಆವನೈಶ್ವರ್ಯ ಕಮಲಜನು ತಿಥಿ ವಾರ ನಕ್ಷತ್ರ ।
ಯೋಗ ಪಂಚಮ ಕರಣ ಪಂಚಾಂಗ ಪೇಳುತಿಹನು ।
ಕಮಲಾರಿ ಕಮಲಸಖ ದಶಮುಖನ ಸಭೆ ತಮ್ಮ ।
ವಿಮಲ ಕಿರಣಗಳಿಂದ ಬೆಳಗುತಿಹರು ೧

ಅವಿರಳದ ಗಗನ ಮೇಲೆ ಗಟ್ಟ್ಯಾಗಿ ನಿಂದಿಹುದು ।
ಪವನ ಪಾವಕ ಝಾಡನೆಯ ಪಾಕ ಕೆಲಸ ।
ಸವಿ ಶೀತಲುದಕ ಜಲಪತಿ ತಂದು ಕೊಡುತಿಪ್ಪ ।
ಭುವನ ವೈಭವನ ರಚನೆಯಿಂದ ಶೋಭಿಸುತಿಹುದು ೨

ದಿವ್ಯ ಪುಷ್ಪಸುಗಂಧ ದ್ವಿಜಪತಿ ಶಿವಪೂಜೆ ।
ದ್ರವ್ಯ ಪರಿಕರವೆಲ್ಲನೊದಗಿಸುವನು ।
ಸವ್ಯಾಪಸವ್ಯದೊಳು ದ್ವಿಜೌಘ ತಮತಮ್ಮ ।
ಸೇವೆ ಚರಣ ಮಾಳ್ಪರತಿ ಭೀತಿಯಿಂದಲಿ ೩

ದಶಬಾಹು ಪಂಚದಶನಯನ ಮುಖವೈದುಳ್ಳ ।
ಪಶುಪತಿ ಪರಂಜ್ಯೋತಿ ಪರಮಾತ್ಮನು ।

ದಶಕಂಠ ದ್ವಿದಶಭುಜ ಸ್ಮರಿಸಲ್ಕೆ ।
ಬಂದೊದಗುತ ಸಮಪೂಜೆಯ ಕೊಂಡು ಪೋಗುತಿಹನು ೪

ಕೋಶಾಧಿಪತಿಯಾಗಿ ಶೇಷರಾಜನು ವಸ್ತ್ರ-
ಭೂಷಣವ ಕಾಲಕಾಲಕೆ ಈವನು ।
ಈ ಸಕಲ ಸೃಷ್ಟಿಯನು ಗ್ರಾಸಮಾಡುವ ಯಮನು ।
ಮೀಸಲಿರಿಸಿದ ಪಾದರಕ್ಷೆಯನಿಡುವ ೫

ಗರುಡ ಗಂಧರ್ವ ಗುಹ್ಯಕ ಸುರಾಸುರರೆಲ್ಲ ।
ಅರಸಿಯರು ಸಹ ಓಲಗಿಸುತಿಪ್ಪರು ।
ನರಪತಿಗಳರಸುಗಿರಸುಗಳೆಂಬ ಮಾತು ।
ಕಿವಿಗರಿಕೆಯಾದರೆ ಜೀವಿಸುವರುಂಟೆ ಹೇಳಾ ೬

ರಂಕರೆಲ್ಲರ ಮಾಡಿ ಕೊಂಕ ಕೊರತಿಯ ನೋಡಿ ।
ಹಂಕಾರದಿಂದ ಕಾಡಿದ ಸೃಷ್ಟಿಯ ।
ಮಂಕುತನ ಕಂಡು ಶಂಕರನವಕೃಪೆ ಪಡಕೊಂಡು ।
ಲಂಕೇಶನೈಶ್ವರ್ಯ ಬಯಲಾಯಿತ್ತೈ ೭

(ರಾವಣನ ಶೋಕವನ್ನು ನೋಡಿ ಸುಲೋಚನೆಯು ಅನ್ನುತ್ತಾಳೆ – ಮಾವನವರೇ, ವ್ಯರ್ಥ ಶೋಕದಿಂದೇನು ಪ್ರಯೋಜನ ? ನನ್ನ ಪತಿಯ ಶಿರವ ತಂದು ನನ್ನ ಕೈಯ ಕೊಡಿ. ನನ್ನ ಪತಿಯೊಡನೆ ಸಹಗಮನ ಮಾಡಿದರೆ ಆತ್ಮಕಲ್ಯಾಣವಾಗುವದು).

**ಶ್ಲೋಕ** –

ಸತಿ ಎಂದಳು ಮಾವ ನೀವೆನ್ನ ಕೈಯ ।
ಪತಿಶಿರವ ತಂದು ಈಯುದು ರಾಯ । (ನೀಡುವದು ರಾಯ)
ಸಹಗಮನಕುದ್ಯೋಗ ಮಾಡಿಸುವದೈಯ್ಯಾ ।
ವೃಥಾ ಶೋಕದಿಂದಾಗುದು ಏನು ಕಾರ್ಯ ೧

**ಪದ** –

ಮಾವನವರೆ ಎಷ್ಟಂತ ಶೋಕ ಬರಿದೆ ।
ನೀವು ಮಾಡಲು ಎಂದಿಗೆ ತೀರುವದೆ ಪ

ತಂದು ಪತಿಶಿರವೆನ್ನ ಕೈಯ ಕೊಡಿ ।
ಮುಂದೆ ನಿಮಗೆ ತಿಳಿದಂತೆ ಮಾಡಿ ೧

ರಾಕ್ಷಸರರಸ ಮಾಡೆನ್ನ ಮೇಲುಪಕಾರ ।
ಮೋಕ್ಷಕ್ಹೋಗುವೆ ತಂದು ಕೊಡು ಶಿರವ ೨

ಆವ ಕಾಲದಿ ಏನೇನಾಗುವದೆಲ್ಲ ।
ಮಾವ ಚಿಂತ್ಯಾಕೆ ? ಶಂಕರನೆ ಬಲ್ಲ ೩

**ಶ್ಲೋಕ** –

ಕೇಳಿ ಸಿಂಹಾಸನದಿಂದ ಎದ್ದು ತ್ವರಿತ ಸೈನ್ಯ ಸಜ್ಜ ಮಾಡಿರಿ ।
ಮೌಳಿಯೊಂದಕೆ ಎಂಟು ಮಂದಿ
ತಲೆಯ ತಾಹೆನು ನೀವ್ ಕೇಳಿರಿ ।
ಬಾಲಾರಿ ಸಹ ರಾಮ ಮಿತ್ರತನುಜ ಭ್ರಾತಾಂಜನೇಯಂ ತರಿ ।
ವಾಲಿಜ ವರ ಜಾಂಬವಾದಿ ಶಿರ ಛೇದಿಪೆ ಇನ್ನೇಳಿರಿ ೧೬

**ಪದ** –

ಉರಿ ಉರಿದು ಎದ್ದ ಅವರ ಸನ್ನಿಧ ಪ

ಕಿಡಿಯುಗುಳುತ್ತ ಸಚಿವರಿಗೆಂದನು ।
ಪೊಡವಿಯೊಳೆನಗಿಂದಿಗಿದಿರಾವನು ೧

ರಾಮಾದಿಗಳೆಂಟು ತಲೆ ತರುವೆನು ।
ಆ ಮಾನವ ಕಪಿಯೊಳಿದ್ದವರನು ೨

ಮುಂದೆ ಕಪಿವೃಂದಗಳೆಲ್ಲನು ।
ಸಿಂಧುವಿನೊಳು ಮುಳುಗಿ ಹಾಕಿಸಿ ಬಿಡುವೆನು ௨

ಕೈಲಾಸ ಅಲ್ಲಡಿಸಿದಂಥಾತನು ।
ಶೂಲಿಯರಿಯ ಬಲ್ಲನೆ ಮಿಕ್ಕವರನು ೪

ಲಂಕೇಶ್ವರನಾದಂಥ ರಾವಣ ।
ಶಂಕರ ಬಲವಿರೆ ಪರವೆ ಏನಿವನ ೫

(ರಾವಣನ ಈ ಹೆಮ್ಮೆಯ ಮಾತು ಕೇಳಿ ಮಂದೋದರಿಯು ಸುಲೋಚನೆಗೆ ಅನ್ನುತ್ತಾಳೆ – ಅಮ್ಮಾ, ನಾನು ಸ್ವಪ್ನವೊಂದನ್ನು ಕಂಡೆ. ಅದರಲ್ಲಿ ಲಕ್ಷ್ಮಣನು ಇಂದ್ರಜಿತನನ್ನು ಕೊಂದನು. ರಾಮನು ರಾವಣನನ್ನು ವಧಿಸಿದನು. ಪೃಥ್ವಿಯ ಮೇಲೆ ರಾಮರಾಜ್ಯ ಪ್ರಸ್ಥಾಪಿತವಾಯಿತು. ಇದು ಸ್ವಪ್ನವಲ್ಲ. ಮುಂದೆ ಆಗುವ ಘಟನೆಗಳ ಮುನ್ಸೂಚನೆ. ಆದ್ದರಿಂದ ನೀನೇ ಶ್ರೀರಾಮನ ಕಡೆಗೆ ಹೋಗು. ಹಾಗೂ ಪತಿಶಿರವನ್ನು ಬೇಡು).

**ಶ್ಲೋಕ –**

ಆ ಮಯಜಾ ಎಂದಳು ಶೇಷಕನ್ಯಾ ।
ರಾಮ ನರನಲ್ಲ ಮಹಾವಿಷ್ಣು ಅವತಾರ ಪೂರ್ಣ ।
ಈ ಮೌಳಿ ರಾಯಗೆ ಬರುವದು ಎಂದೂ ಶೂನ್ಯ ।
ಸ್ವಾಮಿಗೆ ಪೋಗಿ ಶರಣೊಕ್ಕರೆ ಅಧಿಮಾನ್ಯ ೧೭

**ಪದ –**

ಇಂದುಮುಖಿ, ಸಂಗಡೆ ರಾಮನ ರಾವಣ ।
ಎಂದಿಗೂ ಜಯಿಸುವದಿಲ್ಲ ಕದನದಿ ದಶಾನನ ಪ

ಸೀತಾಪತಿ ಮನುಜನಲ್ಲ ವಿಷ್ಣುವಿನವತಾರ ।
ಆತನಿಂದ ಹೋಗುವನು ಕೆಟ್ಟು ದಶಶಿರ ೧

ಶಿರ ಈತನಿಂದ ಬರುವದಿಲ್ಲ ಸತ್ಯವಿದು ।
ನಿರಾಹಾರ ಮಾಡಿ ದಣಿದೆ ಬಹಳ ಒದಗದು ೨

ಶಂಕರ ಸಖಗೆ ಸ್ವತಃ ನೀನು ಹೋಗು ಶಿರ– ।
ಪಂಕಜ ಬೇಡುದರಿಂ ಸ್ವಧರ್ಮವಾಗುದು ದ್ವಾರ ೩

**ಸವಾಯಿ –**

ರಘುಪತಿ ಸಾಕ್ಷಾತ್ ಪರಬ್ರಹ್ಮನೆಂದರಿ ।
ಜಗಕೆ ಜನನೀ–ಜನಕ ಆದ ಹರಿ ।
ಅಗತಿಗಳಿಗೆ ಸುಗತಿಯನೀವನು ದೊರಿ
ಭಗವಾನ ಸಹೋದರ ಪರನಾರಿ ।
ನಗೆ ಮೊಗಳೆ ನಿನ್ನ ನಾಡಿಸ್ಥಿತಿಯ ಪರಿ ।
ಮುಕುತಿಯ ಸಹ ತಲೆ ಕೊಡುವ ಮುರಾರಿ ।
ಅಘಮನಸುಳ್ಳವರಿಲ್ಲಲ್ಲಿ ಶಿರಿ ।
ನಗರೊಡೆಯಗ ಹೇಳಿ ನಡೆ, ಹರಿ ಏರಿ ೧೮

**ಪದ –**

ರಾಮಚಂದ್ರ ಪರಬ್ರಹ್ಮನೆ ಸೋಮಾನನೆ ಪ

ಅನಾಥ ಸನಾಥನು । ಜನನಿ ಜಗಕೆ ಜನಕನು ೧

ಅರಸಿಯ ಏಕವ್ರತನು । ಪರನಾರಿ ಸೋದರನು ೨

ಭಕ್ತಿ ನೋಡಿ ತಲೆಯನು । ಮುಕ್ತಿ ಸಹ ಕೊಡುವನು ೩

ರಘುಪತಿ ಸಭೆಯಲ್ಲಿ । ಅಘಮನಸರಿಲ್ಲಲ್ಲಿ ೪

ಕಿಂಕರರಿಗೆ ದಾತನು । ಶಂಕರನ ಪ್ರಿಯನು ೫

(ಸುಲೋಚನೆಯು, 'ನಾನು ರಾಮನ ಬಳಿಗೆ ಪತಿಯ ಶಿರವನ್ನು ತರಲು

ಹೋಗುತ್ತೇನೆ' ಎಂದು ಅನ್ನಲಾಗಿ, 'ನೀನು ಹೋಗಬೇಡ. ನಾನು ರಾಮನ ಪತ್ನಿಯಾದ ಸೀತೆಯನ್ನು ಅಪಹರಿಸಿದ್ದೇನೆ. ನೀನು ಹೋದರೆ ನಿನ್ನ ಹರಣವಾದೀತು' ಎಂದು ರಾವಣನು ಎಚ್ಚರಿಸಿದನು. ಇದಕ್ಕೆ ಸುಲೋಚನೆಯು ಕೊಟ್ಟ ಉತ್ತರ).

**ಶ್ಲೋಕ –**

ಮಾವಾ, ಅವನು ಪಾಪಿಯೆಂಥ ಪರಸ್ತ್ರೀಯರಿಗೆ ಪ್ರವರ್ತಿಸುವ ।
ದೇವರೆಲ್ಲರು ಕ್ಷೋಭಿಸುವರು ಪತಿವ್ರತಾಶೆವಿಡುವನ ।
ಜೀವನ ಎನ್ನ ಅರಿರಾಯನ ಎದುರಿಲಿ ಮಾಡುವೆನು ತ್ಯಾಗವನು।
ಈವುದಾಜ್ಞೆ ತ್ವರಿತ ಕೂಡಿ ಪತಿಯ ಪಡೆವೆನು ಸಾಯೋಜ್ಯವ ೨೦

**ಪದ –**

ಮಾವಾ, ಪರಸತಿಯರಿಗೆ ಬಲಾತ್ಕಾರ ।
ಪ್ರವರ್ತಿಸುವಂಥ ಪಾಪಿನರ ।
ಅವನು ಪತಿವ್ರತೆಯರಾಶೆ ಬಿಡದಿರೆ ।
ಆ ವೇದ ಪುರುಷಾರ್ಥ ವಿಮುಖ ನಿರ್ಧಾರ ಪ

ಇಂದ್ರ ಸತಿಗಾಗಿ ಸಹಸ್ರಭಗನಾದ ।
ಚಂದ್ರ ಕಳೆಗುಂದಿ ಕಲಂಕನಾದ ।
ಸುಂದೋಪಸುಂದರು ಹೋದರಸುವಿಂದ ।
ಛಂದ ಭಂಗರಾದರು ನಾರಿಯರಿಂದ ೧

ಹಿರಣ್ಯನಯನ ಭೂಮಿಯಿಂದಳಿದನು ।
ಹರಿಸುತ ರುಮೆಯಿಂದ ಕೆಟ್ಟ್ಹೋದನು ।
ಶರ ಹಾಕಿ ಉದರದಿ ಎನ್ನ ಪ್ರಾಣವ–
ರಿರಾಯನ ಮುಂದೆ ತ್ಯಾಗ ಮಾಡುವೆನು ೨

ಶಿರವ ಬೇಡಿಕೊಂಬೆ ರಾಘವನ ಕೈಯ ।
ಪುರುಷನೊಡನೆ ಪೋಗುವೆ ಸತಿಯ ।

ವರ ಸಾಯೋಜ್ಯದ ಪಡೆವೆ ಸದ್ಗತಿಯ ।
ಬೆರೆವೆ ಶಂಕರನೊಳು ಜಲಗಲ್ಲ ನ್ಯಾಯ ೩

(ಸುಲೋಚನೆಯು ರಾಮನ ಕಡೆಗೆ ನಡೆದಳು. ಅವಳ ರಕ್ಷಣೆಗಾಗಿ ಅವಳ ಸೈನ್ಯವು ಜೊತೆಗಿತ್ತು. ಸುವೇಲ ಪರ್ವತದ ಹತ್ತಿರ ಬಂದೊಡನೆ, ವಾನರ ಸೈನ್ಯವು ಮಾಡುವ ರಾಮನ ಜಯ ಜಯಕಾರ ಕೇಳಿದಳು. ದೂರಿನಿಂದ ರಾಮನ ದರ್ಶನವಾದ ಕೂಡಲೆ ಕುದುರೆಯಿಂದ ಕೆಳಗಿಳಿದು ಪಾದಚಾರಿಯಾಗಿಯೇ ಅತಿ ಭಕ್ತಿಯಿಂದ ರಾಮನಲ್ಲಿಗೆ ನಡೆದಳು).

**ಚಾಮರಿ –**

ಸುವೇಲಾಚದಲ್ಲಿ ರಾಮ । ರವಿಕೋಟಿ
ತೇಜಸೋಮ । ಶಿವಪ್ರಿಯಕರ ನಾಮ ।
ಸಹೋದರ ಹನುಮ ರವಿಜ ರಾವಣನ್ನ ತಮ್ಮ–
ನವರ ಕೂಡ ಕುಳಿತ ರಾಮ । ಗೌರವದಿಂದ
ಎರಗಿ ಅಮ್ಮ । ಭವ ಹರಿಸುವದು ಮಾ ೧

**ಪದ –**

ಸುವೇಲಾಚಲದಲಿ । ರವಿಕೋಟಿ ತೇಜದಲಿ ।
ಘವ ಘವಿಸುವ ಮೂರ್ತಿಯ ಕಂಡಳು ।
ಭವಹರ ರಾಮನಲಿ ಪ

ಮುನಿಗಳ ಹೃದಯವಾಸ । ಸನಕಾದಿ ಸಾಧಕ ಪೋಷ ।
ವನಜ ಭವಾಂಡಗಳಗಣಿತನೊಳಕೊಂಡು ।
ಚಿನುಮಯ ಚಿದ್ವಿಲಾಸ । ಇನಸಖಭವಾದಿಕರು ।
ಅನುವರಯದೆ ಮರುಳಹರು । ಘನ ಪರಬ್ರಹ್ಮನು
ಜಗ ಉದ್ಧರಿಸಲು । ಮನುಜ ರೂಪಕೆ ಬರಲು । ನೀಲ
ನಳ ಸತ್ತಿಗೆ ಹಿಡಿದರೆ । ಘಾಳಿಜಂಗದ ಚವರಿ ಹಾಕುತಿರೆ ।

ಬಲದಿ ಭಾಗದಿ ಬಂಧು ಸುಗ್ರೀವರು । ಶ್ರೀಲೋಲನ ಉದವರು ।
ಲಂಕಾಪತಿ ರುಕ್ಷ–। ಮೌಳಿ ಕುಳ್ಳಿರಿತಿರೆ ದಕ್ಷ । ಸ್ಥೂಲಕಾಯದ
ಮಹಾವೀರರು ನಿಂತಿರೆ । ಕಾಲಲಿಟ್ಟು ಲಕ್ಷ ೨

ಅಬ್ಧಿಘೋಷದ ಪರಿಯ ಶಬ್ದ ಜಯ ಜಯ ।
ಅಬ್ಧಿ ತ್ರಿಕೂಟಾಚಲ ಪಿಡಿದಿರೆ ।
ರಾಮಕೃಪಾಬ್ಧಿ ಎಂಬ ಧ್ವನಿಯ । ಅಬ್ಧಿಮಗಳ ಪತಿಯ ।
ಶಬ್ದ ಕೇಳುತಲಿ ದಯಾಬ್ಧಿಗೆರಗಿದಳು ಶಂಕರನ ಸ್ಮರಿಸಿ ।
ಭವಾಬ್ಧಿ ದಾಟಿಸು ರಾಯಾ ೩

**ಪ್ರಥಮ ಅಧ್ಯಾಯ ಬರೆವುದಕೆ ಸಮಾಪ್ತಿ**

# ಶ್ರೀರಾಮಚಂದ್ರ ಚರಿತ್ರಾನುಸಂಧಾನ
# ದ್ವಿತೀಯ ಅಧ್ಯಾಯ

## ಸುಲೋಚನಾ ಅಗ್ನಿಪ್ರವೇಶ :

(ಸುಲೋಚನೆಯು ಬಂದದ್ದನ್ನು ನೋಡಿ ಕಪಿಸೈನ್ಯವು, ಬಂದವಳು ಸೀತಾದೇವಿಯೆಂದು ತಿಳಿದು, ರಾಮನಿಗೆ ಹೇಳಿದರು. ರಾವಣನ ವಧವಾಗದ ಹೊರತು ಸೀತೆ ನಿಮಗೆ ಕಾಣಳು ; ಇದು ನಿಮಗೆ ಹೊಳೆದಿದೆಯೋ ? ಎಂದು ರಾಮನು ಕಪಿ ವೃಂದಕ್ಕೆ ಕೇಳಿದನು).

**ಶ್ಲೋಕ –**

ಹರಿವೀರಾರ್ಹರಾಗ ತಿಳಿ ಹರಿದು ಬಂದು ಹರಿಗೆ ।
ಹರಿಹಯ ವೈರಿಹರಣ ಹರಿಜಾ ತೋಯ ಪುರಿಗೆ ।
ಅರಿದೊರೆ ಧೈರ್ಯ ಹರಿದು ಶಿರಿಯಟ್ಟಿದ ಗಿರಿಗೆ ।
ಗಿರಿಧಾರಿ ಶೌರಿ ! ಧರಣಿ ಕುಮರಿ ಬಂದಳು ಹೊರಗೆ ೧

**ಪದ –**

ಸೀತೆ ಬಂದಳು ನಿಮ್ಮ ।
ಮಾತೆ ಎಮ್ಮ ಹರಿ ಸೀತೆ ಬಂದಳು ಪ

ಜ್ಯೇಷ್ಠ ಪುತ್ರನು ಯುದ್ಧದಿ ಭ್ರಷ್ಟಾಗಿ ಹೋದ ಎಂಬ ಭಯದಿ ।
ಶ್ರೇಷ್ಠ ಸೀತೆಯ ಬೇಗದಿ ದುಷ್ಟನಟ್ಟಿದ ಹರಿ ೧

ಇಂದ್ರಜಿತ ಹೋದ ಕೆಟ್ಟು ಇಂದ್ರಿಯಲ್ಲಿ ಭಯ ತೊಟ್ಟು ।
ಚಂದ್ರಮುಖಿಗೆ ರಟ್ಟು ಇಂದ್ರವಧ್ಯ ಕೊಟ್ಟು ೨

ಕೇಳಿ ಶಂಕರಪ್ರಿಯನು ಖುಲಾಸಾಗಿದೇನು ನಿಮಗಿನ್ನು ।
ಆಲಿಗೆ ತೋರಳು ಏನೂ ಶ್ರೀಲೋಲ ಎಂದನು ॥೩॥೧॥

(ರಾಮನ ಕಡೆಗೆ ನಡೆದಿರುವ ಸುಲೋಚನೆಯನ್ನು ಕಂಡು ಕಪಿ ವೀರರು, ಪರಸ್ತ್ರೀಯರನ್ನು ನೋಡಬಾರದೆಂದು ಅಧೋಮುಖರಾದರು. ಎದುರಿಗೆ ಬರುತ್ತಿರುವ ಸುಲೋಚನೆಯನ್ನು ನೋಡಿ, ರಾಮನು ಇವಳು ಯಾರಿರ ಬಹುದೆಂದು ವಿಭೀಷಣನ ಕಡೆಗೆ ನೋಡಿದನು. ವಿಭೀಷಣನು ಸುಲೋಚನೆಯನ್ನು ಕಂಡೊಡನೆ ಕಣ್ಣೀರು ಸುರಿಸಿದನು. ಸುಲೋಚನೆಯು ವಿಭೀಷಣನ ಸೊಸೆಯಲ್ಲವೇ ? 'ಇವಳು ಸುಲೋಚನೆ. ಇಂದ್ರಜಿತನ ಕುಲವಧು ; ಯಾವದೋ ಕಾರ್ಯಸಿದ್ಧಿಗಾಗಿ ನಿನ್ನ ಬಳಿಗೆ ಬಂದಿದ್ದಾಳೆ', ಎಂದು ಉತ್ತರವಿತ್ತನು. ಸುಲೋಚನೆಯು ರಾಮನಿಗೆ ಸಾಷ್ಟಾಂಗ ಪ್ರಣಿಪಾತವನ್ನು ಮಾಡಿದಳು. ನಿನ್ನ ದರ್ಶನ ಮಾತ್ರದಿಂದ ನಾನು ಪರಬ್ರಹ್ಮನೊಡನೆ ಐಕ್ಯಳಾದೆ. ಆಚಾರ ಪ್ರತಿಪಾಲನಕ್ಕಾಗಿ ಪತಿ ಸಮವೇತ ನನ್ನ ದೇಹದ ಹೋಮವಾಗಬೇಕು. ನನ್ನ ಪತಿಯ ಶಿರಕ್ಕಾಗಿ ನಾನು ನಿನ್ನಲ್ಲಿಗೆ ಬಂದಿರುವೆ. ಪತಿ ಶಿರವನ್ನು ಕೊಟ್ಟು ಅನುಗ್ರಹಿಸು ಎಂದು ಪ್ರಾರ್ಥಿಸಿದಳು. ಅವನ ಪಾದಕಮಲ ಸ್ಪರ್ಶಿಸಿದಳು).

**ಶ್ಲೋಕ –**

ರಾಮ ರಮಾಪತಿ ಪದಸೇವೆಯೆಂದು ।
ಪ್ರೇಮುಳ್ಳ ಭಕ್ತರೆಡೆ ನಡೆಗಾಲ ಬಂದು ।
ಆ ಮಯಜಾಸೊಸೆ ದಣಿವಿಕಿ ಹೋಹಲೆಂದು ।
ರೋಮಾಂಚವೆದ್ದು ಸುಖದಿಂ ಪಿಡಿದೊತ್ತಲಂದು ॥೧॥೩॥

**ಪದ –**

ಶ್ರಮ ಹರಣಾರ್ಥವಾಗುದಕೆ ಪದ –
ಕಮಲ ಒತ್ತಿದಳು ಕರಗಳಿಂದ ಪ

ಲವಣಾಸುರನ ಭರದಿಂದಲಿ ಚರಣಿಂದ
ಬವರದಿ ಮುಡಿ ಮಾಡಿದ ಶ್ರಮವು ।

ಭುವನ ಪತಿಯಾಗಿಹ ಬಲಿರಾಯನ ಶಿರಸವ
ಕಿಟ್ಟೊತ್ತಿಸುತಲಿ ಶ್ರಮವು । ಗವ (ಗೌ) ತಮ
ಸತಿಶಾಪದಿ ಶಿಲೆಯಾದಳ ಭವ ಉದ್ಧರಣ
ಮಾಡಿದ ಶ್ರಮವು । ಸ್ತವಿಸಿದ ಗಜರಾಜನಿಗೆ
ಗರುಡನ ಬಿಟ್ಟು ಲವಲವಿಕೆಯಲಿ ನಡೆದ ಶ್ರಮವು ೧

ಬಂಧು ಸುಮಿತ್ರನ ಪದ ಮೆಟ್ಟಿ ತಾಲ –
ವೃಂದ ಭೇದಿಸಿ ಶ್ರಮಿಸಿದ ಪಾದ ।
ದುಂದುಭಿ ತಲೆ ದ್ವಾದಶಯೋಜನೆ ನಖ–
ದಿಂದ ಗಗನಕ್ಹಾರಿಸಿ ನೊಂದ ।
ಅಂದು ಕನಕ ಮೃಗಕತಿ ಆದರ ಬೆ–
ನ್ನಿಂದ ತಿರುಗಿ ತಿರುಗಿ ಬಂದ ।
ಒಂದು ಗಳಿಗೆ ತೆರವಿಲ್ಲದೆ ಮುನಿ ಹೃ–
ದ್ಮಂದಿರದೊಳು ಸಿಕ್ಕಿ ದಣಿದ ೨

ರುದ್ರಜ ಮುನಿ ಸನಕಾದಿಗಳಿಂಗೆ
ದೃಗ್ ದೃಷ್ಟಿಗೆಯಾದ ಪಾದ ।
ಮದ್ದೃಷ್ಟಿಗೆ ಗೋಚರವಾದವು
ಸಮುದ್ರಜಲ ಪ್ರಕ್ಷಾಲಿಸುವ ಪಾದ ।
ಮದ್ರಮಣನ ತಲೆಗೋಸುಗ ಬಂದು
ಜಗದ್ರೂಪನ ಕಂಡೆನು ಪಾದ ।
ಅದ್ರಿಜಾಪತಿ ಶಂಕರನ ಸರ್ವದಾ ।
ಹೃದ್ರಹಿವಾಸವಾದಂಥ ಪಾದ ॥೩॥೩॥

**ಶ್ಲೋಕ –**

ಅನಂತನ ಪಾದವ ಕಂಡು ಎನ್ನ ।
ಅನಂತ ಜನ್ಮ–ಅವಸಾನ ಶೂನ್ಯ ।

ಅನಂತ ಭಕ್ತಾಶ್ರಯ ಕಲ್ಪವೃಕ್ಷ ।
ಅನಂತಜಾ ಮೂಲದಲಿಟ್ಟು ಲಕ್ಷ ॥೧॥೪॥

**ಪದ –**

ಇಂದು ಚರಣ ಕಂಡೆನ್ನ ಭವ ಬಂಧ ಹರಣ ಪ

ಅಂದು ಬೆಳೆದು ಬ್ರಹ್ಮಾಂಡನಖದಿಂದ ಒಡೆದು ।
ಮಂದಾಕಿನಿ ತ್ರಿಜಗಕ್ಕೆ ಪಾವನೆ ಪಡೆದಂಥ ॥
ಇಂದುಧರನ ಹೃತ್ಪದ್ಮದಿ ವಾಸಮಾಡಿದಂಥ ।
ಸಿಂಧುಸುತೆಯ ಕೈಯಿಂದ ಸೇವೆಯನು ಕೊಂಬಂಥ ॥
ಕಂದಜ ಇಂದ್ರಾದಿದೇವ ಋಷಿ ಕಾಣದಂಥ ೧

ಕಂಜಸಂಭವಸುತೆಯ ಶಾಪ ಭಂಜ ಮಾಡುವ ।
ಕಂಜ ಸಖ ಕೋಟಿ ತೇಜಃ ಪುಂಜ ನಖವುಳ್ಳಂಥ ॥
ಜಂಜಡ ಜಗದ ಕಾಣುವಾಕ್ಷಣದಿ ಅಳಿವಂಥ ।
ಮಂಜುಳ ಮಾಮರದ ಎಳೆ ತಳಿರ ವರ್ಣದಂಥ ।
ಅಜನಯ್ಯನ ಪ್ರೀತಿಂದ ವಂದನೆಗೊಂಬುವಂಥ ೨

ರಾಮಚಂದ್ರನ ಕಂಡು ಪದ ತಾಮರಸದ ।
ಭೂಮಿಂದ ಮುಂದಕ್ಕೆ ಬಾಹೋರಣ ನಿಂತಿತಲ್ಲ ।
ನಾಮರೂಪದೇಹಕ್ಕೆ ಹೊರತಾಗಿ ನಿಂತೆನಲ್ಲ ।
ಆ ಮಹಾ ಮಹಿಮುಳ್ಳ ಪದಗೋಚರವಾದವಲ್ಲ ।
ಸ್ವಾಮಿ ಶಂಕರ ಪ್ರಿಯನ್ನ ನೋಡಿ ಧನ್ಯಳಾದೆನಲ್ಲ ॥೩॥೪॥

**ಶ್ಲೋಕ –**

ನಿನ್ನ ಮಹಿಮಾರ್ಣವ ಶ್ರುತಿ ವರ್ಣಿಸಿ ।
ತನ್ನ ತಾ ಕರಗಿ ಹೋಯಿತು ಮೋಹಿಸಿ ।

ಪನ್ನಗೇಂದ್ರ ವಿಧಿ ಸಹ ಬೆರಗಾಗಲು ।
ಎನ್ನ ಬುದ್ಧಿಗೆ ನಿಲುಕದು ಪೊಗಳಲು ॥೧॥೬॥

**ಪದ –**

ನಿನ್ನ ಮಹಿಮಾಂಬುಧಿ ವರ್ಣಿಸಲಿಕ್ಕೆ
ಎನ್ನಳವೆ, ದಯಾಬ್ಧಿ ।
ಉನ್ನತ ಉಚಂಬಳಿಸಿ ಆದ ಹರುಷಾಬ್ಧಿ ।
ಇನ್ನುಸುರುದೇನಿಲ್ಲದೀ ಬುದ್ಧಿ ಪ

ಶ್ರುತಿಗಳು ಸ್ತವಿಸಿ ನಿನ್ನ ನೇತಿಯೆಂದು ।
ಪಥವು ಕಾಣದೆ ಮೌನ ।
ಚತುರಾಸ್ಯ ಬಹುಕಾಲ ವರ ಸೇವ್ಯ ಚರಣ ।
ಮತಿ ಮಂದಾಯಿತು ಆತನ ಖೂನ ೧

ಸಾವಿರ ವದನದಿಂದ ಸ್ತವಿಸುವೆನೆಂದು ।
ಹಾವಿನ ಪತಿ ಗರ್ವಿಂದ ।
ಆ ಒಂದೊಂದು ನಾಲಿಗೆರಡಾಗಿ ಲಜ್ಜಿಂದ ।
ದೇವಗ್ಹಾಸಿಗೆಗೆ ಸಿಕ್ಕಿದ ಬೆನ್ನಿಂದ ೨

ಇಂತು ನಿನ್ನ ಮಹಿಮೆ ವರ್ಣಿಸುವಡೆ ।
ಅಂತವಿಲ್ಲವು ನೇಮಿ (ನೆಹಮಿ) ।
ಕಂತುಜನಕನ ನಾನು ಏನಿತೆ ಅಂತರ್ಯಾಮಿ ।
ಶಾಂತ ಶಂಕರನ ಪ್ರೇಮಿ ಸ್ವಾಮಿ ॥೩॥೬॥

**ಶ್ಲೋಕ –**

ರಾಮ ವಿಕ್ರಮ ಭೀಮ ಕೋಮಲ ವಪು ಶ್ಯಾಮ
ಸುರೇಂದ್ರಾರ್ಚಿತ ।

ಧಾಮ ಭಕ್ತಜನೋತ್ತಮಾಶ್ರಯ ಹರಿ
ಶ್ರೀಮಾಧವ ಶಾಶ್ವತ ।
ಸ್ವಾಮಿ ಪ್ರೇಮದಿ ಈವುದು ತಲೆಯನು
ಕಾಮಪಿತ ವಾಮನ ।
ಕಾಮಕಾಮಿತದಾಯಕ ಕರುಣಿಸು
ಸಾಮ್ರಾಜ್ಯ ಸಿಂಹಾಸನ ॥೧॥೭॥

**ಪದ –**

ರಾಮ ಎನ್ನ ಮೇಲೆ । ಪ್ರೇಮ ಮಾಡಿ ಪತಿ ತಲೆ ।
ಸ್ವಾಮಿ ಕೊಡು ಕೃಪೆಯಲಿ ।
ಭೂಮಿಗೆ ಹೊಸದೆನಿಸು ಒಳ್ಳೆ । ಆ ಮೌಳಿ ಹಸ್ತದೊಳೆ ಪ

ಪತಿತ ಪಾವನ ನೀನು । ಪತಿತಳು ನಿನ್ನ ನಾನು ।
ಗತಿರಹಿತರ ಗತಿ ನೀನು । ಗತಿ ವಿರಹಿತಳು ನಾನು ।
ಅತಿಮತಿ ನೀನು । ಮತಿಹೀನಳು ನಾನು ।
ಧೃತಿವಂತ ನೀನು । ಧೃತಿ ಹೊರತು ನಾನು ।
ಸತಿ ಪೂಜ್ಯನು ನೀನು । ಸತಿ ಜಡ ನಾನು ।
ಪಿತನಹೆ ನೀನು । ಸುತೆ ನಿಮ್ಮ ನಾನು ।
ಶ್ರುತಿಗಗೋಚರನು ನೀನು । ಶ್ರುತಿಯರಿಯೆ ನಾನು ೧

ಜಗದೀಶ್ವರನು ನೀನು । ಜಗಜನಕ ಜನಕನು ।
ನಿಗಮಸಾರನು ನೀನು । ಸಗುಣ ಸ್ವರೂಪಕನು ।
ಜಗ ಜೀವನನು । ಜಗ ಪಾವಕನು ।
ಜಗದ್ರೂಪಕನು । ಜಗದ್ವ್ಯಾಪಕನು ।
ಖಗವಾಹನನು । ನಗಧಾರಕನು ।
ಅಗಣಿತ ಗುಣನು । ಜಗದಾತ್ಮಕನು ।
ತ್ರಿಗುಣ ರಹಿತನು । ಅಗಾಧ ಮಹಿಮನು ೨

ರಾಮ ರಘು ನಾಯಕನೆ । ನಮ್ಮ ಭವ ಹಾರಕನೆ ।
ಭೀಮ ರಿಪು ದಾಹಕನೆ । ಕಾಮ ಫಲದಾಯಕನೆ ।
ದಾಮೋದರನೆ । ಶ್ರೀಮಾಧವನೆ । ಸುಮನೋಹರನೆ ।
ಶ್ಯಾಮಸುಂದರನೆ । ಕಾಮಲತರನೆ । ಭೂಮಿಯ ಧರನೆ ।
ಪಾಮರ ಪ್ರಿಯನೆ । ಕಾಮನ ಪಿತನೆ ।
ನಾಮ ತಾರಕನೆ । ರಾಮ ಶಂಕರನೆ ॥೩॥೭॥

(ಸುಲೋಚನೆಯು ತನ್ನ ಪತಿಯ ಶಿರವನ್ನು ಬೇಡಲು ನಿನ್ನ ಬಳಿಗೆ ಬಂದಿದ್ದಾಳೆ, ಎಂದು ಸುಗ್ರೀವನು ರಾಮನಿಗೆ ಹೇಳಿದನು).

**ಶ್ಲೋಕ –**

ಭುವನ ನಾಯಕಗೆಂದನು ಹರಿಪತಿ ।
ಭುವನ ಪೊತ್ತಿಹನಾತ್ಮಜಳೀ ಸತಿ ।
ಚತುರತನವ ನೋಡುವದೇನು ।
ಪತಿ ತಲೆ ನಿಮಗೆ ಬೇಡುವಳು ತಾನು ॥೧॥೮॥

**ಪದ –**

ರಾಮಚಂದ್ರಗೆಂದನಾಗ ಕಪಿರಾಯ ಈಕೆ ।
ಭೂಮಿ ಪೊತ್ತಾತನ ಮಗಳು ನೋಡಯ್ಯಾ ಪ

ಆತನ ಸ್ಫೂರ್ತಿಗೆ ಎಣೆ ಯಾರಯ್ಯ । ನಿಜ
ತಾತನ । ಅವತಾರ ಈಕೆ ಕಾಣಯ್ಯ ೧

ಮಾತಿನ ಚಾತುರ್ಯ ನೋಡುದಿನ್ನೇನು ।
ನಿಮ್ಮ ಪ್ರೀತಿಪಾತ್ರಳಾದ ಮೇಲೆ ಕೊರತೇನು ೨

ಶಂಕರ ಸಖನ ಕರುಣೆ ಪಡುವದು ।
ನಿಷ್ಕಲಂಕ ಚಿತ್ತರಿಗಲ್ಲದೆ ಆಗದು ॥೩॥೮॥

(ಸುಲೋಚನೆಯ ಭಾಟರು ರಾಮನ ಸ್ತುತಿ ಮಾಡಿ, ಇಂದ್ರಜಿತನ ಶಿರವನ್ನು ಅವಳಿಗೆ ಕೊಡಲು ವಿಜ್ಞಾಪಿಸಿ ಪ್ರಣಿಪಾತ ಮಾಡುವರು).

**ವಾರ್ಧಿಕ ಷಟ್ಪದಿ –**

ಆ ಸುಲೋಚನೆಯ ಭಾಟರು ಎದ್ದು ಕೈ ನೆಗಹಿ ।
ಶೇಷಶಯನನ ಕೀರ್ತಿಯಂ ಪೊಗಳಿ ನಲಿದಾಡಿ ।
ಈ ಸಕಲ ಸೃಷ್ಟಿಗೆ ಈಶ್ವರನಹುದು ಸತ್ಯವಿದು
ಭೂಭಾರನಿಳುಹ ಬಂದೆ ॥
ಭಾಸಮಾನದ ಸಮುದ್ರಕೆ ಸೇತು ಕಟ್ಟಿ ವಿ– ।
ಶ್ವೇಶ ಕೀಶರ ಕೈಯೆ ದಾನವರ ಸಂಹರಿಸಿ ।
ದಾಶರಥಿ ನಿನ್ನ ಮಹಿಮೆಯ ನೋಡಿ
ರಿಪುರಾರಿ ಶರಣು ಬಂದಿಹಳು ನಿಮಗೆ ೧

ರಘುಕುಲ ಶಿರಸ ರತ್ನ ನಿನ್ನ ಶೌರ್ಯದ ತೇಜ ।
ಝುಗಝುಗನೆ ಬೆಳಗುತಿದೆ ಲೋಕತ್ರಯದೊಳೆಲ್ಲ ।
ಹಗೆಗಳಿದಿರಾರಿಲ್ಲ ಶಕ್ರಾದಿಗಳೆಲ್ಲ ಏನಾಗಿ ಹೋದರವರು ॥
ಖಗವಾಹನನು ಶರಣು ಬಂದ ಶತ್ರು ಸತಿಗೆ ತಲೆ ।
ಭಗವಂತ ಕೊಟ್ಟು ಮಾಂಗಲ್ಯದಾನವನೆರೆದು ।
ನಗೆಮೊಗಳ ಕಳುಹೆನುತಲಾ ಸುಲೋಚನೆಯ
ಭಾರು ಸ್ತುತಿಸಿ ಮಣಿದರಾಗ ॥

(ಸ್ತುತಿ ಪಾಠಕರ ಸ್ತುತಿಯನ್ನು ನಿಲ್ಲಿಸಿ, 'ನಾವು ಇಂದ್ರಜಿತನ ಶಿರವನ್ನು ತಂದಿದ್ದೇವೆ, ಇದು ನಿನಗೆ ಹೇಗೆ ಗೊತ್ತಾಯಿತು', ಎಂದು ನೈಋತ್ಯನಾಥನು ಸುಲೋಚನೆಗೆ ಕೇಳುತ್ತಾನೆ. 'ನನ್ನ ಪತಿಯ ಹಸ್ತವು ಬಂದು ಎಲ್ಲ ವೃತ್ತಾಂತವನ್ನು ಬರೆದು ತೋರಿಸಿತು', ಎಂದು ಹೇಳಿ ಸುಲೋಚನೆಯು ಆ ಹಸ್ತ ಬರೆದ

ಪತ್ರವನ್ನು ಕೊಡುತ್ತಾಳೆ. ಇದನ್ನು ನೋಡಿ ರಾಮನಿಗೆ ಆಶ್ಚರ್ಯವಾಗುತ್ತದೆ. ಆದರೆ, ಸುಲೋಚನೆಯು ಕೊಟ್ಟ ಉತ್ತರದ ಮೇಲೆ ವಿಶ್ವಾಸವಿಡುವದು ಸಾಧ್ಯವಿಲ್ಲ. ಮೃತ ಮನುಷ್ಯನ ಕರವು ಇವಳ ಕಡೆಗೆ ಬಂದು ಪತ್ರ ಬರೆಯುತ್ತದೆ, ಇದೆಲ್ಲ ಸುಳ್ಳು. ಇಂಥ ಘಟನೆ ಪ್ರತ್ಯಕ್ಷ, ಅನುಮಾನ, ಶಬ್ದ ಈ ಎಲ್ಲ ಪ್ರಮಾಣಗಳ ವಿರುದ್ಧವಿದೆ. ಈ ಚಮತ್ಕಾರ ನಿಜವಿದ್ದರೆ, ಇವಳು ಇನ್ನೊಂದು ಚಮತ್ಕಾರ ಮಾಡಿ ತೋರಿಸಲಿ. ತನ್ನ ಪತಿಯ ಶಿರಕ್ಕೆ ಹಾಸ್ಯ ತಂದು ತೋರಿಸಿದರೆ ಇವಳಾಡಿದ್ದನ್ನು ನಂಬುವೆವು, ಎಂದು ದೇವತೆಗಳು ಅಭಿಪ್ರಾಯಪಡುತ್ತಾರೆ).

**ಶ್ಲೋಕ –**

ದ್ಯುತ್ಪತಿ ಮೊದಲಾಗೆಲ್ಲರು ನೆರೆದು ।
ಗುಪ್ತದಿ ಸ್ಥಿತಿಲಯಕರ್ತನ ಕೂಡೆ ।
ತತ್ಪರದಿಂ ಕರ ಬಂದುದು ಹುಸಿ, ಸಾ–
ಕ್ಷಾತ್ಪರಮೇಶ್ವರ ನೀನೆ ಬಲ್ಲೆ ॥೧೯॥

**ಪದ –**

ಮಾರಾರಿಮಿತ್ರಗೆಂದರು ರಘುವೀರ ।
ನಾರಿಯಡಿಗೆ ಹ್ಯಾಗೆ ಬಂದಿತು ಕರ ಪ

ಎಲ್ಲಿ ಕೋಲಾಹಲಾ, ಎಲ್ಲಿ ನಿಕುಂಭಿಲಾ ।
ಎಲ್ಲಿಂದ ಹಾರಿ ಬಂತು ಕರ ಕಮಲಾ ।
ಸುಳ್ಳೆಂಬು ಹಾಂಗೆ ತೋರುದು ನಮಗೆಲ್ಲ ।
ಅಲ್ಲಿಂದಿಲ್ಲಿಗೆ ಬಂದುದುಂಟೆ ಹೇಳಾ ೧

ದುರ್ಜಯ ಕರ ಕಡಿದು ನಿರ್ಜೀವಾಗೆದ್ದು ।
ಗರ್ಜನೆ ಮಾಡುತ್ತ ಬಂತೆಂಬುದು ।
ನಿರ್ಜರ–ಪತಿ–ಶತ್ರು–ಸತಿಯಡಿಗೆ ಇದು ।
ವರ್ಜನೆ ಮಾತೆಂದು ತೋರುವದು ೨

ಆದರೆ ರಘುಪತಿ ಇದರ ಪ್ರತೀತಿ ।
ಭೂಧರ-ಸುತೆ ಮುಖದೊಳಗತಿ ।
ಶ್ರೀಧರ ಹಾಸ್ಯವ ತೋರಲು ಈ ಸತಿಗೆ ।
ಆಧಾರಿ ಶಂಕರ ಉಮಾಪತಿ ॥೩॥೯॥

(ಸುಲೋಚನೆಯು ತನ್ನ ಪಾತಿವ್ರತ್ಯದ ಬಲದಿಂದ ಶಿರಕ್ಕೆ ನಿಶ್ಚಿತವಾಗಿ ಹಾಸ್ಯ ತರಿಸುವಳು, ಎಂದು ರಾಮನ ಉತ್ತರ).

**ಶ್ಲೋಕ –**

ಶಿವನ ಭಕ್ತರು ಎನ್ನಯ ಭಕ್ತರು ।
ಶಿವನ ಮಿತ್ರರೆ ಎನ್ನಯ ಮಿತ್ರರು ।
ಅವರಿಗೇನರಿದು ಮಾಡುವ ಕಾರ್ಯವು ।
ಅವರ ಕಾರಣಕೆ ನಾನೆ ಸಾಹ್ಯನು ॥೧॥೧೦॥

**ಪದ –**

ಕೇಳಿ ರಾಮನೆಂದನಾಗಳೆ ಆಲಿಸಿ ನೀವೆಲ್ಲರಿಗೆ ।
ಭಾಳ ದೊಡ್ಡಿಸ್ತನವಲ್ಲವೇನಿದು ಮೌಳಿನಗಿಸುವದು ಪ

ಪತಿವ್ರತಾಸತ್ತ್ವದಿಂದ ಪತಿಹಸ್ತ ತಾನೆ ಬಂದು ।
ಹಿತಪತ್ರ ಬರೆದು ಕೊಟ್ಟುದು ಅತಿಚಿತ್ರಲ್ಲಿದು ೧

ಹ್ಯಾಗೆ ಪತಿತಲೆಯನು ಈಗ ನಗಿಸುವಳು ತಾನು ।
ಆಗುದೆಂಬುದೇನಾಶ್ಚರ್ಯ । ಆಗುದು ಕಾರ್ಯ ೨

ಹರಿಶಂಕರೊಬ್ಬರೆಂದು ಅರಿತವರಿಗೇನಾಗದು ।
ಶಿರಕೆ ಹಾಸ್ಯವ ತೋರುವದು ಅರಿದಿಲ್ಲ ನೀವು ॥೩॥೧೦॥

(ವೃಷಭನು ಇಂದ್ರಜಿತನ ಶಿರವನ್ನು ತಂದು ಸುಲೋಚನೆಯ ಮುಂದಿಟ್ಟನು. ಇಂದ್ರಜಿತನ ಮೀಶೆ, ಗಡ್ಡ, ಜಟೆ ಎಲ್ಲ ಅಸ್ತವ್ಯಸ್ತವಾಗಿದ್ದವು. ನಾಲಿಗೆಯು ಗದ್ದದವರೆಗೆ ಚಾಚಿತ್ತು. ಎಡಗಣ್ಣು ತೆರೆದಿತ್ತು. ಬಲಗಣ್ಣು ಮುಚ್ಚಿತ್ತು. ಸುಲೋಚನೆಯು ಆ ಶಿರವನ್ನೆತ್ತಿ ಭಕ್ತಿಯಿಂದ ಹಣೆಗೆ ಹಚ್ಚಿ, ಹೃದಯಕ್ಕೆ ಆಲಿಂಗಿಸಿ ಅಳಲಾರಂಭಿಸಿದಳು. ಶಿರವನ್ನು ಸ್ವಚ್ಛವಾಗಿ ಒರಿಸಿ ಆಸನದ ಮೇಲಿಟ್ಟು ನುಡಿಯುತ್ತಾಳೇ 'ನನ್ನ ಪಾತಿವ್ರತ್ಯದ ಸತ್ಯತೆಯನ್ನು ಮುಖಕ್ಕೆ ನಗೆ ತಂದು ಸಿದ್ಧ ಮಾಡಿ ತೋರಿಸು'. ಶಿರವು ನಗದೇ ಇರಲು, ಮರಳಿ ಸಂಬೋಧಿಸುತ್ತಾಳೆ – 'ಮೌನವೇಕೆ ? ನನ್ನ ಮೇಲೆ ಕೋಪಿಸಿದಿರಾ ? ಲಕ್ಷ್ಮಣನು ಶಿರಚ್ಛೇದ ಮಾಡಿದ ಯಾತನೆಯ ಮೂಲಕ ಶಬ್ದ ಕುಂಠಿತವಾಯಿತೇ ? ಇಲ್ಲವೆ ಹೋಮವು ಅಪೂರ್ಣವಾಗಿ ವಿಜಯಶ್ರೀ ವಿಮುಖಳಾದಳೆಂದು ಮೌನವೋ ? ಅಥವಾ ಲಕ್ಷ್ಮಣನ ಕೈಯಿಂದ ಮೃತ್ಯು ಬಂದು ಸಾಯೋಜ್ಯ ಸುಖ ಪ್ರಾಪ್ತವಾಯಿತೆಂದು ಸಹಜ ಮೌನ ಬಂದಿತೇ ?)'.

**ಶ್ಲೋಕ –**

ಸಾಯೋಜ್ಯಪ್ರಾಪ್ತಿ ಶ್ರೀರಾಮನಿಂದ ।
ಆಯಿತು ಎಂಬೀ ಆನಂದದಿಂದ ।
ಬಾಯಿಗೆ ಮೌನ ಬಂದು ಮುದ್ರೆ ಬಿತ್ತು ।
ನಾ ಏನು ಬಲ್ಲೆ ವಿಪರೀತ ಇಂತು ॥೧॥೧೨॥

**ಪದ –**

ರಾಮನ ದರುಶನ ಮುಕ್ತಿ । ಶ್ರೀ ರಾಮನ ಕಾಂಬುದೆ ಮುಕ್ತಿ ।
ರಾಮ ತಾನಾಗುವದೇ ಮುಕ್ತಿ । ಈ ರಾಮ–
ನೊಳಗೈಕ್ಯವೇ ಮುಕ್ತಿ ಪ

ಕ್ಷೀರಾಬ್ಧಿಯ ತರಂಗವು । ಆ–, । ಕಾರದಿ ಇರಲಿಕ್ಕೆ ಭಂಗಾ ।
ಕ್ಷೀರಾಬ್ಧಿಗೆ ವಿಯೋಗಾ । ತೋರುವದೆ ಐಕ್ಯದ ಭೋಗಾ ೧

ತನುವಿರೆ ಜೀವನ್ಮುಕ್ತ ಬ್ರಹ್ಮ । ಘನ ಸಾಯೋಜ್ಯಕೆ ಕರ್ತಾ ।
ತನು ಪಾತಾದ ಮೇಲೆ ತಾ ಮಾ – ।
ತೇನು ಮೌನವೇ ಘನಸತ್ಯ ೨

ರಾಮಶಂಕರರೆರಡಿಲ್ಲ । ಶ್ರೀರಾಮ ಜಗದ್ಗುರುವೆಲ್ಲ ।
ರಾಮನೊಳಗೆ ದ್ವೈತಿಲ್ಲ । ನನ್ನೀ ಮಾತಿಗೆ ನುಡಿ ಇಲ್ಲ ॥೩॥೧೨॥

**ಶ್ಲೋಕ –**

ಇಂದಿಗೆ ರಾಮನ ಸಭೆಯೊಳು ಸುಗ್ರೀವಾದಿ ।
ವೃಂದೆಲ್ಲ ನೆರೆದು ಕುಂತಿದೆ ಜಾಗ್ರತದಿ ।
ವೃಂದಾರಕ ಸ್ತೋಮವು ಸರ್ವ ಕೂಡಿ ।
ಬಂದಾರೆ ಎನ್ನಯ ಪರೀಕ್ಷಿಸಲೆಂದು ಓಡಿ ॥೧॥೧೩॥

**ಪದ –**

ರಾಮನ ಸಭೆಯೊಳಗೆ ।
ಇಂದ್ರಾಮರ ಸ್ತೋಮವೆಲ್ಲ ನೆರೆದು ।
ಭೂಮಿಯಂಬರದೊಳು ತುಂಬಿದೆ ತೆರಪಿಲ್ಲ ।
ಈ ಮಹಾಕಪಿ ವೀರರು ಪ

ಇವರೆಲ್ಲರೊಂದುಗೂಡಿ । ಪತಿವ್ರತಕೆ
ವ್ರಣ ಹಚ್ಚುವರೈಯ್ಯ ।
ಶಿವ ಶಿವ ನಸು ನಗು ಮೊಗದೊಳುದಿಸದಿರೆ ।
ಠವುಳಿಕಾರ್ತಿ ಎಂಬುವರು ೧

ಮಾನಭಂಗಕ ಬಂತಿದು ರಾಮನ ಮುಂದೆ ।
ನ್ಯೂನವೆ ಮೇರು ಸಮವೆನಗೆ ಈ ।
ನೀನೆ ಸಾಕ್ಷಿ ಶಿವ, ಶಿವನೆ ನಿನ್ನೊಳಗಿವ ।
ಮೌನವಿದ್ಯಾಕೋ, ದೇವಾ ೨

ಎನ್ನ ಅಭಿಮಾನ ಹಾನಿ ಯಾರಿಗಿದು ।
ಎನಗಲ್ಲ, ನಿನಗೆ ಪ್ರಾಣೇಶ್ವರ ।
ನಿನ್ನ ಕರದಿ ಪತ್ರ ಬರೆದು ಕೊಟ್ಟಂತೆ ನೀ-
ನಿನ್ನು ಹಾಸ್ಯವ ತೋರುದು ೩

ನೂಕುವದು ಲಕ್ಷ್ಮಣನ ಸಮರವೆಂದು ।
ಯಾಕೆ ಸೂಚಿಸಲಿಲ್ಲವೂ ಎನಗೆ ನೀನು ।
ಕಾಕೋದರಾಳಿಪತಿಯ ಕರೆಸಲು ಬಂದು ।
ಕಾಕುತ್ಸನನು ಗೆಲುವಾ ೪

ಕೇಳಿ ನಕ್ಕಿತು ಶಿರಸ ಬಲದ ಕಣ್ಣು
ಥಾಳಾಗಿ ತೆರೆಯು ಕಂಡು ।
ನೀಲಾದಿಕರೆಂದರು ಈಕೆ ಮೀರಿದ ಸತಿ ।
ಪಾಲಕನು ಶಂಕರನು ಈಕಿಗಪ್ಪಾ ॥೫॥೧೩॥

(ಶಿರವು ನಕ್ಕಿತು ಇದರ ಕಾರಣವೇನು ಎಂದು ನೆರೆದ ಸಮೂಹವೆಲ್ಲ ರಾಮನಿಗೆ ಕೇಳುತ್ತಾರೆ. ರಾಮನು ಉತ್ತರಿಸುತ್ತಾನೆ. 'ಸುಲೋಚನೆಯ ತಂದೆ ಅಂದರೆ ಆದಿಶೇಷ. ಲಕ್ಷ್ಮಣನು ಆದಿಶೇಷನ ಅವತಾರ. ಅವನೇ ಅಂದರೆ ಆದಿಶೇಷನೇ ಇಂದ್ರಜಿತನನ್ನು ಕೊಂದನು. ಹೀಗೆ ಶ್ವಶುರನೇ ಅಳಿಯನಿಗೆ ಮೃತ್ಯು ತಂದನು. ಆದ್ದರಿಂದ ಆದಿಶೇಷನು ಇಂದ್ರಜಿತನನ್ನು ಹೇಗೆ ರಕ್ಷಿಸುವನು ? ಮೊದಲೇ ಲಕ್ಷ್ಮಣನನ್ನು ನೋಡಿದ್ದರಿಂದ ಇಂದ್ರಜಿತನ ಎಡಗಣ್ಣು ತೆರೆದದ್ದೇ ಇತ್ತು. ಅವನ ಬಲಗಣ್ಣು ನನ್ನನ್ನು ನೋಡಲು ಪೂರ್ಣ ತೆರೆಯಿತು'. ಇದನ್ನು ಕೇಳಿ ಲಕ್ಷ್ಮಣನು ನಾನೇ ನನ್ನ ಅಳಿಯನನ್ನು ಕೊಂದೆನಲ್ಲಾ. ನಾನೆಂಥ ಪಾಪಿ, ಎಂದು ಶೋಕಾವಿಷ್ಟನಾದನು. ರಾಮನ ಇದಕ್ಕೆ ಉತ್ತರ – 'ಧರ್ಮ ಯುದ್ಧದಲ್ಲಿ ಪಿತಾ, ಪುತ್ರ, ಶ್ವಶುರ, ಅಳಿಯ ಇಂಥ ಬಳಗತನದ ಪ್ರಶ್ನೆಯೇ ಇಲ್ಲ. ನಿನ್ನಿಂದ ಪಾಪ ಘಟಿಸಿಲ್ಲ, ಶೋಕ ಮಾಡಬೇಡ ; ಆದರೂ ನಿನ್ನ ಇಚ್ಛೆಯಿದ್ದರೆ ಇಂದ್ರಜಿತನನ್ನು ಪುನರ್ಜೀವಿತನಾಗಿ ಮಾಡುತ್ತೇನೆ'. ಇದೆಲ್ಲವನ್ನು ಕೇಳಿ ಸುಲೋಚನೆಯು ಆನಂದದಿಂದ ನುಡಿಯುತ್ತಾಳೆ).

**ಶ್ಲೋಕ –**

ಶ್ರೀರಾಮ ನೀನು ಅದ್ವಯಬ್ರಹ್ಮನೆಂದು ।
ಹೋರಾಡಿ ವೇದಾಗಮ ನಿಂತವಂದು ।
ಕಾರುಣ್ಯಸಿಂಧು ಶಕ್ರಾರಿ ಪ್ರಾಣ ।
ನೀ ರಕ್ಷಿಸುವೆನೆಂದರೆ ಆಗದೇನಾ ॥೧॥೧೬॥

**ಪದ –**

ಶೇಷಾತ್ಮಜೆ ಪರಮಾನಂದದಿ ಶ್ರೀರಾಮಗೆರಗಲು ತಾತ ।
ಈ ಸಚರಾಚರವೆಲ್ಲವು ನಿನಗಡುವೆ ವಿಶ್ವಂಭರಿತಾ ಪ

ಏಕಮೇವಾದ್ವಿತೀಯಂ ಬ್ರಹ್ಮನೆಂಬುದು ಶ್ರುತಿ ನಿರ್ಧಾರ ।
ಆ ಕುಮತಿಗಳಾರೋಪಿಸುವರಲ್ಲದೆ ದ್ವೇಷಾದ್ವೇಷ ವಿಕಾರ ೧

ಪತಿಪ್ರಾಣವ ನಾ ಪಡೆಯಲು ನನಗಾಗುವದು ಪುನರಾಗಮನ ।
ಸತಿಪತಿ ನಮ್ಮಿಬ್ಬರ ಕೂಡಿಸಿದರೆ ಕಾಣೆನೊ ಕೀರ್ತಿ ಸಮಾನಾ ೨

ಶ್ರೀ ಶಂಕರ ನೀ ಕರುಣಿಸಿದರೆ ಏನೊಂದಾಗದು ಚರ್ಯಾ ।
ಈ ಸೌಮಿತ್ರಿಯು ಪಿತನಲ್ಲವೇ ಎನ್ನ ಸೌಭಾಗ್ಯವ ಕಾಯಯ್ಯ ೩

(ರಾಮನು ಇಂದ್ರಜಿತನನ್ನು ಪುನರುಜ್ಜೀವನಗೊಳಿಸುವನೆಂದು ಕಪಿವೃಂದವು ಗಾಬರಿಗೊಂಡಿತು. 'ಇಂದ್ರಜಿತನು ಪುನಃ ಜೀವಿಸಿದರೆ ಮಹಾ ಅನರ್ಥವು ಸಂಭವಿಸುವದು. ಆದ್ದರಿಂದ ಪುನರುಜ್ಜೀವನದ ಮಾತು ಬಿಟ್ಟು ಬಿಡು', ಎಂದು ಅವರೆಲ್ಲರು ರಾಮನಿಗೆ ಬಿನ್ನೈಸಿದರು, ಲಕ್ಷ್ಮಣನೂ ಕೂಡ ರಾಮನ ಮುಂದೆ ಇದೇ ವಿಚಾರವನ್ನಿಟ್ಟನು. ಕಪಿ ಸಮೂಹದ ಸಲಹೆಗೆ ರಾಮನು ಅನುಮತಿಯನ್ನಿತ್ತನು. ಆಗ ಸುಗ್ರೀವನು ಸುಲೋಚನೆಗೆ ಪತಿಯ ಶಿರವನ್ನು ತೆಗೆದುಕೊಂಡು ಇಲ್ಲಿಂದ ನಡೆ, ಎಂದು ಆಜ್ಞಾಪಿಸಿದನು. ಪತಿಯು ಜೀವಂತನಾಗುವದಿಲ್ಲವೆಂದು ನಿರಾಶಳಾದ ಸುಲೋಚನೆಯು ವಿಭೀಷಣನಿಗೆ

ಹೇಳುತ್ತಾಳೆ – 'ನಾವು ಈಗ ವಿಷ್ಣು ಸದನಕ್ಕೆ ಹೋಗುವೆವು. ನಿಮ್ಮ ಅಣ್ಣನು ಸೀತಾಹರಣ ಮಾಡಿದನು. ಆ ಪಾಪದ ದುಃಖವನ್ನು ನಾವು ಭೋಗಿಸ ಬೇಕಾಗಿದೆ. ಏನೇ ಇರಲಿ. ನೀವೆಲ್ಲ ಸುಖವಾಗಿರಿ, ಸ್ನೇಹವಿರಲಿ'. ಹೋಗುವ ಮೊದಲು ಸುಲೋಚನೆಯು ರಾಮನಿಗೆ ಒಂದು ಬಿನ್ನಪವನ್ನು ಮಾಡುತ್ತಾಳೆ – ಲಂಕೆಯ ಜನರೇ ನನಗೆ ಅಗ್ನಿ ಕೊಡಬೇಕು. ವಾನರರಲ್ಲ. 'ತಥಾಸ್ತು' ಎಂದು ರಾಮನು ವಚನ ಕೊಡುತ್ತಾನೆ).

**ವಾರ್ಧಿಕ ಷಟ್ಪದಿ –**

ರಾಮಚಂದ್ರನ ನೋಡಿ ಪೂರ್ಣ
ಸುಖದಿಂದಾಗ ರೋಂಮಾಂಚ ಉದಿಸಿ
ಸಾತ್ತ್ವಿಕ ಭಾವ ತಲೆದೋರಿ ।
ಪ್ರೇಮದಿಂ ಬಲಕ್ವಾಕಿ ಬಂದು ರಾಮಗೆ
ಪ್ರಣಿಪಾತಮಂ ಮಾಡಿಕೊಡೆ ॥
ಕೈ ಮುಗಿದು ನಿಂದು ಸಭೆಯೊಳ್ ಸನ್ಮುಖದಲಂದು ।
ರಾಮ ಶ್ರೀರಾಮ ಜಯರಾಮ ಜಯಜಯರಾಮ ।
ಈ ಮನುಜರೂಪದಿಂ ಬಂದ ಕಾರಣವಾಯ್ತು
ಪ್ರತ್ಯಕ್ಷ ದರುಶನವಿದು ೧

ರಾಮ ರಾಘವ, ರಾಕ್ಷಸಾಂತಕ ರಮಾಕಾಂತ
ಶ್ಯಾಮಸುಂದರ. ಪರಾಪರ ರಹಿತ
ಪರಮಾತ್ಮ ಸೂಮನೋಹರ ಸುಧಾಕರ ಸಾಕಾರ
ನಿಜ ಕಲ್ಯಾಣ ಧಾಮ ಪ್ರೇಮ ।
ನಾ ಮಾಡುದೊಂದು ಬಿನ್ನಪವಿದನಾಲಿಸುವದು
ಹೇಮಲಂಕಾ ಜನರು ಬಂದಗ್ನಿಕೊಡುವರೆನೆ
ಸ್ವಾಮಿಯಭಯ ಹಸ್ತ ಶಿರಕ್ಕಿಡಲಾಗ ಮಗುಳೆ
ಚರಣಕೆ ವಂದನಂಗೈದಳು ॥೨॥೪॥

(ಸುಗ್ರೀವನ ಆಜ್ಞೆಯ ಮೇರೆಗೆ ವೇತ್ರಪಾಣಿಗಳು ಎಲ್ಲ ಕಪಿ ಸೈನ್ಯದಲ್ಲಿ ಅಡ್ಡಾಡಿ ಯಾರೂ ಇಂದು ಲಂಕೆಯತ್ತ ಹೋಗಬಾರದೆಂದು ಡಂಗುರ ಸಾರಿದರು).

**ಶ್ಲೋಕ –**

ಶಿರಾರವಿಂದ ಪಿಡಕೊಂಡು ಲಂಕಾ–
ಪುರಿ ಮಾರ್ಗ ಹತ್ತಿ ನಡೆದ್ಹೋಗಲಾಗ ।
ಕರವೆತ್ತಿ ಮುಂದೆ ಬಂದಿ ಜನವೆಲ್ಲ ।
ಪರೇಶನ ಕೀರ್ತಿಯ ಘೋಷ ಸೊಲ್ಲ ॥೧॥೧೮॥

**ಪದ –**

ಭಾಟರು ನಡೆದರು ಪೊಗಳುತ ದಶರಥ
ತನುಜನಾಟವೆ ವಿಚಿತ್ರವೆನುತ ।
ಕೋಟಿ ಪುಣ್ಯ ಒದಗದಿದ್ದರೆ ಪ್ರತ್ಯಕ್ಷವಾಗಿ
ನೋಟಕ್ಕೆ ಗೋಚರಿಸುವನೆ ಪ

ಧನ್ಯೆ ಈ ಸುಲೋಚನಾ ದೇವಿ ರಾಮ
ಚಂದ್ರಗೆ ಅನನ್ಯ ಭಕ್ತಳೆನಿಸಿಕೊಂಡಳು ।
ಮಾನ್ಯಳಂ ಮಾಡಿ ಎಲ್ಲರಿಗೆ ಸಾಯೋಜ್ಯ
ನಿಜ ಪುಣ್ಯ । ಸ್ಥಾನವಿತ್ತನೀಕಿಗೆ ೧

ಈಕೆಯ ಸಂಗ ಸುಸಂಗವಯ್ಯ ಮನದ
ಸರ್ವಕಾಕ ಭಾವಳಿದು ಹೋದವು ।
ಪಾಕಶಾಸನಾದಿ ದೇವರು ಕಾಣದ
ರೂಪ ಈ ಕಣ್ಣಿಗೆ ಗೋಚರಿಸಿತು ೨

ತಲೆ ಸಹಿತ ನಡೆದಳಲ್ಲಿಂದ ಪುರದ
ಕಡೆಗೆ ಲಲನೆ ತ್ವರದಿಂದ ಗಮಿಸಲು ।

ಕಲಕಲ ಘೋಷ ಮುಂದಿದ್ದರೆ ಹರಹರ
ಸುಖನಿಲಯ ಶಂಭು ಶಂಕರೆನುತ ||೩||೧೮||

(ಸಂಸಾರವೆಂಬ ನಗರದಿಂದ ಮೋಕ್ಷ ಪರದ್ವೀಪಾಂತರಕ್ಕೆ ಸುಲೋಚನೆಯ ಜೀವನ ನೌಕೆಯು ಸಾಗಿತು. ವಿವೇಕ, ವೈರಾಗ್ಯ ವಸ್ತುಗಳ ಸರಕು ಅದರಲ್ಲಿ ತುಂಬಿತ್ತು. ನೌಕೆಯ ಸ್ತಂಭದ ಗಾಳಿಪಟವು ಹಾರಾಡುತ್ತಿತ್ತು. ರಣಾಂಗಣಕ್ಕೆ ಬಂದೊಡನೆ ಅಲ್ಲಿ ಸ್ತಬ್ಧವಾಗಿ ನಿಂತಿರುವ ಪತಿಯ ಕಬಂಧವನ್ನು ನೋಡಿ ಸಾಷ್ಟಾಂಗ ಪ್ರಣಿಪಾತ ಮಾಡಿದಳು. ರತ್ನ ಪಲ್ಲಕ್ಕಿಯಲ್ಲಿಟ್ಟು ಅದನ್ನು ಸಮುದ್ರ ತೀರಕ್ಕೆ ತಂದಳು. ಪವಿತ್ರ ಸ್ಥಲದಲ್ಲಿ ಕುಂಡ ತೆಗೆಯಿಸಿ ಬ್ರಹ್ಮಾಗ್ನಿಯಲ್ಲಿ ಪತಿದೇಹವನ್ನು ಬ್ರಹ್ಮಾರ್ಪಣ ಮಾಡಿದಳು).

**ಶ್ಲೋಕ –**

ಬಂದು ಪುಣ್ಯ ಸ್ಥಲಕೆ ಕುಂಡ ತೆಗೆಯಿಸಿ ವಿಧ್ಯುಕ್ತದಿಂದಾಗಳೆ ।
ತಂದು ಸ್ಥಾಪನೆ ಮಾಡುತಗ್ನಿಸ್ವರೂಪ ಬ್ರಹ್ಮೆಂದು ಕಂಡಬಲೆ ।
ಛಂದಾಗಿ ಪತಿಕಾಯ ಅರ್ಪಿಸಿದಳು ಬ್ರಹ್ಮಾಗ್ನಿಗೆ ಆಹುತಿ ।
ಮಂದಿಯ ಕೂಡ ಸ್ತ್ರೀಯರೊಡನೆ ಬಂದಾಗ ಲಂಕಾಪತಿ ||೧||೧೯||

**ಪದ –**

ತ್ರಿಕುಟಾಚಲದೊಳಗೆ ತಿಲವತಿ ಎಂಬ ಪ್ರಕಟಿಸುವ ಗಂಗೆ ।
ಮುಖಪೂರ್ವಾಗಿ ಹರಿದು
ಸಮುದ್ರೋದಕದೊಳು ತಾ ಬೆರೆಸಿ । ಸಂಗಮೆನಿಸಿ ಪ

ಆ ಸುಸ್ಥಲಂದಲಿ ಸುಲೋಚನೆ ತಾಂ
ಸುಖರೂಪದಲಿ । ತಾಸಿನೊಳಗೆ ಕುಂಡವು
ಸಿದ್ಧಾಗಲು । ಕಾಶದೊಳು । ಎದ್ದಿ ಮಿಂದು ೧

ಬ್ರಹ್ಮವೇ ತಾನೆಂದು ಭಾವಿಸಿ । ಬ್ರಹ್ಮವೇ ಯಜ್ಞ

ಇದು ಭಾವಿಸಿ । ಬ್ರಹ್ಮಾರ್ಪಣ ಮಾಡಿದಳು
ಪತಿವಮು । ಬ್ರಹ್ಮಶಿಖಿಯೊಳಂದು ತಂದು ೨

ಪರಿವಾರವ ಕೂಡೆ ನಾರಿಯರರಸಿ ರಾವಣ ನೋಡೆ ।
ಬರಲು ನರ ಜನರೆಲ್ಲರು । ಮಾಡಲು ।
ಹರ ಶಂಕರ ಘೋಷವನಶೇಷ ॥೩॥೧೯॥

(ಸುಲೋಚನೆಯು ಸಮುದ್ರಸ್ನಾನ ಮಾಡಿ ಮುತ್ತೈದಿಯರಿಗೆ ಸೌಭಾಗ್ಯ ದ್ರವ್ಯಗಳನ್ನು ಅಂದರೆ ರತ್ನ ಅಲಂಕಾರಗಳ ಬಾಗಿಣವನ್ನು ಬಂಗಾರದ ತಾಟಿನಲ್ಲಿ ಕೊಟ್ಟಳು. ಆ ಪತಿವ್ರತೆಯು ನಿಶ್ಚಲವಾದ ಧರ್ಮ ಶಿಲೆಯನ್ನೇರಿದಳು. ಕಡಲಾಗ್ನಿರೂಪಜ್ವಾಲೆ ಕುಂಡದೊಳಗೆ ಪ್ರಜ್ವಲಿಸುತ್ತಿತ್ತು. ಶಂಕರನನ್ನು ಸ್ಮರಿಸುತ್ತ ಆ ಬ್ರಹ್ಮಾಗ್ನಿಯಲ್ಲಿ ತನ್ನ ಪತಿಯ ದಿವ್ಯ ದೇಹವನ್ನು ಕಂಡಳು. ಅದರಲ್ಲಿ ಆತ್ಮಾರ್ಪಣೆ ಮಾಡಿ ಬ್ರಹ್ಮನನ್ನೇ ಕೂಡಿಕೊಂಡಳು).

**ಶ್ಲೋಕ –**

ಋಷಿಗಳು ದೇವ ಸಮೂಹವು ವಿಧಿಹರಿ ।
ಪಶುಪತಿ ಮೊದಲಾದವರೆಲ್ಲೊದಗಿ ।
ಶಶಿವದನೆಯರರಸಿಯರ ಕರದಿ ಶೋ–
ಭಿಸುವ ಸೊಡರ್ಗಳಲಿದಿರು ಬರುತಿರೆ ॥೧॥೨೦॥

**ಪದ –**

ಚಲನೆಯಿಲ್ಲದಂಥ ಧರ್ಮಶಿಲೆಯನೇರಿ ನಿಂದ ಬಳಿಕ ।
ಲಲನೆ ಗಗನ ದರ್ಪಣವ ನೋಡಿ ಕಂಡಳು ।
ಚಲುವೆ ಪುಷ್ಪಕ ಸಮೂಹದೊಳಗೆ ದೇವ, ಸಿದ್ಧ
ವಿದ್ಯಾ ಬಳಗವೆಲ್ಲ ನೆರೆದು ನೋಡುತಿರಲು ಕೌತುಕ ೧

ಅನಸೂಯಾ ಅಹಲ್ಯಾ ಅರುಂಧತಿ ವನಿತಾ
ಲೋಪಾಮುದ್ರಾ ವೃಂದಾ । ಘನಪುಣ್ಯ ಪುಲೋಮಾ
ತಾರಾ ತಮ್ಮ ಪತಿಯ ಸಂಗಡ । ವನಜ ಭವನ
ರಾಣಿ ಶಚಿಯು ಮನಸಿಜಾರಿಸತಿಯರೆಲ್ಲ ।
ಮಿನುಗು ಹಸ್ತ ದೀಪದಿಂದಲಿದಿರು ಬರುತಿರೆ ೨

ಕುಂಡದೊಳಗೆ ತಾ ನೋಡಿ ಕಡಲಾಗ್ನಿರೂಪ
ತ್ರಿಪದ ಮಂಡೆಯೊಳು ಶೃಂಗ ನಾಲ್ಕು ಸಪ್ತಹಸ್ತವು ।
ಕಂಡಳಯ್ಯ ದಿವ್ಯ ದೇಹ ಗಂಡನ ಮೇಲೆ ಸತಿಯು ।
ಕೊಂಡು ಬೆರೆದಳಾಗ ಶಂಕರನ ಸ್ಮರಣೆಯಲಿ ॥೩॥೨೦॥

(ಸುಲೋಚನೆಯ ಅಗ್ನಿಪ್ರವೇಶವಾದ ಮೇಲೆ ರಾಕ್ಷಸರು ಅಗ್ನಿಕುಂಡದಲ್ಲಿ ನೋಡಲು ಅಲ್ಲಿ ಅವರಿಗೆ ಏನೂ ಕಾಣಿಸಲಿಲ್ಲ. ಯಾಕೆಂದರೆ ಸುಲೋಚನೆಯು ಸಾಯೋಜ್ಯ ಪದವಿಗೆ ಮುಟ್ಟಿದಳಾದ್ದರಿಂದ ಅವಳ ದೇಹಾವಶೇಷ ಏನೂ ಉಳಿಯಲಿಲ್ಲ. ಹಿರಿಯ ಮಗ ಹಾಗೂ ಹಿರಿಯ ಸೊಸೆ ಇವರ ಹೋಮವಾಗುತ್ತಲೆ ಮಂಡೋದರಿ, ರಾವಣ ಇವರು ಆಕ್ರೋಶ ಪ್ರಾರಂಭಿಸಿದರು. ಈಶ್ವರನ ಕೋಪದಿಂದ ಈ ದುರವಸ್ಥೆ ಪ್ರಾಪ್ತವಾಯಿತೆಂದು ಅವರು ಮನದಲ್ಲಿ ಮರುಗಿದರು. ರಾವಣನು ತನ್ನ ಮೋರೆಗಳ ಮೇಲೆ ವಸ್ತ್ರ ಮುಚ್ಚಿಕೊಂಡು ಲಂಕೆಯಲ್ಲಿ ಪ್ರವೇಶಿಸಿದನು).

**ಶ್ಲೋಕ** –

ನಗರವಾಸಿಗಳು ಸರ್ವರು ಕೂಡಿ ।
ಅಗಣಿತಾನನದಿ ರಾಮನ ಹಾಡಿ ।
ಸಗುಣ ಬ್ರಹ್ಮ ಸುಲೋಚನೆಗಿಂದು ।
ಸುಗತಿಯನಿತ್ತಲು ರಘುವರನೆಂದು ॥೧॥೨೧॥

**ಪದ –**

ಅಸುರಾಪುರದ ಮಹಾಜನಗಳು ಅನೇಕ ವದನ ।
ಪಸರಿಸಿ ರಾಮನ ಸ್ತುತಿಸಲು ।
ಕುಸುಮ ವೃಷ್ಟಿಯಂತೆ ನುಡಿಗಳು ಸು–
ರಿಸುತ ಬಹಳ ಕಂಠಾರಿಯ ಗುಣಂಗಳು ಪ

ಧನ್ಯರಹುದು ಜನನಿ ಜನಕರು ।
ಈತನ ಪಡೆದ ಪುಣ್ಯವಂತರೆಂಬುದೇನಯ್ಯ ।
ಧನ್ಯ ಧನ್ಯ ಧಾರ್ಮಿಕ ರಾಯ ಸುಲೋಚನೆಯ ।
ಧನ್ಯಳೆನಿಸಿ ಜಗಕೆ ಖ್ಯಾತಿಯ ೧

ಸೀತಾದೇವಿಯ ಪದ ಸಾಲಿಗೆ ।
ಈಕೆಯು ಕೊಂಡ ರೀತಿಗಾರು ಏನು ಮಾಡುವರು ।
ಮತ್ತಿನ್ನಪಕೀರ್ತಿಗೆರಗದೆ ತಲೆಯನಿತ್ತು ।
ದಾತ ಸಾರ್ಥಕ ಮಾಡಿದನು ೨

ರವಿಕುಲದ ರನ್ನಮಣಿಯು ಈತನ
ಶೌರ್ಯಕವಧಿ ಕಾಣ ಸಹಸ್ರಫಣಿಯು ।
ಕಣ್ಣಿಲೆ ಕಂಡೆವು ಧನಿಯರಾಮಗೆ ಒಬ್ಬ
ಗೌರಿಪತಿ ಶಂಕರೆಣೆಯು ॥೩ ॥೨೧ ॥

## (ಕಾವ್ಯದ ಫಲಶೃತಿ ಮತ್ತು ಭರತವಾಕ್ಯ)

**ಶ್ಲೋಕ –**

ಇಂತೀ (ಜಾನಕೀ) ಕಾಂತನ ಚರಿತ್ರೆ ।
(ಅಂತ) ಸ್ತಿಯನಂತನೆನಿಸುವ ।
ಸಂತತ ಸಂತ ಮಹಂತರಂತರ

ಸ್ಫೂರ್ತಿಯು ನಿಂತವು ನೆನೆವ ।
ಎಂಥದಾದರೂ ನಾಮವ ತುದಿ ನಾಲಿಗೆ ।
ಪಥಕೆ ತರುವರ ಚಿಂತೆ ಹರಿಸುವ ।
ಪಿಂತೆಯನಂತರ ಚಿತ್ತದಿ ಸ್ಮರಿಸಿ ನಿ- ।
ವಾಂತ ಪದದಿ ಕುಂತಿರೆ ಮಹಾದೇವ ॥೧॥೨॥

**ಪದ –**

ಗಂಟಿಕ್ಕಿ ಕಟ್ಟಕೋ ಕಂಠದಲ್ಲಿ ।
ಉಂಟು ಸಾಮ್ರಾಜ್ಯ ವೈಕುಂಠಪದ ಕುಳಿತಲ್ಲಿ ಪ

ರಾಮನಾಮೆಂಬೋದು ರಮಣೀಯ ರತ್ನ ।
ಕಾಮ ಕಾಮಿತ ಫಲಪ್ರದರೂಪವು ।
ಪ್ರೇಮೆಂಬ ಹೇಮಸೂತ್ರದಿ ಪೋಣಿಕೆಯ ಮಾಡಿ ।
ಶ್ರೀಮಹಾಗುರು ಮುಖದೊಳಾ ಮಣಿಯಂ ಕೈಕೊಂಡು ೧

ನಾಮ ರೂಪಗಳೊಳಗೆ ನಾಮ ತಾನೇ ನಿಜವು ।
ನಾಮ ವಿರಹಿತ ರೂಪ ಘಟಿಸುದುಂಟೇ ।
ನಾಮ ತಾನೇ ರೂಪ । ನಾಮವೆನಲಪರೂಪ ।
ನಾಮದೊಳಹೊರಗೆಲ್ಲ । ರಾಮನೆ ಹಿಡಿದಿಪ್ಪ ೨

ಒಂದು ಶ್ಲೋಕದೊಳು ಪಾದೊಂದು ಕೇಳುವನ ದೋಷ- ।
ವೃಂದೆಲ್ಲ ಬೇವುತಾಕ್ಷಣ ಹೋಹವು ।
ತಂದು ನಾಮ ನಾಲಿಗೆಯಿಂದ ಸ್ಮರಿಸುವನ
ಭವ ಸಿಂಧುವೆ ಮೃಗತೋಯದಂದದಿಂ ಬಯಲಹುದು ೩

ಯತಿವರನು ಶ್ರೀರಾಮ । ಪತಿಯು ಪುಟ್ಟದ...
ಕೋಟಿ ಗ್ರಂಥ ರಚಿಸಲು ತ್ರಿಭುವನ ।
ಪತಿಗಳ ಹಂಚಿಕೆ ಮಾಡಲತುಳ ವ.... ಕಕರುಳೆ ।
ಪತಿಕರಿಸಿದ ರಾಮನಾಮ ಮೃತ್ಯುಂಜಯನು ೪

ಗಜರಾಜ ಗಣಿಕೆ ಭಿಲ್ಲಜಮೇಳ ಮೊದಲಾದ ।
ನಿಜ ಪದವ ಪಡೆದರೀ ನಾಮದಿಂದ ।
ಸುಜನ ಜನ ರಘುವರನ ಭಜಿಸುವದು ಸುಜ್ಞಾನ ।
ರಜತಗಿರಿಯಧಿಪ ಶಂಕರ ನೋಡಿ ನಲಿ ೫

ಗಂಟಿಕ್ಕಿ ಕಟ್ಟಿಕೋ ಕಂಠದಲ್ಲಿ ।
ಉಂಟು ಸಾಮ್ರಾಜ್ಯ ವೈಕುಂಠಪದ ಕುಳಿತಲ್ಲಿ ।

(ಈ ಸುಲೋಚನಾ ಆಖ್ಯಾನವು ವಾಲ್ಮೀಕಿಯ ಮೂಲ ರಾಮಾಯಣ ದಲ್ಲಿಲ್ಲ ; ಆದ್ದರಿಂದ ಈ ಆಖ್ಯಾನವು ನಿರಾಧಾರ ವಾದದ್ದು ಎಂದು ಆಕ್ಷೇಪಿಸ ಬೇಡಿರಿ. ಯಾಕಂದರೆ, ವಾಲ್ಮೀಕಿ ಋಷಿಯು ಶತಕೋಟಿ ರಾಮಾಯಣ ಗಳನ್ನು ರಚಿಸಿಲ್ಲವೇ ? ಈ ಅಸಂಖ್ಯ ರಾಮಾಯಣಗಳನ್ನು ಯಾರು ಓದಿ ನೋಡಿದ್ದಾರೆ ? ಇದಲ್ಲದೆ, ವೇದವ್ಯಾಸರು ಈ ಸುಲೋಚನಾ ಆಖ್ಯಾನವನ್ನು ಅಗ್ನಿಪುರಾಣದಲ್ಲಿ ನಿರೂಪಿಸಿದ್ದಾರೆ. ಈ ವ್ಯಾಸವಾಣಿಯನ್ನು ಓದದೆ ಸುಮ್ಮನೆ ಆಕ್ಷೇಪಿಸುವದು ಯೋಗ್ಯವಲ್ಲ, ಎಂದು ಜಕ್ಕಪ್ಪಯ್ಯನವರ ಆಖ್ಯಾನದ ಹಸ್ತ ಲಿಖಿತದ ಉಪಸಂಹಾರ.

**ಇತಿ ಶ್ರೀ ಸುಲೋಚನಾ ಅಗ್ನಿಪ್ರವೇಶ ಲಿಖಿತ ಸಮಾಪ್ತಿ**

## ಆ. ದತ್ತಾತ್ರೇಯ ಷಟ್ಪದಿ

**ಪ್ರಾಸ್ತಾವಿಕ –**

ಅತ್ಯಂತ ಪ್ರಾಸಾದಿಕ ಭಾಮಿನಿ ಷಟ್ಪದಿಯಲ್ಲಿ ದತ್ತಾತ್ರಯ- ಕಥಾ ನಿರೂಪಣೆಯಿದೆ. ರೂಪಕ, ಉಪಮೆ, ಅಲಂಕಾರಗಳಿಂದ ಈ ಕಾವ್ಯ ಸಮೃದ್ಧಿ ಯಾಗಿದೆ. ಶಾಂತ ಹಾಗೂ ಭಕ್ತಿರಸಗಳಿಂದ ಕಾವ್ಯಕ್ಕೆ ಕಳೆ ಏರಿದೆ. ವಾತ್ಸಲ್ಯ ರಸವಂತೂ ಕಥೆಯ ಜೀವಾಳ. ಸಮಸ್ತ ಪದಗಳ ಮಾಲಿಕಯೂ ಸಾಕಷ್ಟಿದೆ. 'ರಕ್ತ ಸಿತಾಂಗಾಸಿತ ಪ್ರಭ' ಇಂಥ ಪದ ಪ್ರಯೋಗಗಳನ್ನು ಈ ಕಾವ್ಯದಲ್ಲಿ ಕಾಣು ತ್ತೇವೆ. ರಕ್ತ ಪ್ರಭ ಅಂದರೆ ಬ್ರಹ್ಮ ; ಸಿತಾಂಗ ಪ್ರಭ ಎಂದರೆ ಶಿವ ; ಅಸಿತ ಪ್ರಭ ಎಂದರೆ ವಿಷ್ಣು. ಪರಂಪರಾಗತ ಪದ್ಧತಿಯಂತೆ ಗಣಪತಿ, ಸರಸ್ವತಿ ಹಾಗೂ ಸದ್ಗುರು ಸ್ತವನದಿಂದ ಕಾವ್ಯ ಪ್ರಾರಂಭವಾಗುತ್ತದೆ.

ಬ್ರಹ್ಮಾ ವಿಷ್ಣು ಮಹೇಶ ಇವರ ವರ್ಣನೆ ಹೃದಯಂಗಮ ವಾಗಿದೆ. ಇವರು ಕಾಯ ರಹಿತರು, ಮಾಯಾರಹಿತರು, ಸಾಯಾಸದ ಸಾಧನಗಳಿಲ್ಲದೆ, ವಿಶ್ವದಲ್ಲಿ ಅವತರಿಸಿದವರು. ಅವರು ಜೀವರಿಗೆ ಜೀವರು. ಅತ್ರಿ ಋಷಿ ಹಾಗೂ ಅನಸೂಯೆ ಯೆಂದರೆ, ನೀತಿ ಹಾಗೂ ಅಧ್ಯಾತ್ಮಗಳ ಮೂರ್ತಿ ಮಂತ ಸ್ವರೂಪರೇ. ಅವರು ಭಕ್ತರನ್ನು ಪಾವನ ಮಾಡುವರು. ಅಷ್ಟೇ ಏಕೆ, ಅವರು ಪಾವನಕೆ ಪಾವನ ಮಾಡುವವರು. ಎರಡನೆಯವರ ದುಃಖ ಕಂಡರೆ ಅತ್ರಿ ಋಷಿಯ ಮನಸ್ಸು ಕರಗುತ್ತದೆ. ಅವರ ದೋಷ ದೌರ್ಬಲ್ಯಗಳನ್ನು ಮರೆತು ಋಷಿಯು ಕರುಣಾ ಮಯ ದೃಷ್ಟಿಯಿಂದ ಆಶೀರ್ವದಿಸುತ್ತಾನೆ. ಅನಸೂಯೆಯ ಮಾಹಾತ್ಮ್ಯವೇ ಬೇರೆ. ಎಂಬತ್ತು ನಾಲ್ಕು ಲಕ್ಷ ಜೀವ ಕಬಂಧಗಳನ್ನು ಬೊಂಬೆಗಳಂತೆ ಕುಣಿಸುತ್ತಾರೆ ಬ್ರಹ್ಮಾ, ವಿಷ್ಣು, ಮಹೇಶ ಈ ತ್ರಿಣಿಯರು. ಇಂಥ ದೇವ ದೇವರನ್ನು ಕಂದರಂತೆ ಸಲಹುವ, ಅವರನ್ನು ಅಂಬೆಗಾಲಿಕ್ಕಿ ಆಡಿಸುವ ಮಹಿಮಾಂಬುಧಿಗೆ ಶರಣು, ಎಂದು ಜಕ್ಕಪ್ಪಯ್ಯನವರು ಆ ಸಾಧ್ವಿಗೆ ನಮಿಸುತ್ತಾರೆ. ಭಕ್ತಿ ಪಥಿಕನ ಅವಸ್ಥೆ ಕಂಡು ಅವನನ್ನು ಅನುಗ್ರಹಿಸಲು ಅವ್ಯಕ್ತ ಪರಮಾತ್ಮನು ವ್ಯಕ್ತನಾಗುತ್ತಾನೆ, ಎಂದು ಅವರು ಭಕ್ತಿಯ ಮಹಿಮೆ ಕೊಂಡಾಡುತ್ತಾರೆ. ದ.ರಾ.ಬೇಂದ್ರೆಯವರು

ಹೇಳಿದ ಅತ್ರಿ, ಅನಸೂಯ, ದತ್ತಾವತಾರ ಇವುಗಳ ಸಾಂಕೇತಿಕ ಅರ್ಥ ಮನನೀಯವಾಗಿದೆ. ಅತ್ರಿ ಎಂದರೆ ಮೂರು ಇಲ್ಲದವನು. ಅಂದರೆ ತ್ರಿಗುಣಾತೀತ. ಅನಸೂಯ ಎಂದರೆ ಮಾತ್ಸರ್ಯವಿಲ್ಲದವ. ಯಾವನು ತ್ರಿಗುಣಾತೀತನೋ ಅವನು ಅಸೂಯೆ ರಹಿತ ; ಇಂಥ ನಿತ್ಯ ನಿರ್ಮಲನ ಹೃದಯದಲ್ಲಿ ದತ್ತಾತ್ರಯನ ಅವತಾರವಾಗುತ್ತದೆ. ಕೇವಲಾನಂದದ ಅನುಭವವೇ ಈ ಕಥೆಯ ಶ್ರವಣದಿಂದಾಗುವ ಫಲಶ್ರುತಿ, ಎಂದು ಜಕ್ಕಪ್ಪಯ್ಯ ನವರು ಸಾರುತ್ತಾರೆ. 'ಸದ್ಗುರು ಕೃಪಾ ತುಷಾರದಿಂ ನಡೆದೀ ಕಥಾಮೃತ ಶಂಕರಾರ್ಪಿತವು', ಈ ಆತ್ಮನಿವೇದನದಿಂದ ಆಖ್ಯಾನವು ಕೊನೆಗಾಣುತ್ತದೆ.

ಸಾಮಜಾನನ ಸಕಲ ಸಂಪದ
ಕಾಮಿತಾರ್ಥ ಫಲ ಪ್ರದಾಯಕ
ಹೈಮವತಿಗತಿ ಪ್ರೀತಿಕರ ಸುತನೆನಿಸಿ ಜಗದೊಳಗೆ ।
ನಾಮಮಾಲೆಯ ನೆನೆವರಘನಿ-
ರ್ಧೂಮ ಮಾಡುವ ಭಕ್ತವತ್ಸಲ
ಸ್ವಾಮಿ ಗಣಪತಿ ಮತ್ಕೃತಿಗೆ ನಿರ್ವಿಘ್ನದೋರುವದು ೧

ಶಾರದಾಂಬೆಯ ಚಾರುತರ ಚರ-
ಣಾರವಿಂದನುದಿನ ಸ್ಮರಿಸುವರ
ಘೋರ ಕಾರಾಗಾರ ಸಂಸಾರಾಬ್ಧಿಯನು ತರಿಸಿ ।
ಪಾರ ಮಾಡುವಿ ಪದ್ಮಮಾಲಾ-
ಧಾರೆ ಧವಲಾಂಗ ಛವಿ ಹಂಸಾ-
ಕಾರದಿ ದಯಾರ್ಣವ ವಿಹಾರೆ ಸುಮತಿ ಮನೋಧಾರೆ ೨

ತಂದೆ ಸದ್ಗುರು ದ್ವಂದ್ವ ಪದ
ಪದ್ಮೊಂದು ಭಾವನೆಯಿಂದ ವಂದಿಸೆ
ಮಂದತನ ಮತಿ ಬೆಂದು ಹೋಯಿತು ಚೆಂದದಿಂದಿಂದು ।
ಕುಂದು ತಾರದೆ ಕೃತಿಗೆ ಪರಮಾ-
ನಂದ ಕೇಳುವರ ಕಿವಿಗೆ ಬೇ-
ಕಿಂದು ಬಿನ್ನಹ ಮಾಡಿಕೊಳಲಿಕೆ ಕರುಣಿಸಿದ ಪೂರ್ಣ ೩

ಆದಿ ಕಾಲದೊಳಾದುದವತಾರಾದಿಗುರು ದತ್ತ ಅನುಸೂ-
ಯಾ ದಯಾರ್ಣವನೆನಿಪನತ್ರೇಯದುದರದೋಳ್ ಮಾಡೆ ।
ಬಾಧಿಸುವ ಸಂಸಾರ ಪಾಶವ ಭೇದನಂ ಗೈವುತ್ತ ಸದ್ಗತಿ
ಹಾದಿಗೆಳೆದೊಯ್ದವನ ಕೃತಿ ಮನಗೊಟ್ಟು ಕೇಳುವದು ೪

ಒಂದು ದಿನ ಒಡ್ಡೋಲಗದಿ ಸುರ ವೃಂದ ಸಂದಣಿಯಿಂದ
ಕುಂತಿರೆ ಇಂದುಧರ ವಿಧಿ ಇಂದಿರೇಶರು ಸತಿಯರೊಡಗೂಡಿ ।
ಮುಂದರಿವ ಧರ್ಮಾರ್ಥ ಸಾಹ್ಯಕೆ
ಬಂದು ನಾರದನಂದು ತ್ರಿಣಿಯರಿಗೆ
ವಂದನಂ ಗೈದನುಪಮ ಸ್ತುತಿ ಸ್ತೌತ್ಯ ಮಾಡಲಿಕೆ ೫

ದೇವ ಋಷಿಗಳು ಬರುವದಿಂದಾವ ಕಡೆಯಿಂದಾಯ್ತು ಹೊಸ ವಾ-
ರ್ತಾವದೊಂದು ಇದ್ದಲೊರೆವುದು ಎಮ್ಮ ಕೂಡೆನಲು ।
ಸಾವಧಾನದಿ ಕೇಳುದೆಲ್ಲರು ಪಾವನಾಶ್ರಮದೊಳಿರುವ ಸು-
ದೇವಿ ಮಹಿಮಾಸ್ಪದವ ಪೊಗಳುವರಾರು ಜಗದೊಳಗೆ ೬

ಅತ್ರಿ ಋಷಿಪತ್ನಿ ಅನಸೂಯಾ ಭುವನತ್ರಯಾದೆಲ್ಲರಿಗೊಂದಳೆ
ಸಾವಿತ್ರಿ ಶಿರಿ ಶರ್ವಾಣಿಗೊಂದರಿಗೆ ಸರಿಬಾರೆ ।
ಮಿತ್ರನಿದರಿನೊಳೆಸೆದ ಪರಿ ನಕ್ಷತ್ರಪತಿ ಕವಿ ಗುರುಗಳೆಂತು ಪ-
ವಿತ್ರಕರ ಪತಿವ್ರತೆಯರವಯವ ಮೌಳಿ ಎನೆ ಸ್ತುತಿದ ೭

ಪತಿಯು ಪರದೈವೆಂದರಿದು ನಿಜ
ಪತಿಯ ಪದಕರ್ಪಿತವು ತನುಮನ
ಮತಿಮನಗಳಾಚರಣ ಸರ್ವೆಲ್ಲ ತಾ ಮಾಡೆ
ಅತಿಶಯಾನಂದಾಬ್ಧಿಯೋಳ್ ಸಂಗತಿ ಪಡೆದು ಸ್ವರಾಜ್ಯ ಸುಖದಿಂ
ಪತಿ ಸ್ವರೂಪದಿ ರಮಣ ಪಡೆದುದಕೆ ಅನಸೂಯಾ ನಾಮ ೮

ಸುರಮುನಿಯ ಸ್ತುತಿ ವಾಕ್ಯವಾಲಿಸಿ
ಗಿರಿಜೆ ರಮೆ ವಾಣಿಗಳು ತತ್‌ಕ್ಷಣ ಹಿರಿದು
ರೋಷದಿ ಹೋಗಿ ವ್ರತಕೆ ಅಪಾಯ ತರಬಹುದು ।

ಲೋಕದರಸರಿಗರಸರೆನಿಪ
ಏಕರೂಪರು ತಾಳಿ ಮೂತನು
ಬೇಕು ನಾವು ನಿಮಗೆಂಬ ಬಯಕೆಯನುಳ್ಳರತಿಮುದದಿ ೯

ಆಕೆ ತಾನಕೆ ಪೋಗಿ ಕಬ್ಬಿಣದಾ ಕಡಲೆ ಕೊಟ್ಟಗ್ನಿ ಮುಖದಿಂ
ಪಾಕ ಮಾಡಿಸಿ ಉಂಡು ಬಂದರೆ ಪತಿಗಳಹುದೆಮಗೆ ॥
ಕಾಂತೆರಾಸುರದಿಂದ ನುಡಿವುದ
ಕಾಂತರಾಲಿಸುತೆದ್ದು ನಡೆದೇ-
ಕಾಂತದಾಲೋಚನೆಗಳಿಂದತಿಥಿಯ ಸ್ವರೂಪವನು ೧೦॥

ಭ್ರಾಂತರಾಗದೆ ಧರಿಸಿ ಬಂದತಿಶ್ರಾಂತರನು ಕಂಡೆರಗಿ ಚರಣದಿ
ಕಾಂತೆ ಕೋಮಲ ವಾಕ್ಯದಿಂ ಉಣಲೇಳಿ ಎನಲಾಗಿ ।
ಆಗ ಋಷಿ ಆಶ್ರಮದೊಳಿಲ್ಲದೆ
ಪೋಗಿರಲು ನದಿಸ್ನಾನಕಿತ್ತಲು
ಬೇಗ ಮೂವರು ಬಂದು ನುಡಿದರು ಪತಿಪರಾಯಣಿಗೆ ೧೧

ಈ ಕಡಲಿ ಕೊಂಡಗ್ನಿಯಿಂ ಪಾಯಸ
ಮಾಡುಣಿಸುವದು ನಗ್ನದಿ
ಸಾಗಿ ಹೋಗುವೆವಿಲ್ಲದಿರ್ದಡೆ ಎನಲಿಕನಸೂಯಾ ।
ನಸು ನಗುತ್ತಲವರೊರೆದ ಮಾತಿಗೆ
ಇಸಕೊಳುತ ಕಬ್ಬಿಣದ ಚಣಕವ
ಹಸನವಾಗಾಗಳೆ ಸುಪಾಕವ ಮಾಡಿ ಮುಂದಿರಿಸಿ ೧೨

ಹಸಿದಿರ್ಪೆ ತ್ರೈಮೂರ್ತಿಗಳು ಸಂತಸದಿ
ಉಣಲೇಳೆನುತ ಸ್ವಸುಖದಿ ಋಷಿ ಕಮಂಡಲುಜಲವ
ತಲೆಯಲಿಕ್ಕವರು ಶಿಶುವಾಗೆ ।
ನೋಡಿ ಮಗುಗಳ ಹರುಷದುಬ್ಬಿಲಿ ನೀಡಿ
ಕರಗಳ ನೆಗವುತ ಅಪ್ಪಿ ಈಡು ತುಡುಗೆಯ
ನಗ್ನರೂಪದಿ ತೊಡೆಯ ಮೇಲಿರಿಸಿ ೧೩

ಕೂಡಿಸಿದ ಘೃತ ಪಾಲನೆರವುತ
ಜಾಡಿಸುಟ್ಟೋಸ್ತ್ರವನು ಹಾಸಿಕೆ
ಮಾಡಿ ತೊಟ್ಟಿಲೊಳಿಟ್ಟು ಜೋಗುಳ ಪಾಡಿ ಶಿಶುಗಳಿಗೆ ।
ಜೋ ಜೋ ಜಗಜನನಕೆ ಜನಕನೆ
ಜೋ ಜೋ ಜನಕಂಗೆ ಜನಕನೆ
ಜೋ ಜೋ ಜನಕಾದಿ ವಂದ್ಯನೆ ಜಾಹ್ನವಿಯ ಧರನೆ ೧೪

ಜೋ ಜೋ ರಕ್ತಸಿತಾಂಗಾಸಿತಪ್ರಭ
ಜೋ ಜೋ ನಿಮ್ಮನು ಪೊಗಳುವವರ
ಜೋ ಜೋ ಜೋ ಪಶುಪತಿ ಪದ್ಮನೇತ್ರನೆ
ಪದುಮಸಂಭವನೆ ೧೫

ನಿಮ್ಮ ಬರವಿದನೇನು ಬಣ್ಣಿಸ-
ಲೆಮ್ಮ ಪುಣ್ಯೋದಯದ ಫಲವೈ
ಎಮ್ಮ ಸುಕೃತಕೆ ಸಮರು ಜಗದೊಳಗಾರೊ ನಾನರಿಯೆ ।
ಎಮ್ಮನುದ್ಧರಿಸಲಿಕೆ ನೀವೀ
ನಿಮ್ಮ ಕೃಪೆಯಿಂದಿಲ್ಲಿಗೈದಿರಿ
ಎಮ್ಮಗಿನ್ನಾವುದು ಬಯಕೆ ನಿಮ್ಮೀಕ್ಷಿಸಿದ ಬಳಿಕ ೧೬

ಇಂತು ನಾನಾ ವಿಧದಿ ಜೋಗುಳ
ವಂತರಂಗದಿ ಕರಗುತವರನು
ನಿಂತು ತೊಟ್ಟಿಲ ನೇಣ ವಿಡಿದಿಂತಿಂತು ಪಾಡುತಿರೆ ।
ಸಂತ ಮೂರುತಿ ನಿತ್ಯ ನೇಮಂಗ-
ಳಂತರಿಸದಾಚರಿ ಬಂದು ಮ-
ಹಂತನಾಶ್ರಮ ದ್ವಾರದೊಳು ಕೇಳಿದನು ಪಾಡುವದ ೧೭

ಏನಿದಚ್ಚರಿ ಇಂದು ಉತ್ಸವ
ಏನು ಮನೆಯೊಳಗೆಂದು ಮುನಿವರ
ಮಾನಿನಿಯ ಬೆಸಗೊಳಲು ನೀವರಿಯದ ಪ್ರಸಂಗ ಉಂಟೆ ।

ಸಾನುರಾಗದಿ ಬಂದವರ ಸ-
ನ್ಮಾನಿಸಿದ ಪರಿಗಳನು ಪೇಳಲಿ-
ಕಾನತನು ತಾನಾಗಿ ಶಿಶುಗಳ ಕಂಡು ಹಿಗ್ಗಿದನು ೧೮

ಜಯ ಜಯತು ವೇದಗಳ ನುಡಿದನೆ
ಜಯ ಜಯತು ವೇದಾಂತ ವೇದ್ಯನೆ
ಜಯ ಜಯತು ವೇದಗಳ ಸ್ವನಾಲಕುಗಳ ರಥಾರೂಢಾ ।
ಭಯ ಭರಿತ ಭಕ್ತಿಂದಲವರನನು
ನಯದಿ ಉಭಯರು ಏಕಭಾವದಿ
ಲಯ ಉದಯ ಸ್ಥಿತಿ ಕರ್ತರನು ಲಾಲಿಸುತ್ತಿರಲತ್ತ ೧೯

ವರುಷವರ್ಧವಾಗಿ ಹೋಗಿಯು
ಪುರುಷರಾಗಮನವನರಿಯದಾಯ್ತು
ಅರಸಿಯರು ಚಿಂತಾತುರಕೆ ಮನಗೊಟ್ಟು ಮರುಗುತಿರೆ ।
ಸರಸ ವೀಣಾ ಮಧುರ ಸ್ವರದಿಂ
ಸುರಸ ರಸಮಯ ನಾಮ ಪಾಡುತ
ಕರಸದೈತಂದಮರ ಋಷಿಗಿದಿರೆದ್ದು ಪದಕೆರಗಿ ೨೦

ಬಂದ ನಾರದಗೆಂದರವರಿಂ-
ತೆಂದು ಎಲ್ಲಿಂ ತಂದೆಯ್ಯೆಯ್ತಂದೆ
ಹಿಂದೆ ಎಮ್ಮಿಂದಾದ ತಪ್ಪನೊಂದನೆಣಿಸದಿರೈ ।
ಅಂದು ಹೋದರು ಸರಸ ವಾರ್ತಾ
ತಂದು ಹೇಳುವರಿಲ್ಲವಿನ್ನೇ-
ನೆಂದು ಕೆಟ್ಟೆವಕಟ ನಿನಗರಿಕುಳ್ಳರುಸುರೆಮಗೆ ೨೧

ಉರಗ ಸೋಂಕಿದ ಪಸುಳೆವೋಲ್ ತನು
ಮರೆವುತೆಚ್ಚರಿತಿರುವದಿರವನು
ವರ ಮುನಿಪ ಕಂಡಾಗ ಕರಗುತ ನುಡಿದನವರೊಡನೆ ।
ಬರಿಯ ಭ್ರಾಂತಿಯ ಬಿಟ್ಟು ಕೇಳಾ

ಒರಲದಿರಿ ತಾಯಿಗಳಿರಾ ನಿಮ್ಮಯ
ಪುರುಷರಿಪ್ಪರು ಕ್ಷೇಮರೂಪದಿ ನೋಡಿ ಬಂದಿರುವೆ ೨೨

ಸಾವಧಾನದಿ ಕೇಳುದಿಲ್ಲಿಂ-
ದಾವ ಕಾಲದಿ ಹೊರಟು ನಿಮ್ಮೀ
ಜೀವ ಪತಿಗಳು ದಹಕರ ವೇಷವ ಧರಿಸಿ ನಡೆದು ।
ಪಾವನಾಶ್ರಮಕಾಗ ಹೋಹಲು
ದೇವಿ ಭಾವನೆ ಕೆಡಿಸಲಿಕೆ ಮೂ-
ದೇವರಿವರನು ಕಾಂತೆಯೆರಗಿದಳತ್ರಿ ಸತಿ ಬಂದು ೨೩

ಮಿತ್ರನುದಯ ಸ್ನಾನದವಸರ-
ಕತ್ರಿ ನದಿಗ್ಹೋಗಿರಲಿಕೆ ಶತ
ಪತ್ರ ಲೋಚನೆ ಉದಕವನು ತಂದವರ ಮುಂದಿರಿಸಿ ।
ಚಿತ್ರತರದಾಸನವ ಮಂಡಿಸಿ
ಪತ್ರ ಪುಷ್ಪ ಸುಗಂಧ ಪರಿಮಳ
ಸೂತ್ರಧಾರಿಗಳರ್ಚಿಸಲ್ಕನಸೂಯ ಮೇಳವಿಸಿ ೨೪

ಉಬ್ಬಿ ಹರ್ಷೋತ್ಕರ್ಷದಿಂ ನೆಲ
ಕಬ್ಬಿಗಿಕ್ಕಿದ ಜೇನಿನಂದದಿ
ಹಬ್ಬ ನಿಮ್ಮಿಂದೆಮಗೆ ಗಟಿಪುದು ಹಸಿದಿರೇಳೆನಲು ।
ಕಬ್ಬಿಣದ ಕಡಲಿಗಳನಿತ್ತಲು
ನಿಬ್ಬರವ ಮಾಡದೆ ಪತಿವ್ರತೆ
ಹಬ್ಬ ಮಾಡುರೆ ಬೇಯಿಸಿ ತಾ ಎನೆ ಪಕ್ವ ಮಾಡಿರಿಸಿ ೨೫

ಹೊತ್ತುಗಳಿಯಲಿ ಬೇಡಿ ಕ್ಷುಧಿತರು
ಹೊತ್ತು ಬಹಳಾಯಿತೇಳೆನಲಿಕೆ
ಬತ್ತಲೆ ಬಡಿಸಿದರೆ ಉಂಬೆವೆನಲು ನಸು ನಕ್ಕು ।
ಮತ್ತೆ ಗಜಗಾಮಿನಿ ಒಳಗಿನಿಂ-
ದುತ್ತಮ ಕಮಂಡಲ ಜಲ ತಂ-
ದುತ್ತಮಾಂಗದಿ ಇತ್ತಲಾಕ್ಷಣ ಶಿಶುಗಳವರಾಗೆ ೨೬

ಸೀರೆಯನು ಬಿಸುಟತ್ತೆ ಶಿಶುಗಳ
ಮೋರೆ ಮುದ್ದಿನ ಮುದ್ದೆಯಾಗಿರ–
ಲೇರಿ ಹರುಷವು ಬೆಣ್ಣೆ ಪಾಲೆರದೆರದಳೆಣ್ಣೆಯಲಿ ।
ಚಾರು ತೊಟ್ಟಿಲೊಳಿಟ್ಟ ಬಾಲರ
ನೀರೆ ಹಾಡುವ ಜೋಗುಳಿಂದ ಸು–
ನಾರಿಪತಿ ಬಂದಾಗ ಕಂಡಾನಂದದೊಳು ಮುಳುಗಿ ೨೭

ಆವ ತಪಸಿನ ಫಲವೊ ಮಹಾ–
ದೇವಾವ ಯಜ್ಞದ ಫಲವೊ ಶಿವನೆ–
ಮ್ಮಾವ ಸುಕೃತದ ಫಲವೊ ಸದ್ಗುರು ಕರುಣಿಸಿದ ಫಲವೊ ।
ಆವ ಹಿರಿಯರು ಪಡೆದ ಫಲವೈ
ಯಾವ ಜನುಮದ ಪುಣ್ಯ ತಿಳಿಯದು
ದೇವ ದೇವರು ಮೂವರೊದಗಿದರೇಕ ಕಾಲದೊಳು ೨೮

ಕಾಯ ರಹಿತರು ಮಾಯ ರಹಿತರು
ಸಾಯಸದ ಸಾಧನಗಳಿಲ್ಲದೆ
ಈಯಪೇಕ್ಷೇನಿಲ್ಲವರ ಮನೆಯೊಳು ಮಗುಗಳಾಗೆ ।
ತಾಯಿ ಪಿತನ್ಹೊರತಾಗಿ ಇರುವರನು
ಬಾಯಿಮಾತಿಗೆ ಮನಕೆ ಸಿಲುಕದ
ಜಾಯಪತಿಗಳು ಪಾಡುತಾಡುತವರ ಸಲಹುವರು ೨೯

ಏನು ಏನೆನಬಹುದನಸೂಯಾ ಪತಿ
ಧ್ಯಾನ ಪರಳಾಗಿರ್ಪ ಮಾನಿನಿ
ಮಾನ ಭಂಗಕೆ ಕಳುಹಿದಿರಿ ಪತಿಗಳನು ನೀವಾಗೆ ।
ಆ ನಿಜಾಶ್ರಮಕ್ಹೋಗಲಿಂತಾಯಿ–
ತೇನು ಗತಿ ನಿಮಗಿನ್ನು ಸ್ವಪುರುಷ–
ರಾನನವಲೋಕೆಂದಿಗಾಗುದು ತಿರುಗಿ ಬಾರೆಂತೋ ೩೦

ಇಂತು ನಾರದ ಪೇಳ್ದ ಸರ್ವ್ವತ್ತಾಂತ–
ವಾಲಿಸಿ ವಪು ಮರೆವುತತಿ ಚಿಂತೆಯಿಂದಿನ್ನೇನು

ತಮಗೆಂದು ಸುರಮುನಿಯ ।
ಸಂತ ಶಿವ ಪದಕೆರಗಿ ಪಡಿ–
ದೆಂತುಪಾಯವಕಿಂತು ಕರುಣಿಸಿ
ಸಂತ ಮೂರುತಿ ಪತಿಗಳನು ಬರುವಂತೆ ಮಾಡೆನಲು ೩೧

ಎಂದ ಮಾತಿಗೆ ನಕ್ಕು ಜಗದಾ–
ನಂದಕಂದವರೆತ್ತಿ ಚಿಂತೆಗ–
ಳಿಂದ ಕರಗದೆ ಇಂದು ಪತಿಗಳ ನೀವು ಕೂಡುವಿರಿ ।
ಒಂದುಪಾಯವ ಮಾಡುದೀಗಲೆ
ಹಿಂದು ಮುಂದಣಿ ಎಣಿಕೆ ಬಿಟ್ಟಿ–
ಲ್ಲಿಂದ ಋಷಿಪತ್ನಿಯ ಸ್ಥಾನಕೆ ಪೋಗಿ ಶರಣೊಕ್ಕು ೩೨

ಬೇಡಿಕೊಂಡಾಕೆಯನು ರಮಣರ
ಕೂಡ ಬರುವದಕಿದೇ ಉಪಾಯವು
ಮಾಡಿಕೊಳ್ಳೆನುತವರ ಪೊರಮಡಿಸಿ ಆಗ ನಾರದನು ।
ಓಡಿ ಬಂದಾಶ್ರಮದೊಳತ್ರಿ
ಗೂಡಿರುವಳನಸೂಯಗವರೊಡ
ನಾಡಿ ಬಂದುದನೊರೆವ ಅನಿತರೊಳೈತಂದರವರೊರಗೆ ೩೩

ಪಾವನಾಶ್ರಮ ದ್ವಾರಕೈದಾ
ದೇವಿಯರಿಗೆ ಎದುರ್ಗೊಗಿ ಸು–
ತ್ಸಾಹ ಭಾವ ಭಾವನೆಯಿಂದ ಗಾಢಾಲಿಂಗನಂ ಕೊಟ್ಟು ।
ಮೂವರನು ಒಡಗೊಂಡೊಳಗೊ–
ಯ್ದು ವರಾಸನವಿತ್ತು ಕುಳ್ಳಿಸಿ
ಸಾವಧಾನದಿ ಪೂಜೆ ಷೋಡಶ ವಿಧಿಗಳಿಂ ಮಾಡೆ ೩೪

ದೇವಿಯರು ದೂರಿಂದ ಬಂದಿರಿ
ಪಾವನಾಶ್ರಮಕಿಂದು ದಣಿದಿರಿ
ಪಾವನಕೆ ಪಾವನರು ಮಾಡಿದಿರೆಮ್ಮ ಪಾವನವ ।
ಆವ ತಪಸಿನ ಫಲವೊ ನೋಡಲು

ಜೀವ ಜೀವರೀ ಬರವಿದಚ್ಚರೆ
ಯಾವ ಕಲ್ಪನೆ ಉಳಿಯದಾಯ್ತು ಧನ್ಯರಾವ್ ಜಗಕೆ ೩೫

ಅಂಚೆದುಪ್ಪಳ ಹಾಸುಕೆಯ ಹೊಸ
ಮಂಚಕವರನು ಒಯ್ದು ವಿನಯದಿ
ಮುಂಚೆ ಕಳಕೊಂಬುದು ಶ್ರಮವೆಂದವರ ಮಲಗಿಸುತ ।
ಸಂಚಿತಾರ್ಥದ ಫಲವಿದೆಮಗೆನ್ನು-
ತಂಚೆಗಾಮಿನಿ ಪಾದಸೇವೆಯ
ಚಂಚಲಿಲ್ಲದೆ ಮಾಳ್ಪ ದೇವಿಯ ಮಕ್ಕಳುತಲೆ ೩೬

ಬಂದು ತೊಟ್ಟಿಲೊಳಿದ್ದ ಶಿಶುಗಳಿ-
ಗೆಂದು ಹಸಿದಿರ್ಪೈ ಬನ್ನಿರ್ಪೈ ನಿ-
ಮ್ಮಿಂದಲೇ ಸಂಸಾರದೋಳ್ ನಾವ್ ಧನ್ಯರೆನಿಸಿದೆವು ।
ಬಂದಿಹರು ಕಾಂತೆಯರು ಕರೆಯಲಿ-
ಕೆಂದು ಅವರೊಡನೆ ಪೋಗಲಾದಿರೆ
ತಂದೆಗಳು ನೀವೆಂದು ತೆಗೆದಪ್ಪಿದಳು ನಂದನರ ೩೭

ಎಮ್ಮ ಬಿಟ್ಟಿನ್ನೋಗುವಿರೆಲ್ಲೆ
ನಿಮ್ಮನುಳಿದಾನೆಂತು ಜೀವಿಪೆ
ಬೊಮ್ಮ ಹರಿ ಹರರೇನು ಹೇಳುವರೆಂದು ಮಮತೆಯಲಿ ।
ಝುಮ್ಮನವರನು ತಂದು ತೊಡಿಮೇ-
ಲಮ್ಮ ಮಲಗಿಸಿ ಹಾಲನೆರೆಯಲು
ಸುಮ್ಮನತ್ತಿತ್ತರಿವುತಲವರಂಬೆಗಾಲಿಕ್ಕಿ ೩೮

ಬಾಲಲೀಲೆಯ ನೋಡಲಿಕ್ಕೆರ-
ಡಾಲೆ ಸಾಲದಬಲೆ ಬಾಲರ
ಮೇಲೆ ತನುಜೀವನು ನಿವಾಳಿಸಿ ಬಿಸುಟಿ ಸುಖದಿಂದ ।
ಕಾಲಹರಣವ ಮಾಡುತಿಪ್ಪಾ-
ಕಾಲದೋಳ್ ನಿದ್ರೆಗಳ ತಿಳಿ-
ದಾಲತಾಂಗಿಯರಾಗ ಹೊರ ಇಕೆ ಬರಲಿಕನಸೂಯಾ ೩೯

ನೀರನಿತ್ತವರಿಂಗೆ ಬಳಿಕ
ಚಾರು ಚರ್ವಣೆ ಕೊಡವುತತ್ತುಪ-
ಚಾರ ಮಾಡುವ ಚಂದುರತನಕ ಚೆಲುವಿಯರು ಮೆಚ್ಚಿ ।
ನಾರದನು ಮೊಗದೋರಲಾಕ್ಷಣ
ನಾರಿಯರೇನಾಡದೊಡನೆ ಬಂದ-
ತ್ರಿಋಷೀಶ್ವರಗೆರಗಿ ಕೈ ಮುಗಿಲಿಕೆ ಮುನಿರಾಯ ೪೦

ಕಂಡವರ ಕರಗುತ್ತ ಕರುಣದಿ
ಪಂಡಿತನು ಪರರಂತರಂಗದೊ-
ಳಂಡಲೆವ ದುಃಖವನತೀಂದ್ರಿಯನರಿದು ನಕ್ಕು ।
ಗಂಡರನು ಕೊಡುವಿರೆನುತ ಮುನಿ
ಮಂಡೆಗಳ ಮೇಲಿಟ್ಟು ಹಸ್ತವ
ಪುಂಡರೀಕಾಕ್ಷೆಯರ ಕಳುಪಿದ ಹೆಂಡತಿಯ ಬಳಿಗೆ ೪೧

ಶಂಭು ಕಂಬುಧರ ಸ್ವಯಂಭು ದಾ-
ರಾಂಬಿಕೆಯರತ್ರಿ ಸತಿ ಪಾ-
ದಾಂಬುಜಕೆ ಶರಣೊಕ್ಕು ದಂಡಪ್ರಾಯದಂದದಲಿ ।
ಎಂಬತ್ತು ನಾಲ್ಕು ಲಕ್ಷ ಜೀವ ಕ-
ಬಂಧವ ಬೊಂಬೆಗಳಂತೆ ಕುಣಿಸುವ-
ರಂಬೆಗಾಲಿಕ್ಕಿ ಆಡಿಸುವ ಮಹಿಮಾಂಬುಧಿಗೆ ಶರಣು ೪೨

ಒಬ್ಬ ಜಗದುದಯಕೆ ಕರ್ತನು
ಒಬ್ಬನುದಯದ ಸ್ಥಿತಿಯ ಮಾಡುವ
ಒಬ್ಬ ಸ್ಥಿತಿಯನು ಲಯಕೆ ತರುವನು ತ್ರಿಗುಣಭಾವ
ಹಿಡಿದು । ಒಬ್ಬರೊಬ್ಬರ ಸ್ತೌತ್ಯ ಮಾ-
ಡಬ್ಬರದ ಸ್ತುತಿ ಅಡಗಿ ಹೋದರೆ
ಗುಬ್ಬಿ ಕಬ್ಬಿಣ ಕಡಲ ಬೇಯಿಸಿದಳಿಗೆ ಶರಣಾರ್ಥಿ ೪೩

ಶರಣು ಶ್ರುತಿಗಳ ವೃಂದ ವಂದ್ಯಳೆ
ಶರಣು ಪತಿಯನು ಪಿಡಿದ ಹೃದಯಳೆ

ಶರಣು ಪತಿಯಾರಾಧಿಸುವಗ್ರಣಿಯೆ ಗುಣಮಣಿಯೆ ।
ಶರಣು ಜಗದಾರಾಧ್ಯರಾಧ್ಯಳೆ
ಶರಣು ಜಗಕತಿ ಕೀರ್ತಿ ಪಡೆದಳೆ
ಶರಣು ಬಂದರೆ ಸಲಹಿಗೊಂಬಳೆ ದಂಭ ವಿರಹಿತಳೆ ೪೪

ಪರಮ ಪುರುಷೋತ್ತಮರನೀ–
ಪರಿ ದರ ಮಾಡಿ ಸಲಹುವ
ಪಿರಿದು ಮಹಿಮೆಯ ಕೇಳಿ ಬಂದೆವು ಶರಣು ನಿಮ್ಮಡಿಗೆ ।
ಜರಿದುದಪರಾಧೆಮ್ಮ ನೋಡದೆ
ಮರೆದು ಕರುಣಿಸಿ ಮುನ್ನಿನಂದದಿ
ಪುರುಷರಾಕೃತಿ ಮಾಡಿ ತೋರುದೆನಲಿಕನಸೂಯಾ ೪೫

ದೇವಿ ಅವರೆದೆಗಪ್ಪಿ ನಿಮ್ಮಿಂ–
ದಾವು ಕಂಡೆವು ವೇದ ವೇದ್ಯರ
ನೀವು ಮಾಡಿದಪಕಾರದುಪಕಾರ ಸಾಹಸ್ರವಿದು ।
ದೇವಿಯರು ಸಹ ದೇವರನು ಕಾಂ–
ಬುವದಿದೆಡೆಯೊಳಗಪೂರ್ವ–
ವೇ ವಿಪಿನ ವಾಸಿಗಳು ನಾವೆತ್ತೆಮಗೆ ನೀವೆತ್ತ ೪೬

ಎಲ್ಲಿ ಪಾರ್ವತಿ ಶಿರಿ ಸರಸ್ವತಿ
ಎಲ್ಲಿ ವಿಧಿ ಹರಿ ಹರ ತ್ರಿಮೂರ್ತಿಗ–
ಳೆಲ್ಲಿ ನಾವಾರಣ್ಯ ವಾಸಿಗಳೆಲ್ಲಿ ನೀವೆಲ್ಲಿ ।
ಸೊಲ್ಲು ಮನಕೆ ಅಪ್ರಾಪ್ತನಿ–
ರ್ದಲ್ಲಿ ಕಣ್ಣು ಕಂಡ ಕರಗುವ–
ದಲ್ಲ ಸಾಮಾನ್ಯವೆನಲಿಕವರಿಗೆ ನುಡಿಯೆ ಮಗುಳವರು ೪೭

ಬೆಲ್ಲ ಇರುವೆ ನೊಣಗಳನು ಕರಸದೆ
ಬೆಲ್ಲ ತಾವೇ ಬಂದು ಮುತ್ತುವ–
ವೆಲ್ಲಿ ಭೇಷಜರಿರಲಿ ರೋಗಿಗಳಲ್ಲಿಗೊದಗುವರು ।
ಬಲ್ಲವರ ಬೆಸಗೊಂಬುದಕೆ ಪರಿ

ಎಲ್ಲರಿಯದವರು ಹೋಗುವಂತಿಂ–
ದಿಲ್ಲಿಗೆಮ್ಮಯ ಬರವು ಎಮ್ಮಿಂದೆಮಗೆ ಆಯ್ತೆನಲು ೪೮

ಎಂದ ಮಾತಿಗೆ ಮೆಚ್ಚುತೊಳಗಿನ
ತಂದು ಮಂತ್ರೋದಕವ ಪತಿ ಪದ
ದ್ವಂದ್ವ ಸ್ಮರಣೆಗಳಿಂದ ಶಿಶುಗಳ ಮೇಲೆ ಚಿಮ್ಮಿಸಲಿಕೆ ।
ಬಂದವಾಕಾರಗಳು ಮುನ್ನಿ–
ನಂದದೋಳ್ ತ್ರೈಮೂರ್ತಿಗಳಿಗಾ–
ನಂದದಿಂ ಪೊಡಮಡುವದನುಪಮ ಸ್ತೋತ್ರಗಳ ಮಾಡೆ ೪೯

ರನ್ನದಾಸನವಿತ್ತು ಕುಳ್ಳಿಸಿ ಮನ್ನಣೆಂ ದಂಪತಿಗಳನು ಪ್ರ–
ಸನ್ನ ಮುಖದಿಂದಾಗ ಪೂಜಾದ್ರವ್ಯ ಪರಿಕರವು ।
ಕನ್ನಡಿ ಕಲಶವನು ತಾನೊದಗಿಸಿ
ತನ್ನೊಡೆಯನೊಡನೆ ಏಕಚಿತ್ತದಿ
ಭಿನ್ನ ಭಾವನೆ ಮರೆದು ಮಧುಪರ್ಕಾದಿ ವಿಧಿಯಿಂದ ೫೦

ಷೋಡಶೋಪಚಾರರ್ಚನಾ ವಿಧಿ
ಮಾಡಿ ತ್ರೈಮೂರ್ತಿಗಳ ಸತಿಯರು
ಗೂಡಿ ಬಹುವಿಧ ವಾದ್ಯ ಘೋಷಗಳಿಂದ ನಲಿದಾಡೆ ।
ಪಾಡೆ ನಾರದ ಹರುಷದುಬ್ಬಿನ
ಗಾಢ ಮದ ಹೆಚ್ಚಿ ಅಚ್ಯುತರು ಕೂ
ಗ್ಯಾಡುತಾಡುತ ಕೂಗಿ ಕುಣಿಯಲು ದೇಹ ಮರವಾಗೆ ೫೧

ಮತಿ ಮನಗಳನು ಮೀರಿ ಶಾಸ್ತ್ರದ
ಗತಿಗೆ ಗತಿತಾವಾಗಿ ಮೋಕ್ಷೋ–
ನ್ನತಿಯ ನೆಲಕಲೆಯರಿದು ಬದ್ಧತ್ವಂ ಮುಸಿಯಿಂದು ।
ಅತಿಶಯಾನಂದಾಬ್ಧಿಯೋಳ್ ಸಂ–
ಗತಿ ಪಡೆದು ಸ್ವಾನುಭಾವದಿ
ಇತರ ನದಿ ನಿಧಿಯತ್ತ ಭಾವವು ಪ್ರಳಯ ಜಲದೊಳಗೆ ೫೨

ಭಕ್ತ ದೇವರ ಭಾವದೋಳ್ ನಿಜ
ಮುಕ್ತಿ ದೊರೆವುಗುತ್ತಲಿಪ್ಪುದು
ಭಕ್ತಿಯಿಂದ ಭಾವ ಭಾವನೆಯಿಂದ ಮಹಾದೇವಾ ।
ಭಕ್ತರೆಲ್ಲ ದೇವ ಪ್ರಕಟಿಸಿ
ಭಕ್ತಿ ಪಥಕನವಸ್ಥೆ ಕಂಡ–
ವ್ಯಕ್ತ ವ್ಯಕ್ತರು ಭಕ್ತರನು ಎದೆಗಪ್ಪಿ ಎಚ್ಚರಿಸಿ ೫೨

ನೀವು ನಿಮ್ಮ ಸ್ವಯಾನುಭವಿಗಳು
ನೀವು ನಿಮ್ಮ ಸ್ವರೂಪ ರೂಪರು
ನೀವು ನಿಮ್ಮೊಳು ನಿಮ್ಮ ನಿಮ್ಮೀ ನೀವೆ ತಿಳಿದವರು ।
ನೀವು ನಿಮ್ಮೊಳಗಾದ ಬಳಿಕೇ–
ನವಸ್ಥೆಮಗೆಂದು ಎಚ್ಚರ
ಭಾವದೋರಿಸಲಿವರು ಪದ ಪದುಮಕ್ಕೆ ಮಗುಳೆರಗಿ ೫೪

ನಿಮ್ಮಹಿಮೆ ನಾರದನು ಪೊಗಳಲಿ–
ಕೆಮ್ಮರಸಿಯರು ಮತ್ತೆಮ್ಮ ಕಳುಹಲು
ಸುಮ್ಮನಿರದೆಮ್ಮತನ ಮರೆಸಿ ಆರು ತಿಂಗಳನು ।
ನಿಮ್ಮನಿಯೊಳತಿ ಸುಖದೊಳೆಮ್ಮನು
ಝುಮ್ಮನೀಪರಿ ಶಿಶುತನಕೆ ತಂ–
ದೆಮ್ಮ ತೊಟ್ಟಿಲೊಳಿಟ್ಟು ರಕ್ಷಣೆ ಮಾಳ್ಪದನು ಕೇಳಿ ೫೫

ಅರಸೆಯರು ಬರಲಾಶ್ರಮಕ್ಕವ
ರಿರಿಸಿಕೊಂಡುದರದೊಳೆಮ್ಮನು
ಹರಿಸಿ ಮೊದಲಿದ್ದಂತೆ ಮಾಡಲಿಕವರ ಸಂತೋಷ ।
ಅರಿಯದಾಯಿತು ಜಾಡೆ ಸಾಲದೆ
ಹರಿಯಲಿಕ್ಕೆಮ್ಮರ್ಭಕತ್ವವು
ಕರಗದುಳಿಯಿತು ಹಸವು ದ್ವೈಪಕ್ಷಿಸುತಲವರು ೫೬

ಕರೆದರನಸೂಯ ಅತ್ರಿದೇವರಿ–
ಗೊರೆದು ತಾವ್ ಸತ್ಸಂಗತಿಗಳ

ತೊರೆದು ಹೋಗುವದಕಟ ನೀವ್ ನಮಗೊಂದು ವರವನು ।
ಹರುಷದಿಂ ಬೇಡುವದು ಎಮ್ಮಯ
ಹರುಷಗೋಸುಗವೆನಲಿಕಸೂ–
ಯರಸಿ ಋಷಿ ಪತ್ಯೇಕಭಾವದಿ ಚರಣ ಪಿಡಿದವರ ೫೭

ಬೇಡಿಕೊಂಡರು ದೇವ ದೇವರ
ನೋಡಿ ಕಂದರಂತೆಲ್ಲರು
ಗೂಡಿ ಆಡುವ ದೇವರನು ಕೊಂಡಾಡುತಲಿ ಮುದದಿ ।
ಬೇಡುದೇನೊಂದದನು ಸಿದ್ಧಿಯ
ಮಾಡಿಕೊಡುವದು ನೀವು ಮೂವರು
ಗೂಡಿ ಒಂದಾಗೆಮ್ಮ ಬಸುರಿಂ ಬರವ ಬಯಸುವೆವು ೫೮

ಕುತ್ತು ಹೆಚ್ಚಿರ್ದವನ ಬಯಕೆಯಿಂ–
ತತ್ಯುತ್ತಮ ಇದೇನು ಪೇಳುವಂತಿವ–
ರುತ್ತರವ ಕೇಳುತ್ತಲಿತ್ತೆವಿತ್ತೆವಿತ್ತೆನುತ ।
ದತ್ತವನು ಮಾಡುತ್ತ ಕರಗಳ–
ನುತ್ತಮಾಂಗದೊಳಿಟ್ಟು ತ್ರಿಣಿಯ
ರ್ಮತ್ತೆ ಕಳುಹಿಸಿಕೊಂಡು ಹೋದರು ವಧುಗಳೊಡಗೂಡಿ ೫೯

ದೇವಋಷಿ ಋಷಿಕಾಂತೆ ಋಷಿಗಳ
ಪಾವನಂಘ್ರಿಗೆ ನಮಿಸಿ ತಾ ಮೂ–
ದೇವರೊಡಗೂಡತ್ತ ನಡೆಯಲ್ಕಿತ್ತಲನಸೂಯ ।
ದೇವಿ ಗರ್ಭವು ತಾಳಿ ಏಕಾಂ–
ತಾವ ಕಾಲದಿ ಸೇವಿಸುತ ತನು
ಭಾವನೆಯ ಮರೆದಿರಲು ಮಹಾ ಪುರುಷನ ಸುಸಂಗದೊಳು ೬೦

ಬಯಕೆ ಮತ್ತೊಂದೇನು ಬಯಸದೆ
ಪ್ರಿಯ ಸ್ವರೂಪೊಂದನ್ಯ ಕಾಣದೆ
ನಯನ ಮೊದಲಾದಿಂದ್ರಿ ತಮ್ಮರ್ಥಗಳ ಮರೆದಿರಲು ।
ಸ್ವಯ ಸ್ವರೂಪದಿ ಕರಗಿರಲು ಮನ

ಲಯ ಉದಯ ಸ್ಥಿತಿ ಗತಿಯ ಮೀರಿದ
ಭಯ ರಹಿತನೊಡಲೊಳಗೆ ಧರಿಸಿರುತಿರಲಿಕಾ ದೇವಿ ೬೧

ಮಾಸ ಒಂಬತ್ತಾಗಿ ಹೋಹಲು
ಘೋಷ ಮಾಡುತ ವಾದ್ಯವಮರರು
ಸೂಸುತಿರೆ ಪುಷ್ಪಂಗಳನು ಮಹೋತ್ಸಾವ ಕಾಲದೊಳು ।
ಬೇಸರದ ಬೇನೇನು ತೋರದೆ
ದೋಷ ಯೋನಿಯ ಜನನವಿಲ್ಲದೆ
ಭಾಸು ಮಾನದಿ ಕೂಸು ಪಡೆದಳು
ಶುಭ ಮುಹೂರ್ತದೊಳು ೬೨

ಮತ್ತೆ ದಶದಿನವಾದ ಬಳಿಕ–
ತ್ಯುತ್ತಮಗೆ ನಾಮಾಭಿಧಾನವ
ಹೆತ್ತ ಜನನಿ ಜನಕರಿವ ದತ್ತಾತ್ರೇಯೆಂದೆನುತ ।
ಇತ್ತು ನಾಮವ ನಾಮಕರಣವ
ಚಿತ್ತದುಲ್ಹಾಸಿಂದ ಮುಗಿಸ–
ಲ್ಯುತ್ತರೋತ್ತರವಾಗಿ ವರ್ಧಿಸುತಿರ್ದ ದಿನ ದಿನಕೆ ೬೩

ಆಟವಾಡುತ ತೋರಿಸಿದ ಧೂ–
ಳಾಟ ಮೊದಲಾಗೆಲ್ಲ ಸರ್ವರ
ನಾಟವಾಡುತವನಾಟ ವಿಚಿತ್ರವಾಗಿರದೆ ? ।
ಸಾಟೆ ಪಾಟಗಳಿಲ್ಲದಿರುವ–
ಚಾಟ ಲೀಲಾರಚನೆ ಕಾಣುತ
ಕೋಟಿ ಪುಣ್ಯದ ಫಲವಿದೆಮಗೆನುತವರು ನಲಿವುತಿರೆ ೬೪

ಇಂತು ವರುಷೆಂಟಾಗಲಿಕೆ ಸಮಾ–
ನಂತರದೊಳುಪನಯನ ಕಾಲವು
ಬಂತು ಪುತ್ರಂಗೆಂದು ತಾಯಿ ತಂದೆಗಳು ಯೋಚಿಸುತ ।
ಸಂತಸದಿ ಯಾಜಕರ ಇಚ್ಛೆಗ–

ಳಂತೆನಿತನೆಲ್ಲವನು ಪೂರೈ-
ಸಂತರಿಸದುಪನಯನ ಸಾಂಗೋಪಾಂಗದಿಂ ಮಾಡೆ ೬೫

ವೇದ ಶಾಸ್ತ್ರಾಭ್ಯಾಸ ಮೊದ-
ಲಾದದುದಾತ್ತಗೆ ಸಾಧ್ಯವೆಂಬುದು
ವೇದ ವೇದಾಂಗದಲುಪಮಿಸಲವಗೆ ಸರಿಯಾರು ।
ಆದಿ ಗುರು ಜಗಕೆನಿಸಿ ಬೋಧದ
ಹಾದಿ ತೋರುತ್ತಲುದ್ಧರಿಸಿತಿಪ್ಪಾ-
ದಯಾಂಬುಧಿ ಸ್ವೇಚ್ಛೆ ಪ್ರಾಪ್ತಿಯ ಪಡೆದು ದತ್ತಾತ್ರಿ ೬೬

ಸ್ನಾನ ಕಾಶೀಕ್ಷೇತ್ರದೊಳಿ-
ಪ್ಪಾನದಿಯೊಳುದಯಕ್ಕೆ ನಿತ್ಯವು
ಬೋನ ಭಿಕ್ಷಾಗುವದು ಕೊಲ್ಹಾಪುರದಿ ಮಧ್ಯಾಹ್ನಕೆ ।
ಆ ನಗರ ಮಾಹೂರಕ್ಕೈದುವ
ಭಾನುವಸ್ತದಿ ನಿದ್ರೆಗೋಸುಗ ನಿದಿ-
ಧ್ಯಾನದೋಳ್ ಯಾತ್ರೆ ಗಟಿಪುದು ನಿಬ್ಬರ ೬೭

ಶ್ರೀಗುರು ದತ್ತಾತ್ರೇಯಾಖ್ಯಾ-
ನಾಗಮಕಗೋಚರವಲಾ ಎನ-
ಗೀಗಳದರಂತರವ ತಿಳಿಯದೆ ವ್ಯಾಖ್ಯ ಮುಖದಿಂದ ।
ಹೀಂಗಿದಹುದೆಂದರಿದು ಪೇಳ್ವರಿ-
ಗೋಗಿ ಬೆಸಗೊಂಡನುಭವಿದವವ
ನಾಗಲಿಲ್ಲದಕಾಗಿ ಬಿನ್ನಹ ಮಾಳ್ಪೆ ಬಲ್ಲರಿಗೆ ೬೮

ಭುವನ ಜನರೋಳ್ ಮಧ್ಯಮರು ಒಂ-
ದಿವಸ ದತ್ತಕಥಾಪ್ರಸಂಗದಿ
ವಿವರಿಸೆಲ್ಲೆನುತ ನಿತ್ಯ ಶ್ರವಣಕೆ ಹೋಗಿರಲು ।
ಭವ ರಹಿತನಾಖ್ಯಾನವನು ಮಾಡುವ
ಬಯಕೆ ಎಳ್ಳಷ್ಟು ಮನಸಿನಾ-
ಳವಂತರಿಸದಿಪ್ಪವನ ಮುಖದಿಂದಾದುದೆಂತೆನಲು ೬೯

ಅತ್ರಿಪುತ್ರನ ಭಕ್ತನೊಬ್ಬ
ಧರಿತ್ರೆಯಮರರದೊಳುತ್ತಮನು ಸಚ-
ರಿತ್ರನಾ ದತ್ತಾತ್ರೇ ಮೇಲೊಂದಾರತಿಯ ಪದಕೆ ।
ಮಿತ್ರ ಭಾವನೆಯಿಂದ ಎನ್ನ ಪ-
ವಿತ್ರ ಮಾಡುದಕಗ್ರಮಾಡಲಿ-
ಕುತ್ತ ಮನ್ನಿಸಲಿಂತು ಹಬ್ಬಿತು ತಿಳಿಯದಾದ್ಯಂತ ೭೦।

ಪರಾಪೇಕ್ಷಿಂದಾದ ಕಥೆಯಿದ-
ನರಿಯದಗ್ರತೆಯಿಂದಲುಸುರಿದೆ
ಪರಮ ಪುರುಷರು ಪೂರ್ಣ ಕರುಣದಿ ನೋಡುದಿದರೊಳಗೆ ।
ಹರಿದು ಹೋದನುಸಂಧಾನವಾಲಿಸಿ
ಹಿರಿಯರು ತಿದ್ದಿಕೊಂಬುದು
ಪರಮ ಮೂರ್ಖನ ಬಿನ್ನಪವನತಿಗಳೆವುದನುಚಿತವು ೭೧

ಅನುಚಿತುಚಿತಂಗಳನು ನೋಡುದು
ಮನದವಗುಣ ಸ್ವರೂಪವು
ಘನವ ಮನಮತಿಗಾಶ್ರಯಾಗಿರೆ ಲಕ್ಷಣೆನಿಸುವದು ।
ಅನುಭವಿಕರಿಗೆ ಸಮಭಾವನಾ-
ದನುಭವೆಂದಿಗೆ ಪುದುದೆಂತದ-
ರನುವ ತಿಳಿಯದೆ ಕಾರಣನು ಬಿನ್ನಪಿವೆನವರಡಿಗೆ ೭೨

ತಾವು ತಮ್ಮಿಂ ತಾವೆ ತಾವೆ
ದಾವ ಕಾಲದಿ ತಮ್ಮ ತಮ್ಮೊಳು
ಭಾವಿಸುವ ಭಾವನೆಯ ಭಾವಿಪದೆಲ್ಲವನು ಮರೆದು ।
ಕೇವಲಾನಂದಾನುಭವವೆ
ಭಾವಮೋಘಸ್ವಭಾವದಿರುವರ
ಪಾವನಾಂಘ್ರಿಗೆ ಸ್ಮರಣೆ ಪಡೆದರೆ ಪಾಪ ಪರಿಹಾರ ೭೩

ಪಾತಿವ್ರತೆಯಾದನಸೂಯಾತ್ರೇಯ
ಧಾತು ಹರಿ ಹರ ಮಾ ಉಮಾ ವಾಣಿ

ತಪೋನಿಧಿ ಸುರಮುನಿಪ ದತ್ತಾತ್ರೇಯಾದಿಗುರು ।
ಶ್ವೇತನದಿ ವಿಶ್ವೇಶ ಕಾಶೀ
ಖ್ಯಾತಿ ಕೊಲ್ಹಾಪುರ ಮಹೋರವ
ಪ್ರೀತಿಯಿಂದುದಯಕ್ಕೆ ಸ್ಮರಿಪರ ಪುಣ್ಯಕೆಣೆಯುಂಟೇ ೭೪

ಆರಿಗುತ್ತಮ ಸದ್ಗತಿ ಬೇಕಾ
ಋಷಿ ಶ್ರೇಷ್ಠಾದಿ ಗುರುವಿನ
ಚಾರು ಚರಣಾಂಬುಜವನನುದಿನ ಸ್ಮರಣೆ ಮಾಡುವರ ।
ಹಾರಿ ಹೋಯಿತು ದೇಹಭಾವವು
ಸಾರತರ ಸದ್ಗುರು ಕೃಪಾತು–
ಷಾರದಿಂ ನಡೆದೀ ಕಥಾಮೃತ ಶಂಕರಾರ್ಪಿತವು ೭೫

ದತ್ತಾತ್ರೇಯ ಷಟ್ಪದಿ ಸಂಪೂರ್ಣಮಸ್ತು ಶಂಕರಾರ್ಪಣಮಸ್ತು

# ಜಕ್ಕಪ್ಪಯ್ಯನವರ ಬಿಡಿ ಹಾಡುಗಳು

೨೭ - ೭೧

## ೨೭

ಘನಾನಂದ ನಿಬಿಡವು ತಾನೇ ತಾ ।
ಮನಬುದ್ಧಿಗಳು ಏನಿಲ್ಲ ಪ

ಮಹಾ ಮಾಯಾ ಮಾಯಾ ಅವ್ಯಾಕೃತಿ ।
ಆ ಹಿರಣ್ಯಗರ್ಭ ವಿರಾಟಲ್ಲ ೧

ಸ್ಥೂಲ ಸೂಕ್ಷ್ಮ ಕಾರಣ । ಮಹಾಕಾರಣ
ಜಾಗ್ರತ್, ಸ್ವಪ್ನ, ಸುಷುಪ್ತಿ ಉನ್ಮನಿ ಬೆಳಕೆಲ್ಲ ॥
ಇದ್ದದ್ದು ಶಂಕರನ ಸುಖವಲ್ಲವೆ ।
ವಿದ್ಯಾ ಅವಿದ್ಯೆಯ ಕಲಕಿಲ್ಲ ॥

## ೨೮

ಇಲ್ಲದಿಲ್ಲಾಗಿ । ಇಲ್ಲದ್ದೆಲ್ಲ ತಾನಾಗಿ ।
ತೋರುವದಾಶ್ಚರ್ಯ । ಆಶ್ಚರ್ಯ ॥
ಸಂಶಯ ಪಾರ ಮಾಡಯ್ಯ ॥
ಶಿಷ್ಯನ ಪ್ರಶ್ನವ ತಿಳಿದು । ಸದ್ಗುರು ಹರ್ಷದಿ
ಪೇಳಿದನೊಲಿದು ೧

ಸತ್ಯ ಸ್ವರೂಪಾಶ್ರಯಿಸಿ ಅಸತ್ಯವು ಸತ್ಯಂತೆನಿಸಿ ॥
ಸತ್ಯಕಿರಣವಿಡಿದು ಮೃಗಜಲವಸತ್ಯವೆ ಆಗಿಹುದು ॥
ದಿಟ ರಜ್ಜುವು ಶಿಂಪಿರುತ ॥ ಆಶ್ರಯಿ ದಿಟವೆನಿಸುವದಹಿ ರಜತಾ॥
ಆಶ್ರಯದಾರೋಪೆಂದು । ತೋರುವದು ಸರೂಪದ
ಧ್ಯಾತೆಂ(ನೆಂ)ದೂ ॥ ಅಧ್ಯಾರೋಪಾಪವಾದಾ ।
ಶಂಕರ ತಾನಿವು ಪುಸಿಯಂದೊರೆದಾ ೫

## ೨೯

ಜೀವನ ಕಳೆಗಳು ಮುಳುಗುವ ತನಕ
ಜೀವನ್ಮುಕ್ತನು ತಾನಲ್ಲ ॥ ಜೀವನ ಕಳೆ ತಾನೇ
ತಾನಾದರೆ । ಜ್ಯೋತಿರ್ಮಯವೀ ಜಗವೆಲ್ಲ ಪ

ಎಲ್ಲ ಪ್ರಪಂಚವು ಸೋಗಿನ ಪರಿಯಲಿ ।
ಪಸರಿಸಿ ತೋರುವದೆಲ್ಲಾ ॥
ಬೆಲ್ಲದ ಮೂಲವು ಕಬ್ಬಿನ ರಸವನು ।
ಅನುಭವ ಯೋಗಿಯೆ ತಾ ಬಲ್ಲಾ ೧

ಮುತ್ತಿನ ಆಕೃತಿ ಬೇರೆ ಬೇರಾದರೆ ।
ತೇಜವೆ ತತ್ತ್ವಗಳೆಲ್ಲಾ ॥
ಮುತ್ತಿನ ಮೂಲವು ಸ್ವಾತಿ ಬಿಂದುವು ।
ಸಿಂಧುವಾದವನೆ ತಾ ಬಲ್ಲಾ ೨

ಸುಮನ ಪರಾಗವು ಬೇರೆ ಬೇರಾದರೆ ।
ಘಮ ಘಮ ಮಕರಂದೆಲ್ಲಾ ।
ಸುಮನ ಪರಾಗವು ಭೃಂಗಾವಳಿ ಸುಖ
ಸದ್ಗುರು ಶಂಕರ ತಾ ಬಲ್ಲಾ ೩

## ೩೦

ನೀನೆ ಪರಬ್ರಹ್ಮಾ ಸತ್ಯವು ನೀನೆ ಪರಬ್ರಹ್ಮಾ । ನೀನೆ
ಪರಶಿವ ನೀನೆ ಪರತರ ನೀನೆ ಪರಮ ಪರ ನಿನ್ನಿಂದ ನೀನ್ಯೆ ಪ

ಅನೇಕ ಕೊಡಗಳೊಳು ರವಿ ತಾ । ಅನೇಕನೆನಿಸಿರಲು ।
ಅನೇಕ ವಾ ಘಟ ಉಪಾಧಿಯಳಿಯಲು ।
ಅನೇಕವೆಲ್ಲವು ಒಬ್ಬನೇ ನೀನ್ಯೆ ೧

ಸರ್ವಾಲಂಕಾರಾ ಕರಗಲು ಸರ್ವವು ಬಂಗಾರಾ ।

ಸರ್ವ ಜಗವೆಲ್ಲವು ನಿನ್ನೊಳಗಿರುವದು ।
ಸರ್ವ ರಹಿತ ನಿಜ ಶರ್ವನೆ ನೀನ್ನೈ ೨

ಮಾಯಾ ಅವಿದ್ಯೆಯೊಳು ಶಿವ ಜೀವ ಕಾಯವು ಬಂದಿರಲು ।
ಮಾಯಾ ಅವಿದ್ಯೆಯ ಪರದೆಯು ಅಳಿಯಲು ।
ಕೇವಲ ಅತಿ ನಿಜ ಶಂಕರ ನೀನ್ನೈ ೩

## ೩೧

ಸ್ವಾನಂದ ಸುಖರೂಪವು ತಾನಿರೆ
ತನ್ನೊಳು ತೋರುವದಿಂತೆಲ್ಲ ಪ

ಘಟವದಾರೋಪಿಸಲದು ಮೃತ್ತಿಕಾ ।
ಪಟಗಳು ತಂತುವಿನ್ಹೊರತಿಲ್ಲ ೧

ವಾರಿಧಿಯೊಳು ತೆರೆ ನೊರೆಗಳು ತೋರಲ್ಕವು ।
ನೀರಲ್ಲದೆ ಅವು ಬ್ಯಾರಿಲ್ಲ ೨

ಸಕ್ಕರೆ (ಇಟ್ಟ) ಫಲ ಸವಿಯಲ್ಲ
ಸಕ್ಕರೆ ಸ್ವಾದನ ಫಾಲಾಕ್ಷನು ಬಲ್ಲ ೩

## ೩೨

ದೇಹ ಮನೇಂದ್ರಿಯವೆಲ್ಲಾ
ಆತ್ಮಸಹಾಯದಿ ಚರಿಸುವವೆಲ್ಲಾ ಪ

ಮೂಢರು ತಿಳಿಯರು ಸುಮ್ಮೋ
ದೇಹವ ಕೂಡುತೆ ಮಾಡಿತು ಹೆಮ್ಮೆ ೧

ವಪು ಜಡವದು ಪ್ರಕಾಶಾ ।

ಸ್ವರೂಪವಿಡಿದಾಗುವದಾಭಾಸಾ ೨

ಪಾವಕನಾಗಿರೆ ಲೋಹವಾಗಿರೆ ।
ಪಾವಕ ಲೋಹದ ಹತಿಗೆ ೩

ಮಾಲಾ ಸರ್ಪವದಾಗೆ ।
ತೋರದೆ ವ್ಯಾಳೆನಿಸುದು ಮಾಲ್ಹೋಗೆ (ಮಾಲೆಹೋಗೆ) ೪

ಅಧಿಷ್ಠಾನ ದೃಷ್ಟಿಯಿಂದಾ ।
ಪ್ರಾಣಿಗೆ ದೊರಕದು ಶಂಕರ ಪದಾ ೫

## ೩೩

ಶಾಂಭವಿ ನಿನ್ನ ಪಾದಾರವಿಂದದಿಂದೆ
ಕಾಂಬುವೆ ಕರಣೇಂದ್ರಿಯ ವ್ಯಾಪಕ ತಾಯಿ ತಂದೆ ಪ

ಅಷ್ಟದಳದ ಕಮಲ ಮಧ್ಯದಲ್ಲೀ ।
ಸ್ಪಷ್ಟ ತೋರುವವೆರಡೂ ದಳದಲ್ಲೀ ।
ಮುಟ್ಟಿ ನೋಡುವರು ಮಹಾತ್ಮರು ಅಲ್ಲೀ ।
ಬಟ್ಟ ಬಯಲಿನ ಹಾದಿ ಬೆಳಗಿಲ್ಲೀ ೧

ಭೃಕುಟದಾಚೆಯಲಿ ಹತ್ತಂಗುಲ ಸ್ಥಾನಾ ।
ತ್ರಿಕೂಟ ಶ್ರೀಹಾಟ ಗೋಲ್ಹಾಟ ಕಾರಣಾ ।
ಜೌಟ ಪೀಠದಿಂದ ಧ್ಯಾನಾ ।
ಪ್ರಕಟವಾಗುವಳು ಭ್ರಮರ ಗುಂಫಾ ಸ್ಥಾನಾ ೨

ಏಕಾಕಾರೀ ಬ್ರಹ್ಮಾಂಡ ಪಿಂಡ ಮೀರಿ ।
ಓಂಕಾರ ನಾದ ಬಿಂದು ಕಲಾಧಾರಿ ।
ಲೋಕೋದ್ಧಾರಕ ಶಕ್ತಿ ಅವತಾರೀ । ಶಾಕಂಬರಿ
ಶಂಕರಗೆ ಶಂಕರೀ ಶಾಂಭವಿ ನಿನ್ನ ಪಾದಾರವಿಂದದಿಂದೆ ೩

## ೩೪

ತೇಲಿಸೊ ನೀ ಮುಳುಗಿಸೊ ।
ನಿನ್ನ ಮಾಯವ ತಿಳಿಯದ ಮೂಢ ಜನರನು ಪ

ವಿಷಯದೊಳಗೆ ಮನ ಬುದ್ಧಿ ಗರ್ಕಾಯಿತು
ಘಸಣೆ ಬಡುವ ದೇಹ ಹ್ಯಾಗೆ ಪಾರಾಯ್ತು ೧।

ಹರ ಬಿಡಿಸು ಮೊರೆಹೋದೆ ದೇವಾ
ಬಿರುಬೆಟ್ಟಿತು ಪರಿಹಾರ ಹ್ಯಾಗ ೨

ಭವನದಿಯೊಳು ಸುಳಿದಾಡು ಹರಗೋಲಕ್ಕೆ
ಶಿವಶಂಕರ ಕಡೆಗೆ ಹಚ್ಚು ಧಡಕ್ಕೆ ೩

## ೩೫

ಯಾಕೆ ಕೈ ಬಿಡುವೆ ದೇವಾ ।
ತ್ರಿಜಗವನು ಸಾಕುವ ನೀನಭವ ॥
ಏಕೋ ಮೂರುತಿ ಶ್ರೀ ವೆಂಕಟ
ಪತಿ ನಿನಗೆ ನಾ ಬೇಕಾದವನಲ್ಲವೆ ಸ್ವಾಮಿ ಪ

ಬಾಲನ ಪತಿಕರಿಸಿ ಹಿರಣ್ಯಕನ । ಸೀಳಿ ರಕ್ಷಿಸಿದಂತೆ ।
ಶ್ರೀ ಲೋಲಾ ಗತಿಯೆಂಬೆ ॥
ಬ್ರಹ್ಮಸುತನಿಗೆ ಪಾಲನ ಮುದ್ರೆಯನಿತ್ತೆ ಸ್ವಾಮಿ ।
ಸಭೆಯೊಳು ದ್ರೌಪದಿ ಸ್ತುತಿಸೆ ನಿನ್ನ । ಅಭಿಮಾನ ಕಾಯ್ದೆ ।
ಗಂಡ ಇಭ ನಕ್ರನೊಳ ..................................
ಧ್ರುವ ಅಂಬರೀಷ ಅಂಗದ ವಿಭೀಷಣ । ಪವನಜ
ರುಕ್ಮಾಂಗದ । ಅವರ ಪಾಲಿಸಿದಂತೆ ರಕ್ಷಿಸು ಬಿಡದೆ ಎನ್ನ ॥
ಭವಹರಾ ಶ್ರೀ ಶಂಕರನಾತ್ಮಸಖಾ ॥

## ೩೬

ಅಡಗುವದು ಘನ ಅಡಗುವದು
ತೋರದಡಗದು ದೃಷ್ಟಿಯಲ್ಲಿ ಪ

ಮಡದಿ ಮಕ್ಕಳು ಮನೆಯ ಬಲ್ಲಿ
ತೊಡಕಿದೆ ಮನ್ಮಥನ ಬಲೆಯಲ್ಲಿ ೧

ನಾನೀನೆಂಬಭಿಮಾನದಲಿ
ಸ್ವಾನುಭವದ ಸುಖ ವ್ಯರ್ಥವೇ ಅಲ್ಲಿ ೨

ದೀಪಕ ಶಂಕರನ ಪ್ರಭೆಯಲ್ಲಿ
ದೀಪ ಕೀಟಕ................. ೩

## ೩೭

ನೀ ಹೋಗುತಲಿ ಬಾಗೂ ।
ಗುರು ಕೃಪೆ ಪಡೆಯುತೆ ಪರಿಭವ ನೀಗೂ ಪ

ನಗಕನಕದ ಪರಿ ಈ ಜಗ ಸೋಗೂ ।
ಜಗದೀಶನ ಸುಖ ಪೊಂದಿ ನೀ ತೂಗೂ ೧

ತತ್ತ್ವಂ ಪದಗಳ ಕಳೆದುಳಿ ವೇಗೂ ।
ಸಚ್ಚಿತ್ಸುಖ ಅಸಿಜ್ಞಪ್ತಿ ನೀನಾಗು ೨

ಪ್ರೇಮಾಮೃತ ಸವಿಯುತೆ ನೀ ತೇಗೂ ।
ಕಾಮದಹನ ಶಿವಶಂಕರನಾಗೂ ೩

## ३८

ಮಾಡೋ ಸುವಿಚಾರ ಸಾಧನಾ ।
ಹವಣಿಕೆಯಲಿ ನಿನ್ನ ಮಾಡೊ ಪ

ಮಾಡಿ ನಿನ್ನ ಕಡಿ ಮೋಹ ಬೇಡಿ ಘನಗೂಡಿನಲ್ಲಿ
ಒಡಗೂಡಿ ಸರ್ಕನೆ । ಮಾಡೊ ಅ. ಪ.

ಶ್ರುತಿ ತತಿಯ ಪೇಳಿಹ ವಚನ ಸತತ ಮಾಡೊ
ನೀ ಮಥನದನಾ । ಇತರ ಭಾವನತಿಗಳೆದು ।
ಶಾಂತಿ ನಿಜ ಸ್ಥಿತಿಯ ತಾಳಿ ಸದ್ಗತಿ
ಪಡೆಯೊ ನೀ ಮಾಡೊ ೧

ಪರಿ ಪರಿಯ ಜನ್ಮಂಗಳನು । ಧರಿಸಿ ಬಟ್ಟಿ
ಬಹುಕ್ಲೇಶವನು ಪರಿಹರಿಸಿ
ಗುರುವರನ ಕರುಣದಿಂದರಿತುಕೊಳ್ಳೊ
ನಿನ್ನರಿವು ನೋಡಿ ನೀ ಮಾಡೊ ೨

ಸ್ಥೂಲ ಸೂಕ್ಷ್ಮ ಕಾರಣದುದಯಾ ।
ಮೂಲ ಉನ್ಮನಿ ಕೀಲ ಸಾಕ್ಷಿಯನುಕೂಲ
ಶಂಕರನ ಲೀಲೆ ನೋಡಿ ನೀ ಮಾಡೊ ೩

## ३೯

ನರ ಕುರಿ, ಗುರು ನರನೆಂಬಾ ಪಾತಕಿ
ನರಕಾಲಯ ಪಡಕೊಂಬಾ ।
ಹರ ಹರ ಪಶು ಪ್ರಾಣಿ ಪಶು ಪ್ರಾಣಿ ।
ಮಾಡಿದಿ ನರತನು ಹಾನಿ ಪ

ಹಾನಿಯರಿಯದೆ ಅಜ್ಞಾನಿ ತಿರುಗುವಿ ।
ನಾನಾ ಪರಿ ಪರಿ ಯೋನಿ ೧

ಪರಿ ಪರಿಯೋನಿಗೆ ಬರುವಾ ಗುರುಗಳ ।
ಪರಿಚರ್ಯವ ಮರೆದಿರುವಾ ೨

ಮರವೆ ತನ್ನಿಂದಾಯಿತೇನೊ
ತಿರುಳು ತೆರೆ ಅನಂತಪಘಾತವನೂ ೩

ಅಪಘಾತಕ ಮನದವಗೆ
ಶಂಕರ ಕೃಪೆಯೆಂತಾಗುವದವಗೆ ೪

## ೪೦

ಸಾಕ್ಷಾತ್ ಶಿವ ಜಗದೊಳಗೆ ಭವದಿ ಬಂದಿರೆ ಬಳಿಗೆ ।
ನರನಲ್ಲಾ ನರನಲ್ಲಾ ಗುರುವರ ಪರನು ॥ ನರನಲ್ಲ ನರನಲ್ಲ ಪ

ಅಲ್ಲಹುದೆಂಬುದು ಭ್ರಾಂತೀ ॥
ಗುರುವಿಂದಲ್ಲದೆ ಆಗದು ಶಾಂತೀ ॥ ನರನಲ್ಲ ನರನಲ್ಲ ೧

ತಮ್ಮಂತಲೆ ನೋಡುವರು । ದೇಹದ
ಹಮ್ಮಿಂದಲೆ ಕೆಡುತಿಹರೂ ॥ ನರನಲ್ಲ ನರನಲ್ಲ ೨

ಭ್ರಾಂತದ ಮಾತೂ ಗುಹ್ಯೇಕಾಂತದಿ ।
ಇಹುದೇನೋ । ನರನಲ್ಲ ನರನಲ್ಲ ೩

ಗುರುಶಂಕರ ಪರಬ್ರಹ್ಮ ಒಂದೆ ಎಂದೊದರಿತೊ
ಶ್ರುತಿ ನಿಯಮಾ ॥ ನರನಲ್ಲ ನರನಲ್ಲ ೪

## ೪೧

ಸ್ವಾಮಿ ನೀ ಮಾಡಿದುಪಕಾರಾ ಕಿಂತು ಪಾಮರನ ಪ್ರತಿ
ಉಪಕಾರಾ । ಭೀಮಾಶಂಕರ ಗುರುವಾಗುವ ಪ್ರಕಾರಾ ।
ಈ ಮನಕೆ ಎಂದಿಗೆ ತೋರದಾಕಾರಾ ॥ಸ್ವಾಮಿ॥ ಪ

ಲಕ್ಷ ಎಂಬತ್ತು ಮೂರೊಂದನು । ಯೋನಿ ಕುಕ್ಷಿಯೊಳಗೆ
ಹೊಕ್ಕು ಬಂದೆನೊ । ಭಕ್ಷ್ಯಾಭಕ್ಷ್ಯವ ಮೆದ್ದೆನು ।
ಅನುಪೇಕ್ಷಿಯೊಳಗೆ ಮುಳುಗಿದ್ದೆನೋ । ಭಿಕ್ಷುಕರೊಡೆಯ
ನಿರೀಕ್ಷಿಸಿ ಕೃಪಾ ಕಟಾಕ್ಷದಿ ಸದ್ಗುರು ರಕ್ಷಿಸಿದಂಥಾ ೧

ನೀರೊಳು ಜೀವಿಸುತಿದೆ ಮೀನಾ ।
ನೀರು ಕಾರಣವರಿಯದು । ಆ ಮೀನಾ ।
ಪಾರವಿಲ್ಲದಂಥದೀ ಮೀನಾ ।
ಪರವಸ್ತು ಖೂನನರಿಯದು ಮನ ಮೀನಾ ।
ನಾರೇರ ನೋಟಕ್ಕೆ ಸೇರಿ ತಾ ಹೋದೀತು ।
ಸಾರವಸ್ತುವ ತಂದು ತೋರಿಸಿದಂಥ ೨

ತನುವು ತನ್ನೊಳಗೆ ತಾ ತೋರದು ।
ತನು ಮನದ ವೃತ್ತಿಗೆ ತಾ ಬಾರದು ।
ಜನನ ಮೃತ್ಯಂಗಳು ದೋರದು ।
ಎನಗೆ ಸಾಧು ಸಜ್ಜನ ಸಂಗ ದೊರಕದು ।
ಘನ ಗುರುಶಂಕರ ಚಿನುಮಯರೂಪ- ।
ದನುಭವಕೆ ತಂದು ಎನಗೆ ನೀ ಕೊಟ್ಟಂಥ ೩

## ೪೨

ಸ್ವಾಮಿ ಶಂಕರನಿರಲಿಕ್ಕೆ ಕಾಮದ ಕಳವಳಿಕೇಕೆ ಪ

ಗುರುನಾಮ ನಿಧಾನಿರಲಿಕ್ಕೆ । ಎನಗಿಲ್ಲೆಂಬುವದೇಕೆ ಅ.ಪ.

ಅನಾಥ ಬಂಧು ಅನುದಿನ ಎನಗಿರೆ ।
ಅನುಕೂಲದ ಚಿಂತ್ಯಾಕೆ ।
ತನುಮನಧನದೊಳು ತಾನೆ ತಾನಿರಲು ।
ಅನುಮಾನಿಸಲಿನ್ಯಾಕೆ ಸ್ವಾಮಿ ೧

ದಾತನೊಬ್ಬ ಶ್ರೀನಾಥ ಎನಗಿರಲು ।
ಯಾತಕೆ ಪರರ ದುರಾಶೇ ।
ಮಾತು ಮಾತಿಗೆ ತೋರುವ
ಸದ್ಗುರು ತೇಜಃ ಪುಂಜಗಳ್ಯಾಕೆ ಸ್ವಾಮಿ ೨

ದೊಡ್ಡದು ಸಣ್ಣದು ಧಡ್ಡನು ಜಾಣನು ।
ಎಂದೆಣಿಸುವದಿನ್ಯಾಕೆ । ಗುಡ್ಡದ್ಹಾಂಗ
ಶ್ರೀ ಶಂಕರನಿರಲು ದುಡ್ಡಿನ ಹಂಗುಗಳ್ಯಾಕೆ ಸ್ವಾಮಿ ೩

## ೪೩

ಲಿಂಗ ಬಂದ ನೋಡೊ ಶಂಕರ ಲಿಂಗ ಬಂದ ನೋಡೊ ।
ಅಂಗಜನುರುಹಿದ ಮಂಗಳ ಮೂರುತಿ ।
ತಿಂಗಳ ಸೂಡಿದ ಕಂಗಳ ಮೂರುಳ್ಳ ಪ

ಸುರಗಂಗಾಧರನೂ ಪಾರ್ವತಿವರ ಪರಮೇಶ್ವರನೂ ।
ಪರಮ ಪುರುಷ ಪರಾತ್ಪರ ಪರತರ । ಸ್ಥಿರ
ಚರವಣು ತೃಣ ಭರಿತ ಸದಾಶಿವ ೧

ಗಜ ಚರ್ಮಾಂಬರನೂ ಪುರಹರ ಭುಜಗ ಭೂಷ
ಹರನೂ । ಅಜಸುರ ವಂದಿತ ತ್ರಿಜಗ ವ್ಯಾಪಕ ।
ಸುಜನರಿಗಿತ್ತ ಸುನಿಜಪದ ಮಹ ಘನ ೨

ಆರು ಚಕ್ರ ಮೀರಿ ಸಹಸ್ರಾರ ಮನೆಯನ್ನೇ ಸೇರಿ ।

ಸಾರಾಸಾರ ವಿಚಾರ ರಹಸ್ಯವ-
ಪಾರ ಪರಾತ್ಪರ ಗುರುತರ ಶಂಕರ ೩

## ೪೪

ಭಕ್ತರ ಪ್ರೇಮಿ ಫಕೀರ ಸ್ವಾಮಿ । ಭಕ್ತರ ನಿರ್ಮಿಸಿ
ಭಕ್ತಿಯ ಪ್ರಕಟಿಸಿ । ಯುಕ್ತಿಯ ಬೋಧಿಸಿ । ಶಕ್ತಿಯ
ನೊದಗಿಸಿ । ತ್ಯಕ್ತ ವಿಷಯ ವಿರಕ್ತಿಯ ಸೇರಿಸಿ ।
ಮುಕ್ತನೆನಿಸಿ ಅವ್ಯಕ್ತವ ಕರಗಿಸಿ ೧

ಬೋಧವ ಬೋಧಿಸಿ ಭೇದವ ಭೇದಿಸಿ ।
ವಾದವ ಅರಗಿಸಿ ಕ್ರೋಧವ ಕರಗಿಸಿ ।
ಛೇದ-ವಿಚ್ಛೇದದ ಹಾದಿಯ ಹಾರಿಸಿ
ಓದುವ ನುಡಿ ವೇದಾಗಮವಾದವು ೨

ನೀನೇ ನಿನ್ನ ನೀನೆ ನಿನ್ನೊಳು ನೀನೆ ಜಗದೊಳು
ನೀನೆ ಎನ್ನೊಳು ನೀನೆ ಸರ್ವವು ನೀನೆ ಎಲ್ಲವು ।
ನೀನೆ ನಿನ್ನೊರತೇನೊಂದಿಲ್ಲ ೩

ಶ್ರುತಿ ಸ್ವ .............. ನಿಂತವು
ಸ್ಮೃತಿಗಳು ನಿಂತವು .........................
ಮತಿಗಳು ಸ್ತುತಿಗಳದ ನಿಮ್ಮ ನಾ ಕಂಡು ೪

ಮಾರ ಮದ ಸಂಹಾರ ತಿಸರ ಆಸಾರ ಸುಖ ಸಾಕಾರಾ ।
ಶಂಕರ ಶೂರಾ ಭವ ಭಯಹಾರಾ
ಶ್ರೀ ಫಕೀರ................... ಜಗದೋದ್ಧಾರ ಸದ್ಗುರು ೫

## ೪೫

ಮರೆಯದಿರು ಮರೆಯದಿರು ಗುರುರಾಯನ ।

ಲೋಕ ಪರಿಪಾಲಿಸುವ ಗುರು ಸಾರ್ವಭೌಮನ್ನ ಪ

ಪರಮೇಶ್ವರನು ತಾನೆ ಪರಮ ಪ್ರೇಮದಿಂದ ಗುರು ರೂಪವನು
ಧರಿಸಿ ಧರೆಗೆ ಬಂದು, ತ್ವರದಿಂದ ಮಾನವರ ಮರವೆಯನು
ಪರಿಹರಿಸಿ । ಸ್ಥಿರ ಮುಕ್ತಿ ಸುಖವಿತ್ತು ಪೊರೆವ ಗುರುವರನ ೧

ಕರುಣದಿಂ ಜನರ ರಕ್ಷಿಸುವ ಸದ್ಗುರುವರನ । ಶರಣು ಪೊಕ್ಕರೆ
ಕೃಪಾ ಸುಧೆಗರೆವನ । ನಿರುತದಲಿ ಭಕುತರಿಗೆ । ನಿರತಿಶಯ
ಸೌಖ್ಯವನು ಸರಿದಂತೆ ವರವಿತ್ತು । ಮೆರೆವ ದೇಶಿಕನ ೨

ಕುವರ ಬಾರೆಂದಭಯ ಕರವ ಶಿರದಲ್ಲಿರಿಸಿ ।
ನೆರೆ ಸುಬೋಧೆಯಗೈದು ನರಭಾವ ಕಳೆದು ।
ಮರಣ ಭಯ ಹರಸಿ । ಬಹು ಹರುಷದಿಂದಿರು
ಎಂದ ಚಿರ ಸಿಂಧುಗಿಯವಾಸ । ಗುರು ಶಂಕರನ ಪಾದ ೩

## ೪೬

ಮಂಗಲಾ ಸ್ವಸಿದ್ದ ಸಿದ್ಧಗೆ ಮಂಗಲಾ ಸ್ವಶುದ್ಧ ಶುದ್ಧಗೆ ।
ಮಂಗಲಾ ಸ್ವಬುದ್ಧ ಬುದ್ಧಗೆ ಸದ್ಗುರೇಂದ್ರನಿಗೆ
ಜಯ ಮಂಗಲಾ ಪ

ಆದಿಮಧ್ಯಾವಸಾನವಿಲ್ಲದೆ ನಾದ ಬಿಂದು ಕಳಾ ವಿಹೀನಗೆ ।
ವೇದ ವೇದಾಂತದ ವಿಚಾರವ ತಿಳಿದ ನಿಶ್ಚಲಗೆ ।
ಸಾಧು ಸಂತ ಮಹಾನುಭವಿಗಳು ಸಾಧಿಸುವ
ವರಬೋಧ ಬೋಧಗೆ । ವಾದ ಮನ
ಬುದ್ಧ್ಯಾದಿ ಉದಯಾದಿಕವ ಲಕ್ಷಿಪಗೆ ೧

ವಿಶ್ವತೋ ಮುಖ ವಿಶ್ವನೇತ್ರನು ವಿಶ್ವಪಾಣಿ
ಪಾದ ಶೀರಿಷ । ವಿಶ್ವದೊಳಹೊರಗೇಕ ।
ಮಯನಾ ಸೂತ್ರನು ಮಣಿಯಂತೆ । ವಿಶ್ವವನ್ನುದ್ಧರಿಸ–

ಲೋಸುಗ ವಿಶ್ವದೊಳಗವತರಿಸಿ ಸಾಕ್ಷಾದೀಶ್ವರನು
ಕಲಿಯುಗದಿ ವಿಶ್ವಾಮಿತ್ರ ಗೋತ್ರದೊಳು ೨

ಪರಮ ಪುರುಷನು ಸ್ವಪ್ರಕಾಶನು ನರಾಕೃತಿಗೆ
ತಾ ಬಂದು ಶಿಂಧಾಪುರದಿ ಗುರುನಾಥನು–
ದರದಿ ಕರಣಿಕನ್ವಯದಿ । ಸರಸ ಲೀಲಾ ನಟನೆ
ನಟಿಸುತ ತೆರಳಿ ಭ್ರಮರಾಪುರಕೆ ಸದ್ಗುರು ವರ ಕೃಪೆಯ
ತಾ ಪಡೆದು ಜಗದೊಳು ಖ್ಯಾತಿ ಪಡೆದಂಗೆ ೩

ಅಂತು ಇಂತೆನಬಾರದಾ ನಿಶ್ಚಿಂತ ರೂಪನು ಬಳಿಕ । ಸಂತ
ಮಹಾಂತನು ಸ್ತುತಿಸಲಾತ್ಮ ಸುಬೋಧ ಬೋಧಿಯಲಿ ॥
ಅಂತರಂಗದ ಭ್ರಮೆಯನಳಿದೇಕಾಂತ ಭಾವಿಕ ಭಕ್ತರಿಗೆ ವಿ–
ಶ್ರಾಂತವಾದ ಸ್ವ–ಪದದೊಳುದ್ಧರಿಸಿದಾತಂಗೆ ೪

ಸ್ಪರ್ಶ ದರ್ಶನದಿಂದೆ ಝುಗ ಝುಗ ಧರಿಸುತಲಿ ನಾನಾ ವಿ–
ಚಿತ್ರಾಚರಣವನು ಚರಿಸುತ್ತ ಸದ್ಗುರು ರಾಯ ಕಡೆಯಲ್ಲಿ,
ಪರಮ ಹಂಸಾಶ್ರಮವ ಕೈಕೊಂಡಿನಿತು
ಕೆಲಕಾಲದಲಿ ಶಿಂಧಾಪುರದಿ
ಸ್ವ–ಸ್ಥಾನ ದೊಳು ಸಹಜ ಸಮಾಧಿ ಸ್ಥಳದಲ್ಲಿ ೫

ಶಾಲಿವಾಹನ ಶಕೆಯ ಶತಕತಿ ಮೇಲೆ ಐವತ್ತಾಗೆ ಮೂರನು ।
ಕಾಲು ದಕ್ಷಿಣ ಅಯನ ಸಂವತ್ಸರ ವಿರೋಧಿಕೃತು ।
ಕಾಳ ದ್ವಿತಿಯಾಮಾಸ ಆಶ್ವೀನ ಮೇಲೆ ಶಿವ ಬುಧವಾರ
ಕರ್ಣ ವಿಶಾಲಿ ಗರ್ಜಾ ಭರಣೆ ಪ್ರಥಮ
ಪ್ರಹರ ಸಮಯದೊಳು ೬

ಆ ಸುದಿನದೊಳಗಾ ಮಹಾ ಸಂತೋಷ ಕಾಲದಿ
ಸುರರು ಪೂಮಳೆ ಸೂಸುತಿರೆ ಬ್ರಹ್ಮಾದಿಕರು ಸ್ವಸುಖದಿ
ನಲಿದಾಡಿ । ಏಸು ಕಾಲದ ಸುಕೃತ ಫಲವಿದು ವಸ್ತು

ಕಣ್ಣಲಿ ಕಂಡೆವ್ಯೆ ಉಲ್ಲಾಸವೆನುತ ಸಮಸ್ತ ಸುರ
ಜಯ ಘೋಷ ಮಾಡುತಲಿ ೭

ನಿಜ ಪರಂಧಾಮಕ್ಕೆ ಸದ್ಗುರು ಬಿಜಯ
ಮಾಡಿದನೆಂಬ ಮಹಾಶಯ । ಸುಜನರೆಲ್ಲರು
ಬಲ್ಲರಿದನು ಲೋಕಕಿದು ಸತ್ಯ ॥ ತ್ರಿಜಗವೇ
ಪುಸಿಯೆಂಬ ಮಹಾತ್ಮಗೆ ತ್ಯಜನವೆಲ್ಲಿ ಉದಾರ ಮಹಿಮಗೆ ।
ನಿಜವು ಜಲ ದೊರೆತಿಲ್ಲ ತೋರಲು ಕರಗಲೆರಡಹುದೇ ೮

ನಿರಾಕಾರಾಕಾರ ವ್ಯಕ್ತಿಗೆ ಚರಣ ಒಂದೆ ಭೇದ ಮಿಥ್ಯೆಯು ।
ಚರಣ ಯುಗಕೆರಡುಂಟೆ ಈ ಪರಿ ಶರೀರ ಶರಣಂಗೆ ॥
ಹಿರಿದ ಕಿರಿದ ದರದರ ಹಂಗನು ಹರಿದು ಬಿಸುಟುವ
ಶ್ರೀ ಮಹಾಶಂಕರಾನಂದ ಸರಸ್ವತೀ ಯತಿವರ್ಯ ಗುರುವರಗೆ
ಜಯ ಜಯ ಮಂಗಲಾ ಜಯ ಜಯ ಮಂಗಲಾ ೯

## ೪೭

ಆಚರಸ ನೀ ಬಾಚರಸ ನೀ ಈಚಿಯೊಳು
ಕಟ್ಟಿರುವ ಪೆಸರಿದ ನೆರೆದು ಸುವಾಚ್ಯ ಸಂಪನ್ನ
ಸತ್ಕೀರ್ತಿಕರನೆನಿಪ ಲಿಂಗರಸ ಪೂರ್ಣ ಪುರುಷ ।
ಶ್ರೀ ಚಂದ್ರಮೌಳಿ ಪದಾಂಬುಜ ಮಧುಪ
........... ದೇ ನಾಮ ಗುಜಾಯಿ ಗರ್ಭಜ
......... ಸಪ್ತ ಋಷಿಗಳವತಾರನೆಂಬ ತೇಜೆನಿಸಿದ ರಾಶಿಗೆ ೧

(ಹಿರಿಯ) ಮಗ ಮುದ್ದಣ ಖೊಬ್ಬರಸ ಕಮಲರಸ
.............ಹಿ ರಮಣ ಮೋಬರಸ ಬಾಲರಸ ತಿಪ್ಪರಸ
ಸಿರಿವಂತರಿವರು ಪೂರ್ವಜ ಲಿಂಗರಸನ ಸತಿ ಗುಜಾಯಿ
ಕುವರರೆನಿಸಿ । ಮೆರೆವ ಸಿಂಧಾಪುರದಿ ಕರಣಿಕರ್ಪ

ಪ್ರತಿಸೃಷ್ಟಿ ಕರ್ತಾ ವಿಶ್ವಾಮಿತ್ರ ಗೋತ್ರಜ ಸಂಗಮೇಶ್ವರನ ಕೃಪಾ
ಪಡೆದಹರ್ನಿಶಿ ಭಕ್ತರೆನಿಸಿಹ ನರ ಲೋಕದಿ ೨

## ೪೮

ತೋರುವದು ಘನ ತೋರದಡಗದು
ಸಹಜವಾದುದೆ ಪ

ಶ್ರೋತ್ರವಕ್ತ್ರವೆಂಬ ಬರಣಿಗಳು ।
ಸೂತ್ರ ಸುಮನದಿ ಮಂಥನ ಮಾಡಲು ೧

ಸಂತ ಸಾಧು ಮಹಂತಸಿದ್ಧ ವೇ-
ದಾಂತ ಚರ್ಚದಿ ಭಕುತಿ ನೋಡಲು ೨

ಆದಿನಾಥ ಪರಂಪರೆ ಶಂಕರ
ಬೋಧ ಸದ್ಗುರು ಸತ್ಶೀಲದಲ್ಲಿ ೩

## ೪೯

ಗುರು ರೂಪ ಸಾಕಾರ ಸಾಕಾರ
ನೀರಡಗಿರಲವಿಕಾರ ಗುರು ಪ

ನೀರಲಿ ತೋರುವ ಗುರುಳೆ । ಕರಗಲು ನೀರ
ಹೊರತು ಏನನಲಿ ? ೧

ಹೇಮವು ಕರಗಲು ಮುದ್ದಿ-
ಯೆನಿಸಲು ಬಲ್ಲದು ಸದ್ಗುರು ಸಿದ್ಧಿ ೨

ಕಲ್ಲೆಂದರಿಯದೆ ಪರುಷಾ ।
ಜರಿದರೂ ಕಲ್ಲಿಂದಾಗುವ ಹರುಷಾ ೩

ಅವನ ಕೃಪೆಯಿಂದೆಲ್ಲಾ । ಜಗವಿದು
ಕೇವಲ ಬ್ರಹ್ಮವಾಯಿತಲ್ಲಾ ೪

ಪರಬ್ರಹ್ಮವು ಜಗವಾಗೆ । ಗುರುಶಂಕರ
ತಾನಲ್ಲದೆ ಹ್ಯಾಂಗೆ ೫

## ೫೦

ಗುರು ಸಾಕಿದ ಗೂಳಿ ಭರದಿಂದ ಬರುತಿದೆ । ಸರಿಸಿ
ಹೋಗಲಿ ಬೇಡಿ ದುರ್ಜನರೇ ॥ ಸರಿಸಿ ಹೋದರೆ
ನಿಮ್ಮ ಬರು ಹೋಗುವ ಹಾದಿ ।
ತೆರ್ರನೆ ನಿಲ್ಲಿಸುವದು ತಿಳಿದು ನೋಡಿ ಪ

ಆರು ಕೋಣಗಳನ್ನು ಅರಿದು ಮುಂದಡಿ ಮಾಡಿ । ಆರೆರ-
ಡಾನೆಯ ಅವಚಿಕೊಂಡು । ಕೋರೆತ್ತಿಕೊಂಡು ತಾ ಕೋಪದಿ
ಬರುವಾಗ । ಮೂರು ಮನಿಯ ದಾಟಿ ಮುಂಡಾಯಿತೊ ೧

ಇಬ್ಬರನೊಗೆದು ಒಬ್ಬನ ಕೂಡಾ ಪೋದೀತು ।
ಅಬ್ಬರಿಸುತಲಾದ ಆನಂದದಿ । ಕಬ್ಬು ಬಿಟ್ಟು ಕಬ್ಬಿಣವ
ಮೆದ್ದು ದಿಬ್ಬಿ ಗೂಡದಲಿಂದಲುಬ್ಬುತದೆ ೨

ಮೋರೆತ್ತಿಕೊಂಡು ಮುಂದಾಡು ಮುಂದಾಡುವ ಸರ್ಪಗೆ ।
ಮುದ್ದು ಇಕ್ಕುತ ಬಂದು ನಿಲ್ಲುವದು । ಆರು ನೆಲೆಯೆತ್ತಿ
ನೀರು ಕುಡಿದು ಗೊತ್ತು ಸೇರಿತಲ್ಲಿ ಪುರಿವಾಸನಲ್ಲಿ ೩

## ೫೧

ಬ್ರಹ್ಮಾಂಡದೊಳಗಿದ್ದ ಚರ್ಯೆಯ ತಂದು ।
ಪಿಂಡಾಂಡದೊಳಗೆಲ್ಲ ತೋರಬೇಕೆಂದು ।

ಪುಂಡಲೀಕನ ಭಕ್ತಿಗೆ ತಾನೆ ಬಂದು ।
ಪಾಂಡುರಂಗ ನಾಮ ರೂಪದಿ ನಿಂದೂ ಜೋ ಜೋ ॥
ಜೋ ಜೋ ಜೋ ಶ್ರೀ ಗಂಗಾಧರನೆ ಜೋ ಜೋ ಜೋ
ಶ್ರೀ ವತ್ಸಧರನೇ ಜೋ ಜೋ ಜೋ ಶ್ರೀ ಶಶಿಧರನೇ ।
ಜೋ ಜೋ ಜೋ ಶ್ರೀ ದತ್ತಾತ್ರೇಯನೇ ಜೋ ಜೋ ಜೋ ೧

ತನ್ನ ವಾಯು ಸಾಧು ಸಂತರೊಳಾಡಿ ।
ತನ್ನ ಸ್ಫುರಣೆ ಮಾಯಗಳಿತವೆ ಕೂಡಿ ।
ತನ್ನ ಸ್ವಸುಖವೆ ಬೋಧರಿಯೆತ್ತಿ ನೋಡಿ ।
ತನ್ನಿಂದುತ್ಪತ್ತಿ ಸ್ಥಿತಿ ಲಯವು ತೋರಡಗಿ । ಜೋ ಜೋ ೨

ನಿತ್ಯ ಶುದ್ಧ ಬುದ್ಧ ಸರ್ವಾಂತರಾತ್ಮಾ ।
ಸತ್ಯ ಶಾಶ್ವತ ಸಾಧು ದಯ ಸಾರ್ವಭೌಮಾ ।
ಪ್ರತ್ಯಾತ್ಮ ಪರಮಾತ್ಮ ಐಕ್ಯಮೇಕಾತ್ಮಾ ।
ನಿತ್ಯ ಅಪರೋಕ್ಷ ನಿರ್ಗುಣ ನಿಜ ಧಾಮಾ ಜೋ ಜೋ ೩

ಕಾಶೀ ನಿವಾಸಿ ವಿಶ್ವೇಶ ವೃಷಾತ್ಮಾ ।
ನಾಸಿಕ ತ್ರ್ಯಂಬಕ ನೀನೆ ಮಹಾತ್ಮಾ ।
ವಾಸುದೇವನ ಪ್ರಾಣ ಪ್ರಿಯ ಪರಮಾತ್ಮಾ ।
ಕ್ಲೇಶ ಭಕ್ತರಿಗಾಗಿ ವಾಸಿಸುವಾತ್ಮಾ ಜೋ ಜೋ ೪

## ೫೨

ರಾಜ ರಾಜ ಮಹಾರಾಜ ಶ್ರೀಧವಾ
ಗೋವಿಂದರಾಜ ಅಚರಾಚರ ಸಬೀಜ ಪ

ಆದಿಯುಗದಿ ಮತ್ಸ್ಯ ಕೂರ್ಮ– ।
ನಾದಿ ವರಾಹ ನರಸಿಂಹ– । ನಾದಿ ಹಿರಣ್ಯ ಕಶ್ಯಪನ ।
ಭೇದ ಮಾಡಿ ರಕ್ತ ಕುಡಿದಿ ೧

ದ್ವಿತೀಯ ಯುಗದಿ ವಾಮನ ದ್ವಿತೀಯ ಉದರ
ದಲಿ ಬಂದು । ಮಥಿಸಿ ಬಲಿಯ ಕ್ರೋಧದಿಂದ ।
ಸುತಳಕ್ಕೊತ್ತಿ ಬಿಟ್ಟೆಯಾ ೨

ಪರಶುರಾಮ ರೇಣುಕಿಯ । ವರ ಸುಪುತ್ರನಾಗಿ
ಜನಿಸಿ । ವೀರಸದಿಂದ ಕ್ಷತ್ರಿ (ಯರ)
ನಿರಸ ಮಾಡಿ ಬಿಟ್ಟಿ ೩

ರಾಮಚಂದ್ರ ದಾಶರಥಿಯ ।
ಶ್ಯಾಮ ನೀಲ ಮೇಘ ವರ್ಣ ।
ಸ್ತೋಮ ರಾವಣನ ಉದ್ದಾಮನವರ ವಂಶ ತರಿದಿ ೪

ದ್ವಿತೀಯ ದ್ವಾಪರದಲ್ಲಿ । ಮಥಿಸಿ ಕಂಸ ಪೂತನೆಯ ।
ಕಾತರ ಮಾಡಿ ಕೌರವನು ।
ಪಥಕೆ ಹೊಂದಿಸಿ ಬಿಟ್ಟ ಕೃಷ್ಣ ೫

ಕಲಿಯುಗ ಬರಲು ಬೌದ್ಧನಾಗಿ ।
ಛಲ ದ್ವೇಷ ಖಲ ಜನರ ಕಲಹ ಹೆಚ್ಚಲಾಗುತಿರೆ ।
ಕಲ್ಕಿ ಹಯಗ್ರೀವನಾದಾ ೬

ಮೂರು ತಾಪದಿಂದ ಬೆಂದ ।
ಘೋರ ದುರಿತ ಭವದ
ಮೂಲ ಬೇರ ಕಿತ್ತಿ ಬಿಸುಟಿದ ಶ್ರೀಶಪಾಲ ಶಂಕರೇಶ ೭

## ೫೩

ಎಂಥ ಮಹಿಮನು ನೋಡು ನಮ್ಮ
ಯಲಗೂರದ ಹನುಮಾ ।
ಸಂತತ ನೆನೆವರ ಚಿಂತಾಮಣಿ ನಿಜ ಶಾಂತ
ಸದಾ ನಿಶ್ಚಿಂತ ಪರಾಕ್ರಮಾ ಪ

ಹುಟ್ಟುತಲಿ ಮಿತ್ರನ ತಿನಬೇಕೆಂದು ಥಟ್ಟನೆ ತಾ ಬಂದು ।
ಬೆಟ್ಟರಿಯ ಬೆನ್ನನೆ ಬೀಳಬೇಕೆಂದು । ಪುಟ್ಟರಿದಾನೆಂದು ।
ಮುಟ್ಟಿ ಬರಲುಕವ  ನೆಟ್ಟನೆ ಹೊಯ್ಯಲು ।
ಧಿಟ್ಟ ಮರಪನೆಂದು ಧಿಟ್ಟನೆ ಧಿಟ್ಟ ಬಂದು ೧

ಅಂಜನಿಯ ಗರ್ಭದಲಿ ತಾ ಬಂದಾ । ಸಂಜೀವನಿ ತಂದಾ ।
ಕೆಂಜಡಿಯನ ಸ್ವರೂಪನು ಜಗದಾನಂದಾ ಸ್ವಾನಂದ ಕಂದಾ ॥
ಮಂಜುಳ ಶಬ್ದ ಪ್ರಭಂಜನ ಕಪಿ ಜಗ ರಂಜಿತ
ತೇಜಃ ಪುಂಜ ಸದಯದಾ ೨

ಹರಿಸುತನು ಬ್ರಹ್ಮನೆ ತಾನೆ ಬಂದೂ ಕರವಿಟ್ಟನು ಇಂದೂ ।
ಪರಿಪರಿಯ ಶಕ್ತಿಯು ನಿನ್ನಲ್ಲಿಂದು ಗುಪ್ತಿರಬೇಕೆಂದು ಸ್ಥಿರ
ಪದ ಕೊಟ್ಟೆ ವಜ್ರಾಂಗವನಿಂದೂ ವರದಾ–
ಭಯನಿಟ್ಟು ತನುನಿಧಿ ತಂದೂ ೩

ರವಿತನಯನ ಭೆಟ್ಟಿಯನು ತಕ್ಕೊಂಡಾ ರಘುರಾಮರ ಕಂಡಾ ।
ಅವನಂಗುಲಿಯೊಳು ಮುದ್ರಿಯನಿತ್ತಾ ಪ್ರಚಂಡಾ
ಬಹು ಬಾಹೋದ್ದಂಡಾ । ತವಕದಿ ಅಕ್ಷಯ ಕುವರನ
ಮರ್ದಿಸಿ ಘವಿ ಘವಿಸುವ ಲಂಕಿಯದಾ ಕೆಂಡಾ ೪

ರಕ್ಕಸರೆಲ್ಲರ ಕುಕ್ಕಿರಿದನು ಅದ್ಭುತಾ ಜಗಕಪಿ ಪ್ರಖ್ಯಾತಾ ।
ಮಿಕ್ಕರಗಳನೆಲ್ಲ ಪಾಡುವೆ ರಾಮನ ದೂತಾ ಶರಣರ ಸಂಪ್ರೀತಾ
ಉಕ್ಕಿ ಹರುಷದಲಿ ಬೇಗ ಬಾರೊ ಬೇಗ ಬಾರೊ
ನೀಲಮೇಘಶ್ಯಾಮಾ ಭಕ್ತರ ಪಾಲಿಪ ಮುಕ್ತರ
ಮಾಡುವ ಶಂಕರನೀತಾ ೫

## ೫೪

ಜೋ ಜೋ ಜೋ ಅಂಜನಿ ಕಂದಾ ಜೋ ಜೋ
ಸಂಜೀವನ ತಂದಾ । ಜೋ ಜೋ ಸಾಧು

ಸಜ್ಜನ ವೃಂದಾ । ಜೋ ಜೋ ವಾಯು ಬಾಲ
ಮುಕುಂದಾ ಜೋ ಜೋ ಪ

ಭೂತ್ಯೆದೆಂಬೊ ಕನ್ನಡಿ ಮಂಟಪದೊಳಗೆ ।
ಜ್ಯೋತಿ ದೀಪದ ಭಾಸ ಉನ್ಮನಿಯೊಳಗೆ ।
ಪ್ರೀತಿಂದ ಪ್ರಣವೆಂಬ ಮೇಲ್ಕಟ್ಟ ಕೆಳಗೆ ರಕ್ತಶ್ವೇತ
ಶ್ಯಾಮ ನೀಲ ಖಿಡಕಿಯೊಳಗೆ ಜೋ ಜೋ ೧

ಪಂಚ ಭೂತವೆಂಬ ಮಂಚವ ನಿಲಿಸಿ ।
ಪಂಚವಿಂಶತಿ ತತ್ತ್ವ ನವಾರ ಬಿಗಿಸಿ । ಪಂಚ
ಕರಣವೆಂಬೋ ಹಾಸೀಗಿ ಹಾಸಿ । ಪಂಚ ಪ್ರಾಣವೆಂಬೋ
ಲೇಪ ತೀವಿಸಿ ಜೋ ಜೋ ೨

ಆರು ಚಕ್ರ ಮೀರಿದ ಸ್ಥಾನದಲ್ಲಿ ।
ಘೋರ ಘೋರ ಘೋಷ ಉನ್ಮನಿಯಲ್ಲಿ ।
ತುರ್ಯಾತೀತ ಶಂಕರ ತಾನೇ ಅಲ್ಲಿ ।
ಸೂರ್ಯ ಚಂದ್ರ ಅಗ್ನಿ ಮೂಜಗದಲ್ಲಿ ಜೋ ಜೋ ೩

## ೫೫

ಹೋಗಿ ನೋಡುವ ಬನ್ನಿರಿ ಶ್ರೀ ಜಗದೀಶನಿಗೆ
ಶ್ರೀನಿವಾಸನ ಸಾಗಿ ನೋಡುವ ಬನ್ನಿ ಬಾಗಿ ಪದ ।
ನಲಿಸದಿ ನೀಗಿ ಭವಕೇರಿದಿ ಭೋಗಿಶಯನ ಯೋಗಿ ಪ

ಪರಮ ಭಕ್ತರ ಪಾಲನ ಸವ್ಯಸೂಕರಧರಣಿ ಜಯವರನ ॥
ಕೊರಳೊಳು ಕೌಸ್ತುಭ ಶ್ರೀ ವತ್ಸಲಾಂಛನ ।
ಕರಿವರ ಭಯನಾಶನ ॥ ಅಘಶೋಷಣ ೧

ಕಾಮಕೋಟಿ ತೇಜನ ಅನಂತ ಜನ ಕಾಮಿತ ಫಲ ಪೂರ್ಣನ ।
ವಾಮಕರದಿ ಅಕ್ಷಮಾಲಾಧರ
ಸಂಭ್ರಮ ಪೂರಿತ ಶೀಲನ । ಶ್ರೀ ಲೋಲನ ೨

ವಕ್ಷಸ್ಥಳದಿ ಶಿರಿಯ ಧರಿಸಿಹ ನಿಜ........... ।
ಮೋಕ್ಷ.................ಲಕ್ಷ ಅಲಕ್ಷ ವಿಲಕ್ಷ ಸುಲಕ್ಷ ನಿಲಕ್ಷ ॥
ಸಾಕ್ಷೀ ಹರಿಯ ಮುರಾರಿಯ ೩

ನೀಲಮೇಘಶ್ಯಾಮನ ಸುಜನರ ಅನುಕೂಲ ಸರಡಿಗಿ ವಾಸನ ।
ಕಾಲ ಕರ್ಮಾತೀತ ಕಲಿಮಲ ಜಲ್ಪ । ನಿರ್ಮೂಲ ।
ನಾಶನ ಪಾವನ ॥ ಶ್ರೀ ದೇವನ ೪

ಪಂಕಜೋದ್ಭವನಯ್ಯನ ಮುನಿಜನ ಹೃತ್ಪಂಕಜ
ಆಳ್ರೂಪನ ಶಂಖಚಕ್ರಧರ ಕಟಿ ಪೀತಾಂಬರ
ಶಂಕರಾಂತರಂಗನ । ಸುಸಂಗನ ೫

## ೫೬

ಜಯದೇವ ಜಯದೇವ ಜಯ ವೆಂಕಟೇಶ ।
ಭಯಕೃದ್ಭಯನಾಶನ ಶೇಷಾಚಲವಾಸ ॥ಜಯ॥ ಪ

ಕಲಿಯುಗದಲಿ ಪ್ರತ್ಯಕ್ಷ ಭೂವೈಕುಂಠನಿಸಿ ।
ಸುಲಭವು ತೋರಿದಿ ಭಕ್ತರ ಬಯಕೆ ಪೂರೈಸಿ ।
ನಳಿನ ಸಂಭವ ಜನಕ ಸನಕಾದಿ ಪೋಷೀ ।
ತಿಳಿಯದು ನಿಮ್ಮಯ ಮಹಿಮೆಯು ಸಚ್ಚಿತ್ಸುಖರಾಶೀ ೧

ಹೊಳೆವ ಶಿರದಲಿ ಕಿರೀಟ ಮಕರ ಕುಂಡಲವೂ ।
ಎಳೆ ತುಳಸಿ ವನಮಾಲಿ ಕೊರಳಲಿ ಶೋಭಿತವೂ ।
ಶ್ರೀವತ್ಸ ಕೌಸ್ತುಭ ಮಣಿ ರತ್ನದ ಜಡವೂ ।
ಥಳ ಥಳಿಪ ತೇಜಾ ಅಂಜನೀ ತನಯಾ ೨

ಮತ್ಸ್ಯ ಕೂರ್ಮ ವರಾಹ ನರಹರಿ ವಾಮನನೆ ।
ತುಚ್ಛ ಮಾಡಿದಿ ಯಮಪುರ ರಾಮ ರಾಘವನೆ
ವತ್ಸಾ ಶಿರಿ ಶಂಕರ ಆತ್ಮಜನೆ ॥ ಜಯ ೩

## ೫೭

ಬಿಂದು ಮಾಧವ ರಮಾಧವ ಪ

ಬಿಂದು ಮಾಧವ ಸುಬಂಧು ದೀನ ಭವ ।
ಬಂಧತರಣ ಗೋವಿಂದ ಶ್ರೀ ಕೃಷ್ಣ ೧

ಮಂದರಾದ್ರಿಧರ ಕುಂದ ರದನ ಮಹಾ ।
ಸುಂದರ ಸಿರಿ ಹೃನ್ಮಂದಿರ ವಾಸಾ ೨

ಕದ್ದಿಕಾರ ಸುರವೃಂದ ಸುಪೂಜಿತ ।
ಇದ್ದಿ ದೇವ ಕಚವೃಂದ ಸಮೇತಾ ೩

ನಂದ ನಂದನ ಸುಸಿಂಧುರ ವರದ ಮು-
ಕುಂದ ಗೋಪಿಕಾ ವೃಂದ ವಿಹಾರಾ ೪

ಮಲ್ಲಿಖೇಡ ಸ್ಥಳ ಹೊಳೆ ಕಾಗಿಣಿ ಥಡಿ
ಬಳಿಗೆ ರಾಯರು ಕುಳಿತಲ್ಲಿರುವ ೫

ಪಂಕಜಾಕ್ಷ ಮೀನಕೇತು ಜನಕ ಗರು-
ಡಾಂಕ ಶಶಿ ಧ್ವಜ ಶಂಕರಪ್ರಿಯ ಹರಿ ೬

## ೫೮

ಮಾಧವಾನಂತ ಗೋವಿಂದಗೆ ಮಂಗಳ
ಸಾಧು ಜನರ ಆನಂದಗೆ ಮಂಗಳ ಪ

ನೂತನ ಜಲಧರಗಾತ್ರಗೆ ಮಂಗಳ ।
ಪೀತಾಂಬರಧರ ನಿಜಸೂತ್ರಗೆ ಮಂಗಳ ೧

ಅಂಬುಜನಾಥ ದಾಮೋದರಗೆ ಮಂಗಳ
ಕಂಬು ಚಕ್ರಾಬ್ಜ ಗದಾಧರಗೆ ಮಂಗಳ ೨

ಮಂದಹಾಸನ ಲಕ್ಷ್ಮೀಲೋಲಗೆ ಮಂಗಳ ।
ಕಂದ ಗಿರೀಶ ಪೋಷಿಸುವಗೆ ಮಂಗಳ ೩

## ೫೯

ಪರಮ ಪಾವನ ಪರಬ್ರಹ್ಮ ಸದಾಶಿವ
ನಿರುಪಮ ನಿತ್ಯ ಮಂಗಲ ಮಹಿಮಾ ॥
ಸರಸಿಜೋದ್ಭವ ಸುರಮುನಿ ವೃಂದೋವಂದಿತ
ಪರಕೆ ಪರನೆಂದು ಪೊಗಳಿದೆನಲ್ಲದೆ ।
ತೀರಕ ಜಂಗಮನ ದಸೆಯಿಂದ ಪೊಡ.....
............................ ಬಾಣನ ಕಾಯ್ದ ಸ್ಥಿರದಿ ತಾಳಿದ
ನಂದನ । ಚರಾಚರ । ಗರ್ವಿಗೆ ಗರ್ವಾದನಂದೆನಲ್ಲ
ನಿನಗೆ ತಿರುಕ ಜಂಗಮನೆಂದೆನೆ ೧

ಎತ್ತ ನೋಡಿದಲತ್ತತ್ತ ಪಿಡಿದಿಹ ಚಿತ್ಪ್ರಭೆ
ಬೆಳಗು ಭಾನವು ಭಾಸವು ಚಿತ್ತಕೆ ಚೈತನ್ಯವಾದ
ಚಿನ್ಮಯ ಶಿವ ಪ್ರತ್ಯಗಾತುಮನೆಂದು ಪೊಗಳಿದೆ–
ನಲ್ಲದೆ......................। ಚಂದ್ರನ ಕಳೆ ನೆತ್ತಿಲಿಟ್ಟವನೆಂದೆನೆ ।
ಗಂಗೆಯ ಜಲಪಾತ ತಾಳಿದನೆಂದೆನೆ ।
ಕಲ್ಪನೆ ಮನದ ವೃತ್ತಿಗಗೋಚರನಂದೆನಲ್ಲದೆ ನಿನಗೆ ೨

ನಮಃ ನಿಜಘನತೇಜಃ ಪುಂಜ ರೂಪನಾಮ
ದಿನೆ । ....................................

ನಾಮ ರೂಪಕನೆಂದೆನೆ ॥ ಕರ್ಮನೇಮ ನೈಷ್ಠಿಕನೆಂದೆನೆ
ಸಿಂಧಾಪುರದ ಸೀಮೆ ಕರ್ಣಿಕನೆಂದೆನೆ । ಗಿರಿಗೆ
ನಿಜಧಾಮದ ಏಕನೆಂದು ಪೊಗಳಿದೆನಲ್ಲದೆ ।
ನಾಮರೂಪಕನೆಂದೆನೆ ೩

## ೬೦

ಶ್ರೀ ಸದ್ಗುರು ಭೀಮಾ ಶಂಕರಲಿಂಗ ।
ಭವ ಬಾಧೆ ಭಂಗ ಪ

ಧರಿಸಿದಿ ಶಿರದಲ್ಲಿ ಸುರಗಂಗಾ ।
ಕೊರಳೊಳು ಶೋಭಿಸುವ ಭುಜಂಗ ।
ಹರ ಹುಲಿ ತೊಗಲನು ಮಾಡಿದಿ ಶಯ್ಯಂಗ ೧

ಭವಹರ ಮುನಿಮನ ಚಿತ್ ಶೃಂಗಾ
ಭಕ್ತ ಚಕೋರ ಶೇಷಾಂಗ
ಪಯನಿಧಿಜಾವರ ಸಖ ಶಂಕರ ಲಿಂಗ ೨

ಕಮಲಜ ಜನಕನ ಸುತ ಅನಂಗಗೆ ಮುನಿದಿ ।
ಉರಿ ನಯನದಿ ಭಂಗ ।
ಹಿಮಗಿರಿಜಾ ಪಾರ್ವತಿಗಿತ್ತ ಅರ್ಧಾಂಗ ೩

## ೬೧

ಶಿವ ಮಹಾಗುರು ಸಹಜಾನಂದ ಭವಹರ ಮೃಡ ಬ್ರಹ್ಮಾನಂದ ।
ಭವಮೃಡ ಸಾಂಬ ಶಿವಾನಂದ । ದಶಭುಜ ಪಂಚ
ವದನ ನೇತ್ರ । ದಳ ಪಂಚಕ ಮಂಗಳ ಗಾತ್ರ । ಭಸಿತ
ವಿಲೇಪ ಸುಜನ ಸ್ತೋತ್ರ । ಪಶುಪತಿ ಬಿಸಜಾಕ್ಷನ ಮಿತ್ರ ೧

ಸುರನದಿ ಶಿರದಲಿಟ್ಟಿಹನು । ಸ್ಮರನ ಉರಿಗಣ್ಣಿಲಿ
ಸುಟ್ಟಿಹನು । ಉರಗ ಭೂಷಣ ಕುಂಡಲದ್ವಯನ ।
ಪರಮ ಪುರಷ ಗೌರೀವರನ ೨

ಅಮರೇಂದ್ರಾದಿ ಪದಾರ್ಚಿತನು ಡಮರು
ತ್ರೀಶೂಲ ಮೃಗಾಯುಧನು । ಶಮನ ಮಹಾ ಭಯ
ಸಂಹರನು । ಸುಮನ ಸುಭಕ್ತರ ಪೊರೆವವನು ૩

ಗಜಚರ್ಮಾಂಬರಧರ ಯತಿ । ರಜನೀಪತಿ ಶೇಖರ ಗೋಪತಿ
ಭಜಕ ಜನಗಳಾಂತರ ಸ್ಫೂರ್ತಿ ।ಅಜಸುರನುತ ಸಚ್ಚಿನ್ಮೂರ್ತಿ ೪

ಸಿದ್ಧರ ಮಡುವಿನೊಳಗೆ ವಾಸಾ । ಬದ್ಧ ಜೀವಂಗಳುದ್ಧರಿಪ ಈಶಾ ।
ಶುದ್ಧ ಲಕ್ಷಕೆ ಉಪದೇಶ । ಅದ್ವಯ ಗುರು ಶಂಕರ ವೇಷಾ ೫

## ೬೨

ಬ್ರಹ್ಮಾದಿಕರನು ಪರಬ್ರಹ್ಮದಿಚ್ಛಿಲಿ ಪಡೆದಳಮ್ಮ
ಪರಂಜ್ಯೋತಿ ಪರಬ್ರಹ್ಮಿಣೀ ಪ

ವಾಣಿ ಕಲ್ಯಾಣಿ ಫಣಿ ವೇಣಿ । ರುದ್ರಾಣಿ
ಶರ್ವಾಣಿ ಸುವಾಣಿ ಗೀರ್ವಾಣಿ ವರದೆ । ಗಾಣಿ
ತ್ರಿನಯನ ಅಜನ ರಾಣಿ ಶಂಕರ ಪ್ರಾಣಿ ಪುಸ್ತಕ
ಪಾಣಿ ನಾರಾಯಣೀ ೧

ಅಂಬೆ ಲೋಕಾಂಬೆ ಭ್ರಮರಾಂಬೆ ಮೂಕಾಂಬೆ
ಹರಡಿಂಬೆ ಪ್ರತಿಬಿಂಬೆ ಕುಚಕುಂಭೆ ಸಾಂಬೆ ।
ರಂಭೆ ಹೇರಂಬೆ ಶರಣೆಂಬೆ ವರಗೊಂಬೆ ಭಕ್ತರ
ಬೊಂಬೆ ಹೊಳೆವ ಗೊಂಬೆ ೨

ಕಾಳೆ ಹಿಮ ಬಾಳೆ ಭೂ ಪಾಳೆ ಕುಸುಮಾಳೆ
ವನಮಾಳೆ ಕಂದರ ಮೌಳೆ ಕುಟಿಲ ಕುರುಳೆ । ಕೇಳಿ
ನಿನ್ನಯ ಲೀಲೆ ಕಾಲಿಗೆರಗುವರಘವ ಮೂಲಕೆತ್ತೆತ್ತಿ
ಬಿಸುಟುವ ಕೃಪಾಳೆ ೩

ಬೇಕೆಂಬೊ ಬಯಕಿತ್ತು ಸಾಕು ಸಾಕೆನಿಸುವರು
ಲೋಕದೊಳಗ್ಯಾರುಂಟು ನಿನ್ನ ಬಿಟ್ಟು ।
ಏಕೆ ವಿವೇಕೆ ಎನ್ನೀ ಕುಟಿಲ ಗುಣ ನೋಡ ಬೇಕೆ
ಕ್ಷಮೆ ಮಾಡಿದರೆ ಮೈಯುಳಿಯುವದು ೪

ಕಾಯಜನ ಮಾತೆ ಸಿತಕಾಯನರ್ಧಾಂಗಿ ಜಗಕಾರ್ಯ
ನಿರ್ಮಿಸುವ ನರರುದಿಸಿ ಮೂರು ॥ ಕಾಯಡಗಿ ಹೋದ
ನಿಷ್ಕಾಯ ಪರಶಕ್ತ್ಯೆನ್ನ ಕಾಯ್ದುಕೊಳ್ಳೆಲೆ
ತಾಯಿ ಸ್ತ್ರೀಯರನ್ನೆ ೫

ಸಾರಿದರ ಹೊರೆವ ಸಂಸಾರದೊಳು ಮುಳುಗಿದರೆ
ತಾರಿಸುವ ತವಕದಿಂ ತರುಳೆ ತರುಣೀ ।
ಸೇರಿಸುತ ತಿರುಗಿ ತನು ಬಾರದ್ದಾದಿಗೆ ಒಯ್ದು
ತಾರಿಸುವ ಸ್ಥಿರದಿ ನೀ ತೋಯಜಾಕ್ಷಿ ೬

ಕುಸುಮ ಸರ್ಪಾದಿಗಳು ಕುಸುಮಗಂಧಿಯ ಪದಕೆ
ಕುಸುಮ ವೃಷ್ಟಿಗವು ದೇವಿಯ ಸುಕೃತಿಗಳೂ ।
ಕುಸುಮದೊಳು ಕರಕಂಜ ಕುಸುಮದೊಳು
ವರವಿಡಿದ ಕುಸುಮಶರ ರಿಪು ಶಂಕರನ ಶಂಕರೀ ೭

## ೬೩

ಮಂಗಲಂ ತ್ರಿಪುರ ಸುಂದರಿ ಬನ ಶಂಕರಿಗೆ ।
ಮಂಗಲಂ ಸನ್ನಿಧಿಯ ಕೌಮಾರಿಗೆ ।
ಮಂಗಲಂ ಭ್ರಮರಾಂಬದೇವಿ ಚೌಡೇಶ್ವರಿಗೆ ।

ಮಂಗಲಂ ಶ್ರೀ ಲಕ್ಷ್ಮೀ ಮಹಾ ಮಾಯಿಗೆ । ಮಂಗಲಂ ಜಯ ಪ

ಕಮಲದಳ ನಯನಿಗೆ ಕಮಠಾವಲೋಚನೆಗೆ ವಿಮಳ
ವರವೀವ ಚೂಡಿ ದರ ಕೊರಳಿಗೆ । ದ್ಯುಮಣಿ
ಶಶಿ ಕಿರಣದ ಶ್ರವಣ ಭೂಷಣಿಗೆ ಭ್ರಮರಾರಿ ನಾಸಿಕದ ಮಣಿ ಮೌಕ್ತಿಗೆ
ಮಂಗಲಂ ಜಯ ಶುಭ ಮಂಗಲಂ ೧

ಓಂಕಾರ ವದನಿಗೆ ವೇದಾಂತ ರದನಿಗೆ ।
ಪಂಕ ವಿರಹಿತದ ಚಿದ್ರಸ ಜಿವ್ಹೆಗೆ ।
ಅಂಕದಲಿ ಬ್ರಹ್ಮ ಪೀಯೂಷ ರಸ ಸುರಿವ ರುಣದಂಕುರಿಪ
ಪವಳ ಮಣಿ ರುಚಿಯ ಧರಿಗೆ ಮಂಗಳ ೨

ಕನಕ ಕಲಶ ತೋಳಿಗೆ ಕಲಶ ಕುಚಯುಗಳಿಗೆ ।
ಚಿನಕ ಪೂರ್ವಣ್ಯ ಕಂಚುಕದ ರುಚಿಗೆ ಸನಕಾದಿಗಳ
ತಲೆಯ ಮೇಲಿಡುವ ಹಸ್ತಯುಗ ವನಜೆ
ಶ್ರೀದೇವಿಯಂಗುಲಿಯ ನಖಕೆ ಮಂಗಳ ೩

ಹಸ್ತದಾಭರಣಿಗೆ ಕೊರಳ ಭೂಷಣಿಗೆ ನಿಜ
ನಿತ್ಯ ಮಂಗಳಿಗೆ ಹಾಟಕ ವರ್ಣಿಗೆ ।
ರತ್ನ ಬೈತಲಿಗೆ ವಜ್ರಾಣಿ ಪಾರಂಗಣಿಗೆ ನಿಜ ।
ಮುತ್ತಿನ ಬೊಟ್ಟು ಕುಂಕುಮದ ಫಣಿಗೆ ಮಂಗಳ ೪

ಮರಗು ಮಲ್ಲಿಗೆ ಮುಡಿಗೆ ದುಂಡ ದಂಡಿಯ
ತಲೆಗೆ ಕೊರಳ ಹಾರವ ತುದಿಯ ಕಾಲಿಂದಿಗೆ ।
ಪರಿಕ್ರಮದ ತಾಂಬೂಲ ವದನ ನಸು ನಗೆ ಮೊಗದ
ಪರಿಮಳದ ಘನಸಾರತನುಲೇಪಿಗೆ । ಮಂಗಳ ೫

ಪರಬ್ರಹ್ಮರೂಪಿಗೆ ಪರಾತ್ಪರ ಶಂಕರಿಗೆ ನಿರುಪಮಾನಂದ
ಶ್ರೀ ಮಹಾಲಕ್ಷ್ಮಿಗೆ । ಶಿರಸ ಪೂಜೆಯ ಅರಳು ಮಲ್ಲಿಗೆಯು
ಕೃಪೆಯಿಂದ ಜರಿದು ಉದರಿದವು ಗಿರಿದ್ವಾರದಲ್ಲಿ ॥ಮಂಗಳ ೬

## ೬೪

ಮಂಗಳಾ ತ್ರಿಪುರ ಸುಂದರಿಗೆ । ಮಂಗಳಾ ಶಾಕಂಬರಿಗೆ
ಮಂಗಳಾ ಬಾದಾಮಿ ಬನಶಂಕರಿಗೆ ಜಯತು ಹಾ ಪ

ಭೂಧರ ಭೂಷಿಗೆ ಜಯತು । ಭೂಧರ ವೈರಿಗೆ ಜಯತು ।
ಭೂಧರ ವೈರಿ ವಾಹನನ ಸಂಹರಳಿಗೆ ।।ಜಯ ೧

ಹರಿಮಿತ್ರಿ ಲೋಚನೆ ಜಗತ್ । ಹರಿಗಾತ್ರ ಸೂಚನೀ ಜಯ ॥
ಹರಿಪುತ್ರ ಕೋಟಿ ಲಾವಣ್ಯ ಸುಲೋಚನೆ ॥ ಜಯ ೨

ಪಾಹಿ ಪರಾತ್ ಪರೇ ।।ಜಯ।।
ಪಾಹಿ ಪರಮಪರೆ । ಜಯ । ಪಾಹಿ ಪರಮ
ಪರಮೇಶ್ವರೀ ಪುರಹರೀ ।।ಜಯ।।
ತ್ರಾಹಿ ತ್ರಾಹಿ ತ್ರ್ಯಂಬಕೇ । ಜಯ ।
ತ್ರಾಹಿ ತ್ರೈಲೋಕ್ಯಾಂಬಿಕೆ । ಜಯ ।
ತ್ರಾಹಿ ತ್ರಾಹಿ ತ್ರಿಪುರಿ ಶ್ರೀ ಮೂಕಾಂಬಿಕೆ ಜಯತು ೩

ಕುಲಸ್ವಾಮೀ ಸ್ವಾಮಿನೀ । ಜಯ ।
ಕುಲ ಕೋಟಿಯೇ ಕಲ್ಯಾಣೀ । ಜಯ ।
ಕುಲರಹಿತ ಕುಲೀ ಶಾಂಕರೀ
ಶಂಕರ ರಾಣೀ ಜಯತು ೪

## ೬೫

ಶಕ್ತೀ ನಿಜ ಶಕ್ತೀ ಪಾರ್ವತಿಗೆ ಮಂಗಳಾ ॥
ಭುಕ್ತಿ ಮುಕ್ತಿ ಈವ ಅಲಿಪ್ತಿಗೆ ಮಂಗಳಾ ೧

ಅಂಬಾ ಸ್ವಯಂಬೆ ಜಗದಂಬೆಗೆ ಮಂಗಲಾ ।
ಬಿಂಬಾಧರೀ ಇಂದು ಬಿಂಬಿಗೆ ಮಂಗಳಾ ೨

ಭಕ್ತರ ಪ್ರೇಮ ಓಂಕಾರಿಗೆ ಮಂಗಳಾ ।
ರಕ್ತಾಕ್ಷಿಯುಕ್ತ ಶ್ರೀಗಿರಿಜೆಗೆ ಮಂಗಳಾ ೩

## ೬೬

ಸಾಂಬ ಶ್ರೀವಾಹನ ಕುಂಟೋಜೀಶಾ ।
ಸುಂದರ ಬಸವೇಶಾ ಪ

ಜಗದೊಳಗಿಹ ಜನರಘನಾಶ ।
ಸುಗಮದಿ ಕಡಿವನು ಭವದ ಪಾಶ ।
ಅಗಣಿತ ಶಿವಗಣರೊಳು ಮೆರೆವ ಅವಿನಾಶ ೧

ಗಳ ಬೆನ್ನವನಿತ್ತು ಪರೇಶ ।
ಮಾಳ ಹೊಲಗಳ ನಡಿಸುವನೀಶ ।
ತಿಳಿ ಮನದೊಳು ಬೆಳಗುವ ಜ್ಯೋತಿ ಪ್ರಕಾಶ ೨

ಧರಣಿಗಧಿಕವಾದ ಕೈಲಾಸ ।
ಪೊರೆವುತ ಕುಂಟೋಜ ನಿವಾಸಾ ।
ಸ್ಥಿರವಾಗಲು ಶಂಕರಗಾಯಿತು ಉಲ್ಹಾಸ ೩
ಸುಂದರ ಬಸವೇಶ ॥

## ೬೭

ಸತ್ಯಬೋಧ ಸ್ವಾಮಿಯವರು । ಸತ್ಯಬೋಧ ಗುರು
ಮರ್ತ್ಯ ಜನರ ಭವ ಮೃತ್ಯು ಉದ್ಧರಿಸುತಿಹರು ।
ಸತ್ಯ ಸ್ವರೂಪ ಹರಿ ಪ

ಯತಿಗಳಲಗ್ರಣಿಯು ಆಶ್ರಮ ಚತುರ್ಥ ಪದವ
ಅತಿಶಯ ಗುಣಕ್ರೀತ ಮತ ಸ್ಥಾಪನ ।
ಸತತ ತಪಸುಪೂರಿತ ................................ ೧

ಅರಿಷಡ್ಗಳ ಕಡಿದಿಹ ನಿರುತವರ ಭಯಗಳ ।
ಇರಿಸುವ ಸಕಲರ ತಾರಿಸುವ ಇಳೆಗವ–
ತಿರಿಸಿಹ ಸುರರೂಪ ಋಷಿ ಮಹಾತ್ಮರು ೨

ಶಮಷಟ್ಕಾದಿಗಳ ಸಾಧನ । ಕ್ರಮವನುಕೂಲಲಿಹವು ।
ಯಮ ನಿಯಮ ಕ್ರಮ ವಿಮಲ ಅಷ್ಟಾಂಗದ
ಸುಮನ ಸುಯೋಗ ಅನುಪಮ ಸಚಿನ್ಮಯ ೩

ಕ್ಲೇಶಪಂಚಗಳನು ಕಳೆದಿಹ । ಪಾಶವಂಟದವನು ।
ದೇಶಿಕನೆನಿಸುತ ಪೋಷಿಸುವ ಭಕ್ತರ ।
ಗಾಸಿಯ ನಂದಿಸುವೀಶ ಸೆರೆ ಬಿಡಿಸಯ್ಯ ೪

ರಾಮಚಂದ್ರ ಮೂರ್ತಿ ಪೂಜೆಯ । ಪ್ರೇಮಯುಕ್ತ ಭಕ್ತಿ
ಕೂರ್ಮವರ ಶ್ರೀ ವಾಮನ ನರಹರಿ ಪ್ರೇಮದಿ ನಡಿಸುವ
ಸ್ವಾಮೀ ರಾಯ ಬಲಿ ೫

ಸವಣೂರ ಸ್ಥಳದಿ ಇರುವ ತ್ರಿ– । ಭುವನ ಮಠ ಸ್ಥಾನದಿ ।
ತವಕದಿ ತಿಳಿಯದು ಇವರ ಮಹಾತ್ಮೆಯು
ಶಿವ ಶಂಕರಸಖನೊಬ್ಬನಿಗಲ್ಲದೆ ೬

## ೬೮

ದೇವರ ಗಿರಿಯ ಅಪ್ಪಯ್ಯನವರು
ದೇವದುರ್ಗಸ್ಥಳದಲ್ಲಿಹರು ಪ

ತಿಮ್ಮಯ್ಯನ ......................................
......................................................
......................................................
ಸುಮ್ಮನೇ ನರವಮು ಧರಿಸಿಹರು ೧

ಶೇಷ ಶಯನ ಕೃಪೆ ಪಡೆದಿಹರು ।
ದಾಸ ಮುಕುಟ ಮಣಿ ಎನಿಸಿಹರು ।
ಕ್ಲೇಶ ಪಂಚಕಗಳನಳಿದಿಹರು ।
ತೋಷಿಸಿ ಭಕ್ತರ ಸಲಹುವರು ೨

ವೆಂಕಟ ರಮಣಗೆ ಹೋಗುವರು ।
ಸಂಕಟ ಜನ ಪರಿಹರಿಸುವರು ॥
ಸಂಖ್ಯೆಯಿಲ್ಲದ ಅಪೂಪ ನೀಡುವರು ।
ಶಂಕರ ಸಖಿಗೆ ಬೇಕಾಗಿಹರು ೩

## ೬೯

ಶಿವಸುಖದಲಿ ನೀ ನಲಿಯೊ ।
ನಿಜ ಮುಕ್ತಿಯ ಕಲಿಯೊ ಪ

ನಾಥನೆಂಬುವ ಭಾವವನಳಿಯೊ ।
ಚಿನ್ಮಯ ಜ್ಞಪ್ತಿ ಪ್ರಕಾಶದಿ ಸುಳಿಯೊ ೧

ಮೋಹ ಮಹತ್ವದ ಕೋಹಂ ಅಳಿಯೋ ।
ಸೋಹಂ ಚಿನ್ಮಯ ಸ್ತುತಿ ತಿಳಿಯೊ ೨

ಅಷ್ಟರಿಪುಗಳನು ಸುಟ್ಟು ನಿಜ ಉಳಿಯೊ ।
ಶ್ರೇಷ್ಠ ಪರಮಗುರು ದೀಪ್ತಿಲಿ ಹೊಳೆಯೊ ೩

## ೭೦

ಶಿವಸುಖ ದಾರಿಯ ನೋಡಣ್ಣಾ ।
ಅದು ಕೂದಲ ಎಳೆಕಿಂತ ಬಲು ಸಣ್ಣಾ ಪ

ಭವದಲಿ ಮುಳುಗಿಹ ಪ್ರಾಣಿಯ ಕಾಣದೆ ।
ಘವ ಘವಿಸುವ ಚಿನ್ನದ ಬಣ್ಣಾ ಅ.ಪ.

ಸಾಸಿವೆ ಕಾಳಿಗೆ ಸಾಸಿರ ಭಾಗಕೆ ಮೀರಿ ಉಳಿದಿಹುದಣ್ಣಾ ॥
ಘೋಷ ಸುಶಬ್ದದ ದಶಮದ್ವಾರದಿ ।
ಭಾಸುರ ಪರಮಣು ದ್ವಾರಣ್ಣಾ ೧

ಸೂಜಿಯ ಮೊನೆಕಿಂತ ಸೂಕ್ಷಕೆ ಅತೀತನು ।
ಶೂನ್ಯಕೆ ಬೆಳಗುತ್ತಿಹುದಣ್ಣಾ ॥ ಈ ಜಗವೆಲ್ಲವು
ಮೃಗಜಲದಂದದಿ । ಸಚ್ಚಿತ್ಸೂರ್ಯನ ಕಿರಣಣ್ಣಾ ೨

ಅನುಭವ ಯೋಗಿಗೆ ಅನುಕೂಲವಾಗಿಹುದನಿಮಿಷ ದೃಷ್ಟಿಲಿ
ಬಗೆಯಣ್ಣಾ ॥ ಘನಗುರು ಶಂಕರ ತನ್ಮಯನಾಗಿಹ ।
ಚಿನುಮಯ ಗುರುತವೆ ನಿಜವಣ್ಣಾ ೩

## ೭೧

ಪೂಜೆಯ ಮಾಡುವೆನೊ ಸದ್ಗುರುವಿನ ।
ಪೂಜೆಯ ಮಾಡುವೆನು ॥
ಮಾಜದೆ ತನು ಮನ ಧನವೆಲ್ಲ ಅರ್ಪಿಸಿ ।
ಪೂಜೆಯ ಮಾಡುವೆನು ಪ

ಗಣಪತಿ ಹರಿಹರರಾ ನಿಜಶಕ್ತಿ ದಿನಪತಿ ನಿಜಭಾಸವು ।
ತನುವೆಂಬ ಅಷ್ಟಕಂಬದ ಮನೆಯೊಳು ನಾಲ್ಕು
ಗುಣದ ಚೌಕಿಯನಿಡುವೆ ೧

ವೃತ್ತಿ ಉದಾಸೀನಕೆ ನಿರ್ಗುಣವಾದ
ಸುತ್ತ ರೇಖೆಯ ಬರೆದು । ಚಿತ್ತವೆಂಬಷ್ಟದಳದ
ಕಮಲದೊಳಿಷ್ಟಮೂರ್ತಿಯ ಧ್ಯಾನಿಸುವೆ ೨

ವೇದಾದಿ ಕಾರಣದಿ ಉಪನಿಷದಾದಿ
ಅರ್ಥದಿ ಶಿರಸಾಮೇದಿನಿ ಮೊದಲಾದ
ತತ್ತ್ವಭೂಷಣದಿಂದ ಆದಿನಾಥನ ಪೂಜೆಯ ೩

ಪ್ರವೃತ್ತಿ ಸ್ಥಾನದಲ್ಲಿ ಫಣಿಯಲ್ಲಿ ನಿವೃತ್ತಿ ವಿಭೂತಿಯು
ನಿರ್ವಾಂಚನೆಯಾದ ಆಚಮನ ಕೊಡುವೆನು
ಸರ್ವಾತ್ಮ ಗುರುಮೂರ್ತಿಗೆ ೪

ಭಕ್ತಿಯ ಜಲದಿಂದಲಿ ಸದ್ಗುರುವಿನ ನಿತ್ಯ ಚರಣ ತೊಳೆದು ।
ಮುಕ್ತಿಯ ಪಾವನ ಮಾಡುವ ಗುರುಪಾದ ತೀರ್ಥ
ವಂದಿಸಿಕೊಂಬುವೆ ೫

ಸದ್ವಾಸನೆ ಗಂಧವ ಶ್ರೀಗುರುವಿಗೆ ಚಿದ್ ವೃತ್ತಿಯಕ್ಷತೆಯು ।
ಸದ್ಭಾವದಿಂದಲಿ ತೋರುವ ಪರಿಮಳ
ಮದ್ಗುರುವಿನ ತನುವಿಗೆ ೬

ಮೂರು ಮಾತ್ರೆಯ ಹೊಸೆದು । ನಿರ್ಗುಣವಾದ ಧಾರವ
ಶಿವಸೂತ್ರಕ್ಕೆ । ತೋರುವ ವಿಶ್ವಚರಾಚರ ಪುಷ್ಪದ ಹಾರ
ಕೊರಳಿಗೆ ಹಾಕುವೆ ೭

ನಾನೆಂಬ ಧೂಪ ಸುಟ್ಟು ಸದ್ಗುರುವಿಗೆ ಜ್ಞಾನದೀಕಾರತಿಯು ।
ಬೋನ ನೈವೇದ್ಯ ಜೀವದ ಭಾವವರ್ಪಿಸಿ ಜ್ಞಾನ
ಕರೋದ್ವರ್ತಿಯ ೮

ವಾಚ್ಯಾರ್ಥ ತಂಬೂಲವಾ ಸದ್ಗುರುವಿಗೆ ।
ಲಕ್ಷ್ಯಾರ್ಥವೆ ದಕ್ಷಿಣಾ ಲಕ್ಷ್ಯಾತೀತಗೆ ಮಂಗಳಾರತಿ
ಬೆಳಗುವೆ ಅಕ್ಷಯ ಮಂತ್ರಪುಷ್ಪ ೯

ಸಂತ ಸನಕಾದಿಕರೂ ಸುರರೆಲ್ಲ ಅಂತರಿಕ್ಷದಿ ಬಂದರು ।
ತಂತಿ ಮದ್ದಳಿ ತಾಳ ಗೀತ ಶಂಖದ ವಾದ್ಯ
ತಿಂತಿಣಿಯಲಿ ಕುಣಿಯುತ ೧೦

ಅದ್ವೈತ ಸಾಷ್ಟಾಂಗವಾ ಸದ್ಗುರುವಿಗೆ । ಚಿದ್ಬೋಧದಿ
ಎರಗಲು ಶುದ್ಧಿ ಸಿದ್ಧಿಗಳೆಂಬ ಚರ್ಯವ ತೋರುವ
ಮುದ್ರೆ ಶ್ರೀ ಗುರುಗಿಟ್ಟೆನು ೧೧

## ೭೨

ಮಾಯದ ಮಾತೆಲ್ಲ । ಸುಳ್ಳದೆ ।
ಖರೆಯಾಗಿ ನಿಂತದೆ ಪ

ಗಂಧರ್ವಪುರದಿಂದ । ನೋಡಮ್ಮಾ । ಬಂಜೆಯ ಮಗ
ತಾ ಬಂದು । ಭೀಷ್ಮನ ಮಗಳಿಗೆ । ಮದುವ್ಯಾದ ೧

ಸೊಂಟನ ಕೈಯಿಂದ । ನೋಡಮ್ಮಾ ।
ಗಗನ ಪುಷ್ಪವ ತರಿಸಿ ।
ಕೊರಳೊಳು । ಮಾಲೆಯ ಹಾಕಿದರಂತೆ ೨

ಪರ್ವತ ಕೊನೆ ಮೇಲೆ । ನೋಡಮ್ಮಾ ।
ಮೃಗಜಲ ನದಿಯಂತೆ ।
ಅದರೊಳು । ಕಲ್ಲಿನ ಹರಗೋಲಂತೆ ೩

ಮೊಲವೆದ್ದು ಇರಿಯಲ್ಕೆ । ನೋಡಮ್ಮ ।
ಹರಗೋಲನ ಹರಿದು ।
ಒಳಗಿದ್ದ ಬಂಜಿಯ ಮಗ ಹರಿದ್ಹೋದಾ ೪

ಮೀನುಗಳಿಷ್ಟೂ ಕಂಡೂ । ನೋಡಮ್ಮ ।
ಶವ ತೆಗೆದು ಹೊರಗ್ಹಾಕಿ ।
ವನಕೊಯ್ದು । ದಹನವ ಮಾಡಿದವಂತೆ ೫

ಇಷ್ಟು ಕುರುಡಾ ಕಂಡಾ । ನೋಡಮ್ಮಾ ।
ಹೆಳವಾ ಹೇಳಲಿ ಬಂದಾ ।
ಕಿವುಡನಿಗೆ । ಮೂಕ ಹೇಳಿದನಂತೆ ೬

ಈ ಪರಿ ಸಂಸಾರ ನೋಡಮ್ಮಾ ।
ಮಾಯದ ವಿಸ್ತಾರ ।
ಶಿವರಾಮಾ ತಾ । ಕೇಳಿ ಬೆರಗಾದಾ ೭

## ೭೩

ಸಖ್ಯವ್ಯಾಕೆ ಮುಖ್ಯ ಸ್ವಹಿತ ಹೇಳದನಕ ।
ಮಕ್ಕಳು ಯಾಕೆ ಪಿತೃಗಳ ಆಜ್ಞೆಯ ನಡೆಸದನಕ ಪ

ದಾತನ್ಯಾಕೆ ಬಯಕೆ ಪೂರ್ಣ ಮಾಡದನಕ । ಬರಿ ।
ಮಾತು ಯಾಕೆ ಸ್ಥಿತಿಯ ಲೇಶ ಇಲ್ಲದನಕ ೧

ಸಂತನ್ಯಾಕೆ ಶಾಂತಿ ನೆರಳು ಹಿಡಿಯದನಕ । ತನು ।
ಕಂಥೆಯಾಕೆ ಶಿವಪದಕ್ಕೆರಗೋ ತನಕ ೨

ನೇಮವ್ಯಾಕೆ ಹೃದಯ ಶುದ್ಧವಾಗದ ತನಕ । ಶಿವನ ।
ನಾಮವ್ಯಾಕೆ ನಾಮರೂಪ ಅಳಿಯದ ತನಕ ೩

ಮತಿಗಳು ಯಾಕೆ ಶಿವರಾಮ ಪದಕೆ ನಿಲುಕದ ತನಕ । ಹರಿ ।
ಕಥೆಗಳು ಯಾಕೆ ಪ್ರೇಮ ತುಂಬಿ ತುಳುಕದ ತನಕ ೪

ಜಾಣನ್ಯಾಕೆ ಸಮಯ ಉಚಿತ ಅರಿಯದ ತನಕ । ಬರಿ
ಗಾನವ್ಯಾಕೆ ಸ್ವರದ ಲಯವ ಧರಿಸದ ತನಕ ೫

ಧರ್ಮವ್ಯಾಕೆ ಸಮಯ ಕಾಲಕ ಒದಗದ ತನಕ । ಸ- ।
ತ್ಕರ್ಮವ್ಯಾಕೆ ದಂಭತನವು ದಹಿಸದನಕ ೬

ಧನ ವಿದ್ಯಾತಕೆ ಶರಣರಡಿಗೆ ತರದನ್ನಕ । ಈ
ಮನ ವಿದ್ಯಾಕೆ ತನ್ನ ಉಗಮ ಸೇರದನ್ನಕ ೭

ಶಿಷ್ಯನ್ಯಾತಕೆ ಗುರುಗಳ ಹೃದಯ ತಿಳಿಯದನ್ನಕ । ಸರಸ
ಭಾಷ್ಯವ್ಯಾತಕೆ ಶ್ರುತಿಯ ಗರ್ಭ ಉಸುರದನ್ನಕ ೮

ಜ್ಞಾನವ್ಯಾಕೆ ಜ್ಞೇಯಗುರಿತವರಿಯದನಕ । ಬರಿ ।
ಧ್ಯಾನವ್ಯಾಕೆ ಚಿತ್ತವೃತ್ತಿ ಮರೆಯ ದನಕ ೯

ಆರಾಮವ್ಯಾಕೆ ದುಃಖಸೀಮಿ ದಾಂಟದನಕ । ಶಿ– ।
ವರಾಮನ್ಯಾಕೆ ಪೂರ್ಣ ಸುಖದೊಳಾಡದ ತನಕ ೧೦

## ೭೪

ಜೋ ಜೋ ಜೋ ಶ್ರೀ ಆತ್ಮಾರಾಮಾ ।
ಜೋ ಜೋ ಜೋ ನೀ ಸುಖ ಧಾಮಾ ।
ಜೋ ಜೋ ಸಾಧು ಸಜ್ಜನ ಪ್ರೇಮಾ ।
ಜೋ ಜೋ ಸಾಧು ಸಿದ್ಧ ಜ್ಞಾನಿ ನಿಃಸೀಮಾ ಪ

ಪಂಚಭೂತ ರತ್ನ ತೊಟ್ಟಿಲು ಮಾಡಿ ।
ಪಂಚ ವಿಂಶತಿ ತತ್ವ ನವಾರ ಹೂಡಿ ।
ಪಂಚಕೋಶವೆಂಬೊ ಹಾಸುಕೆ ನೋಡಿ ।
ಪಂಚ ತತ್ವಾತೀತ ಮೂರ್ತಿಯ ಪಾಡಿ । ಜೋ ಜೋ । ೧

ಪರಮ ಪುರುಷ ನಿತ್ಯ ನಿಜಸುಖ ರೂಪ ।
ಪರ ಸಚ್ಚಿದಾನಂದ ಕೀರ್ತಿಪ್ರತಾಪ ।
ಉರುತರ ಮಹಿಮನೆ ವಿರಹಿತ ಪಾಪ ।
ಶರಣ ಧ್ಯಾನಿಪ ನಿಜ ಹೃದಯ ಚಿದ್ದೀಪ ॥ ಜೋ ಜೋ ೨

ನಿರುತ ಸಿಂಧುಗಿ ಸಖ ಯತಿರಾಜ ಪುಂಗ ।
ಪರಿಪರಿ ವರವೀವ ಸಾಮರ್ಥ್ಯಸಂಗ ।
ಕರುಣಿಸೊ ಬೇಗದಿ ಗುರು ಕುಲೋತ್ತುಂಗ ।
ಧರೆಯೊಳ್ಯಾಳಗಿ ಶ್ರೀ ಗುರುರಾಮಲಿಂಗ ೩

## ೭೫

ಜಯ ಜಯ ಮಂಗಳಾ ಜಯ ಶುಭ ಮಂಗಳಾ ।
ಮಂಗಳಂ ಮಹ ಯೋಗಿ ಪುಂಗಗೆ ।
ಮಂಗಳಂ ಪಾಪೌಘ ಭಂಗಗೆ ।
ಮಂಗಳಂ ಯಾಳಗಿಯ ದೊರೆ ರಾಮಲಿಂಗನಿಗೆ ಪ

ಮೋದದಲಿ ದತ್ತಾವಧೂತನು ಪೇಳಿದನು
ಶ್ರೀಕಪಿಲ ಮುನಿವರ ।
ಗಾಧಿಯಂ ಮಣಿಚೂಲ ಶೈಲದ ಗುಹದಿ ತಪಮಾಡಿ ॥
ಮೇದಿನಿಯ ಜನರಿಂಗೆ ಸಹಜದಿ ವೇದ
ವೇದಾರ್ಥವನು ಬೋಧಿಸಿ ।
ಭೇದ ಬುದ್ಧಿಯ ಬಿಡಿಸಿ ಕೃಪೆಯನು ಮಾಡಿ
ಪೊರೆ ಎಂದು ೧

ಕಪಿಲಮುನಿ ಲಿಂಗಾಂಬಿಕೆಗೆ ತಾ ಸ್ವಪ್ನದಲಿ
ಪೇಳಿದನು ನಿಶ್ಚಯ ।
ಅಪರಿಮಿತ ವರ ಕೊಡುವ ಬೆಟ್ಟದ ರಾಮಲಿಂಗೇಶ ॥
ತಪವು ಮಾಡಲು ಕೊಡುವ ನೀ ತಪವು
ಮಾಡೆಂದು ಪೇಳಿದ ।
ಗುಪಿತ ಮೂಲವ ತೋರಿ ಬೋಧಿಸಿ
ಸುಖವ ಪಡೆ ಎಂದ ೨

ಮೊದಲು ಲಿಂಗಾಂಬಿಕೆಯು ಮನದಲಿ
ನೆನೆದು ಬೆಟ್ಟದ ರಾಮಲಿಂಗನ ।
ಪದುಳದಿಂ ಸೇವಾ ಪ್ರದಕ್ಷಿಣೆ ಭಕ್ತಿಭಾವದಲಿ ।
ಮುದದಿ ಪ್ರಾರ್ಥಿಸೆಗೈದು ಎನ್ನಗೆ ಸುತನ
ಕೊಡಬೇಕೆಂದು ಪ್ರಾರ್ಥಿಸೆ ।
ಸದಮಲಾತ್ಮರಾಮಲಿಂಗನು ಜನಿಸುತಿಹನೆಂದ ೩

ದೇವರಾಮನು ಕಲಿಯುಗದಿ
ಮಹಯಾಳಗಿಯ ಕರ್ಣಿಕರ ।
ಶ್ರೀ ವತ್ಸಾನ್ವಯದ ನರಸಿಂಹ ಸತಿ
ಲಿಂಗಾಂಬೆ ಗರ್ಭದೊಳು
ಪಾವನಾತ್ಮಕ ಜನಿಸಿ ಬೆಳೆದುದ್ದಾಮ
ಆನಂದಾಬ್ಧಿಯೊಳು ಸ- ।
ದ್ಭಾವದಿಂ ಮಣಿಚೂಲ ಶೈಲದಿ ತಪವನೆಸಗಿದಗೆ ೪

ಕೆಲವು ದಿನ ಮಣಿಚೂಲ ಶೈಲದ ಗುಹೆಯೊಳಗೆ
ತಪಗೈಯುತಿರೆ ಶ್ರೀ
ಮಲಹರಿಯು ಪ್ರತ್ಯಕ್ಷರೂಪದಿ
ಮಂತ್ರ ಬೋಧಿಸಿದ ॥
ಚೆಲುವ ರಾಮಪ್ಪಯ್ಯ ಮನದಲಿ ಹರುಷವಂ
ಕೈಕೊಂಡು ಸಿದ್ಧಿಯ
ಫಲವ ಪಡೆದನು ಮಂತ್ರ ಮಹಯೋಗಾದಿ ಸಿದ್ಧಿಗಳ ೫

ಗೌತಮಾನ್ವಯದಲ್ಲಿ ಜನಿಸಿ ಸುಕೀರ್ತಿ–
ಪಡೆದಪ್ಪಯ್ಯ ಗುರುವರ ।
ಮಾತು ಮಾತಿಗೆ ರಾಮಲಿಂಗನ ನೆನೆ
ನೆನೆದು ಮನದಿ ॥
ಸಾತಿಶಯ ಮಣಿಚೂಲ ಶೈಲವ ಸೇರಿ
ಕಂಡಿಹ ರಾಮಲಿಂಗನ ।
ಮಾತು ತಿಳುಹಿಸಿ ಗ್ರಹಕೆ ಕರಕೊಂಡು ಬಂದಿಹಗೆ ೬

ಪರಮ ತಾರಕ ಮಂತ್ರ ಕರ್ಣದೊಳೊರೆದ ಗುರು
ಅಪ್ಪಯ್ಯ ಮೂರ್ತಿಯ ।
ಚರಣವನು ಧ್ಯಾನಿಸುತೆ ಮಹಾ ವಾಕ್ಯಾರ್ಥ ಶೋಧಿಸಿದ ।
ಪರಿಪರಿಯ ವೇದಾರ್ಥವನು ಬಹು
ಹರುಷದಿಂ ಶಿಷ್ಯರಿಗೆ ಬೋಧಿಸಿ ।
ನಿರುತ ಬ್ರಹ್ಮಾಕಾರ ವೃತ್ತಿಯೊಳಿರುವ ಶರಣಂಗೆ ೭

ಪಂಚಲಿಂಗವು ಪಂಚ ತೀರ್ಥಗಳುಳ್ಳ
ಯಾಳಗಿ ಕ್ಷೇತ್ರದಲಿ ಪ್ರ– ।
ಪಂಚವನು ಪರಮಾರ್ಥ ಬುದ್ಧಿಯಲಿಂದ ನೆರೆಗೈದು ॥
ವಂಚನಿಲ್ಲದ ರಾಮಲಿಂಗ ವಿರಂಚಿ
ಭಾವದೊಳಿರ್ದು ಜನರಿಗೆ
ಹಂಚಿಕೆಯ ಪೇಳಿದನು ಇಲ್ಲಿಗೆ ಗಂಗೆ ಬರುತಿಹಳು ೮

ಇಂದು ವೇದ ರಸೈಕ ಶಕದ ವಿಕಾರಿವತ್ಸರ
ದಕ್ಷಿಣಾಯನ ।
ಛಂದದಾಶ್ವೀನ ಶುದ್ದ ಸಪ್ತಮಿ
ಸೌಮ್ಯ ವಾಸರದಿ ॥
ಸುಂದರದ ಜ್ಯೇಷ್ಠರ್ಕ ವೃಶ್ಚಿಕ ರಾಶಿ
ಶುಭದಿನ ತೃತಿಯ ಪ್ರಹರದಿ
ಹೊಂದಿದನು ಸುಸಮಾಧಿ ಸುಖವನು ರಾಮಗುರುವರನು ೯

ಸುರರು ಅಂಬರಕೇರಿ ಪುಷ್ಪದ ಮಳೆಯ
ಸುರಿದರು ಹರುಷದಿಂದಲಿ
ಪರಮ ವಿಸ್ಮಯವಾಗೆ ಸುರದುಂದುಭಿಯ ಧ್ವನಿಕೇಳಿ ॥
ಹರುಷ ದಿಂದಲಿ ಶಿರವ ನಲಿಯುತ ದೇವ
ಗಣಿಕೆಯರು ನೃತ್ಯ ಮಾಡುತ
ತರ ತರದಿ ಜಯ ಘೋಷ ಮಾಡುತ ಜನ ಸಹಿತವಾಗಿ ೧೦॥

ಜಯ ಜಯತು ಜಯ ನಿರ್ವಿಕಾರಗೆ ಜಯ
ಜಯತು ಜಯ ನಿರ್ವಿಶೇಷಗೆ ।
ಜಯ ಜಯತು ನಿಃಸೀಮ ಪರಮಾನಂದ ರೂಪನಿಗೆ ॥
ಜಯ ಜಯತು ಭಕ್ತಾಭಿಮಾನಿಗೆ ಜಯ ಜಯತು
ಮಹ ಸಿದ್ಧ ವರದಗೆ ।
ಜಯ ಜಯತು ಸಿಂಧಾಪುರದ ಸಖರಾಮ ಗುರುವರಗೆ ೧೧

## ೭೬

ಜಯ ಮಂಗಳಂ ಮಹಾ ಶುಭಮಂಗಳಂ ಕ್ಷಯ ರಹಿತ
ಗುರುಪಾದಾಂಗುಷ್ಠ ತೀರ್ಥಕ್ಕೆ । ಜಯ ಮಂಗಳಂ ಪ

ಚರಣ ನಾಲ್ಕುಗಳಿಂದ ತೋರುತಿಹ ಜಗದುದಯ
ಚರಣಮಯ ಜಗವೆಂದು ತಿಳಿದು ನಿಜದಿ

ಚರಣ ತೀರ್ಥವ ನಿರಂತರ ಸೇವಿಸುವ ಜನರ
ಜನನ ಮರಣವ ಹಿಂಗಿಸುವ ತೀರ್ಥಕ್ಕೆ ೧

ಅಜ್ಞಾನ ಮಲನಾಶನವಾದುದದರಿಂದ ಸುಜ್ಞಾನ
ವೈರಾಗ್ಯ ಸಿದ್ಧಿಸುವದು ವಿಜ್ಞಾನ
ಮನದಿ ಉಭಯ ಪದದಲಿ
ಐಕ್ಯ ಜಿಜ್ಞಾಸೆ ಹರಿದು ಮುಕ್ತಿಯ ಕೊಡುವ ತೀರ್ಥಕ್ಕೆ ೨

ಕಷ್ಟಭವ ದಾರಿದ್ರ್ಯದಿಂ ಬಿಡಿಸಿ ಆರ್ತ
ಜನರಿಷ್ಟ ಪೂರಿತ ಶಾಂತಿ
ಪದದಿ ನಿಂದು ತುಷ್ಟಮನದಿಂ ಬಿಡದೆ
ಗುರು ರಾಮನಂಘ್ರಿಯಲಿ
ನಿಷ್ಠೆಯುಳ್ಳರ ಭ್ರಾಂತಿ ಬಿಡಿಸುವ ತೀರ್ಥಕ್ಕೆ
ಜಯ ಮಂಗಳಂ ಮಹಾ ಶುಭ ಮಂಗಳಂ ೩

## ೭೭

ಸಿದ್ಧಬಸವ ಪ್ರಸಿದ್ಧನ ಮಹಿಮೆಯ ಕೇಳಿರಿ ನೀವಿನ್ನು ।
ವಿದ್ಯಾ ಬುದ್ಧಿ ಧನ ಧಾನ್ಯವನು ಸಿದ್ಧಿಸುವವಿನ್ನೂ ಪ

ಶಿವನ ಅಪ್ಪಣೆ ತೆಗೆದುಕೊಂಡು ಶಿವಕಂಚಿಯೊಳಗೆ ।
ಪಾವನ ಚರಿತ ಬ್ರಾಹ್ಮಣನಲ್ಲಿ ಪುಟ್ಟಿದನು ಬೇಗ ॥
ದಿವಸ ದಿವಸಕೆ ಬೆಳೆದನು ಬಿದಗಿ ಚಂದ್ರಮನ ಹಾಗೆ ।
ಜಾವ ಜಾವಕೆ ಶಿವನ ಧ್ಯಾನವ ಮಾಡುವ ಮನದೊಳಗೆ ೧

ಮುಂಜಿ ಮಾಡಿಸಿಕೊಂಡನು ಸಿದ್ಧನು ಮದುವೆಯಾಗಲಿಲ್ಲ ।
ರಂಜಿಸುತಿಹನು ಸೂರ್ಯನಂತೆ ತೋರುವ ಜಗಕೆಲ್ಲ ॥
ಬಂಜೆ ಒಬ್ಬಳು ಇದ್ದಳು ಆಕೆಗೆ ಮಗನ ಕೊಟ್ಟನಲ್ಲ ।
ಸಂಜೆ ಹಗಲು ಕಾಣದ ಕುರುಡಗ ಕೊಟ್ಟನು ಕಣ್ಣುಗಳ ೨

ತಂದೆ ತಾಯಿಗೆ ಹೇಳಿದನಾಗ ಪೋಗುವೆ ನಾನೆಂದು ।
ಕಂದ ನಮ್ಮನು ಬಿಟ್ಟು ಪೋಗುವದುಚಿತವೆ ನಿನಗೆಂದು ॥
ಅಂದ ತಾಯಿಗೆ ವಂದಿಸಿ ಹೇಳಿದ ಮಗನಾಗುವೆನೆಂದು ।
ಸಂದೇಹವು ಬೇಡೆಂದು ಪೇಳುತ ತೆರಳಿದ ದಯಾಸಿಂಧು ೩

ಮಹಾಶಿವಾಲಯ ಕಂಡನು ಸಿದ್ಧನು ದೇಶ ತಿರುಗುತಲಿ ।
ಆ ಸೀಮೆಯಲಿ ಹಳ್ಳದ ನೀರು ನಿರ್ಮಲ ನೋಡುತಲಿ ॥
ಆಸನ ಹಾಕಿ ಕುಳಿತನು ಶಿವನ ಧ್ಯಾನವ ಮಾಡುತಲಿ ।
ಆ ಸಮಯದಿ ಬಂದನು ಕರಣಿಕ ಹೊಲಗಳ ನೋಡುತಲಿ ೪

ಕರಣಿಕ ಸಿದ್ಧನ ಕಂಡು ನಮಿಸುತ ಕರಗಳ ಮುಗಿದಿಹನು ।
ವರವ ಬೇಕಾದದ್ದು ಬೇಡು ಕೊಡುವೆನು ನಾನಿನ್ನು ॥
ಗುರುವೆ ಸಂತತಿ ಇಲ್ಲವು ಬೇಗನೆ ಕೊಡಬೇಕೈ ನೀನು ।
ಹರುಷದಿ ಹರಿಸಿದ ಉದ್ದಂಡ ಸಂತತಿ ಆಗಲಿ ಇನ್ನು ೫

ನಿನ್ನಯ ಪೂಜೆಯ ಮಾಡುವದ್ಹೇಗೆ ಹೇಳೋ ನಮಗೀಗ ।
ಮನ್ನಿಸಿ ಅವಗೆ ಪೇಳಿದ ಸಿದ್ಧ ಪುರುಷನು ತಾ ಬೇಗ ॥
ಸಣ್ಣ ಬಿಂದಿಗೆಯನಿಟ್ಟು ದ್ವಿಜರ ಪಾದೋದಕವೀಗ ।
ಸಂಖ್ಯೆಯಿಲ್ಲದ ಕೊಡಗಳ ಹಾಕಲು ತುಂಬದು ಎಂದೀಗೆ ೬

ಅಂದಿಗೆ ಉಂಟು ಇಂದಿಗೆ ಇಲ್ಲ ಎನಲಾಗದು ನೀನು ।
ಸಂದೇಹವಿಲ್ಲ ಆಶ್ವೀನ ವದ್ಯ ದ್ವಿತೀಯದ ದಿನವು ॥
ಇಂದಿಗೆ ಕರಣಿಕ ವಂಶದವರು ಮಾಡುತಾರೆ ಇನ್ನೂ ।
ಮುಂದಕೆ ತೆರಳಿ ಕೊಳಕೂರಕೆ ಬಂದ ಸಿದ್ಧ ತಾನು ೭

ಗಾಣಿಗರ ಮನೆಯೊಳಗಿದ್ದು ಗಾಣಾ ಹೂಡಿದನು ।
ಪ್ರಾಣ ತೊಲಗಿದ ಹೆಣ್ಣುಮಗಳಿಗೆ ಪ್ರಾಣವನಿತ್ತಾನು ॥
ಗೋಣಿಯೊಳಗೆ ಹೊಲಿದು ನದಿಯಲಿ ಪಾಚ್ಛಾ ಹಾಕಿದನು ।
ಕಾಣಿಸದಂತೆ ಬೇಗನೆ ಹೊರಗೆ ಹೊರಟು ಬಂದಾನು ೮

ಹೆಸರು ನಿನ್ನದು ಏನು ಎಂದು ಪಾಚ್ಛಾ ಕೇಳಿದನು ।
ಹೆಸರು ನನಗೆ ಬಸವನೆಂದು ಕರೆತಾರೆ ಇನ್ನು ॥
ಪಶು ನೀನಾದರೆ ಸೊಪ್ಪಿಯ ಬೇಗ ತಿನಬಾ ಎಂದನು ।
ನಸು ನಗುತಲಿ ಸೊಪ್ಪಿಯ ತಿಂದು ಡುರಕಿ ಹೊಡೆದಾನು ೯

ಗೊಂಬಿಗೆ ವಸ್ತ್ರಾ ಸೀರೆಯನುಡಿಸಿ ಸಿಂಗಾರ ಮಾಡಿದನು ।
ರಂಭೆಗೆ ಸರಿ ಈ ಹೆಣ್ಣು ಮಗಳಿಗೆ ಮದುವ್ಯಾಗೋ ನೀನು ॥

ಅಂಬುಜ ಮುಖಿ ಬಾರೆಂದು ಕರೆದನು ಸಿದ್ಧ ಮುನೀಶ್ವರನು ।
ತುಂಬಿದ ಬಸುರೊಳು ಮಗನ ಪಡೆದಳು ವಂಶಾದೆ ಇನ್ನು ೧೦॥

ನೇಮವ ಮಾಡಿ ಕೊಳಕೂರದಿ ಇರುವೆನು ನಾನೆನುತ ।
ಈ ಮಹಿಮೆಯೊಳಗೆ ಭೀಮಾ ದಕ್ಷಿಣವಾಹಿನಿ ಮಹಾಕ್ಷೇತ್ರ ॥
ಗ್ರಾಮಸ್ಥರನು ಕರೆದು ಹೇಳಿದನು ಅಡಗುವೆ ನಾನೆನುತ ।
ನೀವು ಮಾತ್ರ ನಾವಿದ್ದ ಸ್ಥಳವನು ನೋಡಬೇಡೆನುತ ೧೧

ಕಲಿಕಾಲವನು ಕಂಡು ಸಿದ್ಧನು ಅದೃಶ್ಯನಾದನು ।
ತಿಳಿದು ಭಕ್ತಿ ಮಾಡಿದವರಿಗೆ ವರಗಳ ಕೊಡುತಿಹನು ॥
ಸುಳಿವನು ಕಣ್ಣಿಗೆ ಸತ್ಪುರುಷರಿಗೆ ಸಿದ್ಧ ಬಸವ ತಾನು ।
ಹಲವು ಹಂಬಲ ಮಾಡಲು ಬೇಡರಿ ಇರುವೆ ನಾನಿನ್ನೂ ೧೨

ಹನ್ನೆರಡು ನುಡಿ ಸಿದ್ಧನ ಸ್ತೋತ್ರವ ಕೇಳಿದವರಿಗೆ ।
ಮುನ್ನ ಮಾಡಿದ ಪಾಪವು ನಾಶಾಗಿ ಹೋಗುವದು ಬೇಗ ॥
ಧನ್ಯನಾಗುವ ಕೀರ್ತಿ ಪಡೆಯುವ ಲೋಕದ ಒಳಗ ।
ಚನ್ನಾಗಿ ಶ್ರೀಪತಿ ಗುರುವಿಠ್ಠಲನು ಒಲಿವನು ತಾ ಬೇಗ ೧೩

## ೭೮

ತನ್ನೊಳಗಿಹುದು ತನಗೆ ತಿಳಿಯದು । ತನ್ನಂಥ ಮಹಿಮಗೆ
ತೋರುವದು । ಇನ್ನೊಬ್ಬ ಮೂಢಗೆ ತೋರಿಸೆನೆಂದರೆ
ಸಕ್ಕರಿಯೊಳಗಿನ ಸವಿ ಇದ್ಧಾಂಗೆ । ಹಾಂಗೆ ನಿಜವಸ್ತು ೧

ನೂಕದು ಪೀಕದು ದೇಹಕ್ಕೆ ತಾಕದು । ಏಕಾಗಿ ಇಹುದು
ಮಾತಾಡದು ಪ್ರಾಕೃತ ಜನರಿಗೆ । ಮುಸುಕು ಹಾಕಿಹುದು ಕಾಷ್ಠದ
ಒಳಗಿನ ಅಗ್ನಿ ಇದ್ಧಾಂಗೆ । ಹಾಂಗೆ ನಿಜವಸ್ತು ೨

ಕಣ್ಣಿಗೆ ತೋರದು ಬೈಲಾಗಿ ಹೋಗದು । ಕಣ್ಣಿಗೆ ಕಣ್ಣಾಗಿ
ನಿಂತಿಹುದು । ಹೆಣ್ಣಿಗೆ ಗಂಡಿಗೆ ಕುಣಿಸ್ಯಾಡುತಿಹುದು ।
ಕುಸುಮದ ಒಳಗಿನ ಪರಿಮಳದ್ಹಾಂಗೆ । ಹಾಂಗೆ ನಿಜವಸ್ತು ೩

ಕೆಳಗದ ಮೇಲದ ಎಡಕದ ಬಲಕದ ಹಿಂದದ ಮುಂದದ
ಜಡವದ । ಒಳ ಹೊರಗೆ ತುಂಬೇದ ಬ್ರಹ್ಮಾಂಡ ಮೀರೇದ ।
ಚಂದ್ರನ ಒಳಗಿನ ಬೆಳದಿಂಗಳ್ಹಾಂಗ ಹಾಂಗೆ ನಿಜವಸ್ತು ೪

ನರಸಿಂಹ ಸದ್ಗುರು ರಾಮನ ದಯದಿಂದ ಪರವಸ್ತು ಎನಗೆ
ಪ್ರಕಟಾಯಿತೊ ಪರರ ಮುಖದಿಂದ
ಹೇಳುವದಲ್ಲ । ಪರವಸ್ತು ತಿಳಿದಂಥ ಯೋಗಿಯೆ
ಬಲ್ಲಾ ॥ ಹಾಂಗೆ ನಿಜವಸ್ತು ೫

## ೭೯

ಆಶೆ ಅಳಿಯದೆ ಮನದ ರೋಷವಡಗದೆ ।
ವೇಷ ದಂಭಕಗೆಲ್ಲಿ ಶಿವಯೋಗವು ಪ।

ತನ್ನ ತಾನರಿಯದೆ ಉನ್ಮತ್ತದಿಂದಲಿ
ನನ್ನದು ನಾನೆಂದು ಜಲ್ಪಿಸುತ ॥ ಕುನ್ನಿಯಂದದಿ ಕೋಟಲೆ
ಯೊಳಗಿಹ ಹೀನ ಮನುಜಗೆಲ್ಲಿ ಶಿವಯೋಗವು ೧

ಎಲಬು ತೊಗಲು ಮಲ ಮೂತ್ರದಿ ತೋರುವ ।
ಹೊಲಸಿನ ದೇಹವು ತಾನೆನುತ ॥ ಹಲವು ಪಾಪಂಗಳನು
ಹೇಸದೆ ಮಾಡುವ । ಕುಲಹೀನನಿಗೆಲ್ಲಿ ಶಿವ ಯೋಗವು ೨

ಆರು ವೈರಿಗಳಿಗೆ ವಶವಾದನು ಈ ದೀನ । ವಾರಿಜನಾಭನ
ಚರಣವನು ॥ ಸೇರಿ ತನ್ನ ಹಿತವ ಮಾಡಿಕೊಳ್ಳದಾ– ।
ಚಾರಿಗೇಡಿಗೆಲ್ಲಿ ಶಿವ ಯೋಗವು ೩

ಮೂರು ದೇಹಕೆ ಮೀರಿ ಬೇರೆ ತಾನಾಗದೆ । ಆರು ಇಂದ್ರಿಯ
ಗಳಿಗೆ ವಶವಾಗಿಯು ॥ ನಾರಿಯರ ಸಂಗ ಸುಖವ ಬಯಸುವ ।
ಕ್ರೂರ ಮನುಜನಿಗೆಲ್ಲಿ ಶಿವ ಯೋಗವು ೪

ಶ್ರೀ ಗುರು ವಿಶ್ವಪತಿಯ ಪದ ಕಮಲವ । ಬೇಗದಿ ಸೇರಿ ಸುಖಿಯಾದೆ ॥
ರಾಗರೋಷದಿ ತನ್ನಾಡಿತವ ತಾ ಮರೆತಂಥ ।
ಭೋಗಲಂಪಟಗೆಲ್ಲಿ ಶಿವಯೋಗವು ? ೫

## ೮೦

### ಶಿವರಗಳೆ

ಉದಯದಲೆದ್ದು ಸದಾಶಿವ ಎನ್ನಿ ।
ಅದರಿಂದಲಿ ಸದ್ಗತಿಗಿರುವದು ಒಂದೇ ಹಾದಿ ।
ನಾನಾ ಗ್ರಂಥಗಳ್ಯಾತಕ ಓದೀ ।
ಓದಿದರೋದಲಿ ಬೇಕಧ್ಯಾತ್ಮಾ ॥
ಸಾಧಿಸಿ ಬರುವನು ಶಿವ ಸರ್ವೋತ್ತಮಾ
ಸರ್ವೋತ್ತಮ ತಿಳಿದರೆ ಸಾಕು ।
ಅನೇಕ ಶಾಸ್ತ್ರಗಳೇತಕೆ ಬೇಕು ।
ಬೇಕೆಂಬೋದೇ ಬಿಡುವದೆ ಪರಮಾರ್ಥ
ಲೋಕದ ಪರಿಯಲ್ಲಿರುವದೆ ಸ್ವಾರ್ಥ ।
ಸ್ವಾರ್ಥಕೆ ಪರಮಾರ್ಥಕೆ ಬಹು ದೂರಾ ।
ಎರಡೂ ಸಮನಿಸಿದವನೇ ಧೀರಾ ॥
ಧೀರ ಉದಾರಗೆ ಆರ ಹಂಗಿಲ್ಲಾ ।
ಸೂರೆಗೊಂಡನು ಮೂಜಗವೆಲ್ಲಾ ।
ಎಲ್ಲರಿಗೆ ತಾ ಬಲು ಕಿರಿದಾಗಿ ।
ಬಲ್ಲತನದ ಬಡಿವಾರವಹೀಗಿ
ನೀಗಿ ನಿಶ್ಚಿಂತ್ಯಾದರ ತ್ಯಾಗಿ ॥
ತ್ಯಾಗವು ಬಲಿತರೆ ಅವನೇ ಯೋಗಿ
ಯೋಗಿಗೆ ಮೂಲಾ ಐಕ್ಯದ ಮಾಟಾ ।
ಬೇಗನೆ ತಿಳಿಯದು ಜೀವ ಶಿವ ಕೂಟಾ ।
ಕೂಟವ ತಿಳಿಯದೆ ಯಾತರ ಜ್ಞಾನಿ ।

ಚಾಟಕನಾದರೆ ಜ್ಞಾನಕೆ ಹಾನಿ
ಹಾನಿಗೆ ಹಾನಿ ತಂದವ ಜಾಣಾ
ಸ್ವಾನುಭವದಲಿದ್ದವ ಪ್ರತಿಗಾಣಾ ।
ಪ್ರತಿಗಾಣನು ಶಿವರತಿಯುಳ್ಳವನು ।
ಗತಿ ಬಯಸುವನು ಗುರು ಚರಣವನು ।
ಚರಣಗಳಲ್ಲಿ ವರಗಳು ಉಂಟು ।
ಗುರುಹಿರಿಯರಿಗೆ ಶರಣು ಹೋಗಿರಿ ।
ಪರಿಣಾಮದ ಘೋರಿಗೆ ಪರಿಪರಿ ಸ್ತುತಿಗಳು ।
ಪರಿ ಪರಿಸ್ತುತಿಗೆ ಪರಿಪರಿ ಪೂಜೇ ।
ಪರಿಪರಿ ಪೂಜೆಗೆ ಪರಿಪರಿ ವಾಜೇ ॥
ವಾಜಿ ಒಂದಾದರೆ ಸಹಜವೆ ತಾನು ।
ಮೂಜಗದೊಳಗಿದು ಸೋಜಿಗವೇನು ।
ಸೋಜಿಗವೆಂಬದು ಶ್ರಮದಲಿ ಮಾಯಾ ।
ವಾಜಿಗಾರ ಶಿವ ಬಲ್ಲ ಉಪಾಯಾ ।
ಉಪಾಯ ಹೇಳಲು ಜಡ ಜೀವರಿಗೆ ।
ಅಪಾಯ ಕಾಣ್ಬುದು ಬೇಕಿಲ್ಲದವಗೆ ।
ಅರಿಗಳ ಮೇಲುವುದು ಜನ್ಮದ ಭಯಕೆ ।
ಕರೆವುತಲ್ಯಾದೆ ಮುಕ್ತಿ ಭರದಲಿ ।
ಕೂಗಿರಿ ಕೂಗಿರಿ ಜಾಗರದವರು ।
ಹೇಗೋ ಎಂತೋ ಸದಾಶಿವನಾಟಾ ।
ಮಾರ್ಗವ ತಿಳಿದರೆ ಅದು ಬಹು ನೀಟಾ ।
ನೀಟಿರಲಿಕ್ಕೆ ಡೊಂಕನೆ ಮಾಡಿ ।
ಅನೇಕ ಜನ್ಮದ ಕಂಟಕ ಕೂಡಿ ।
ತೋಡಿಗೆ ಓಡಿಗೆ ಯಾತರ ಭಾವ ।
ಆಡಲಾಗದೂ ಶಿವನೇ ಕಾವಾ ।
ಕಾವುದು ಕೊಲ್ವುದು ದೇವರ ಕೈಯ್ಯ
ಪಾವನ ಮಾಡೊ ಗುರು ನಮ್ಮಯ್ಯ ।
ನುಡಿದರೆ ಆತನು ನುಡಿಸುವದೆ ಸಾರು ।
ನೋಡಿದರಾತನ ನೋಟವೆ ಸ್ಪರ್ಶಾ ।

ಓಡಿದರಾತನು ತಾನೇ ಪುರುಷ ।
ನೊಂದದೆ ಬೆಂದದೆ ಹೊದಿಸುವನಲ್ಲ ।
ಬಂದಾನದಕಡೆ ಘೋದಿಸುವನಲ್ಲ ।
ಕಾಯುವನು ಗುರು ಸಂಸಾರದಿ ನೊಂದಾ ।
ಸುರರೂ ತೋರದು ಸುಖ ಸಂವಾದಾ ।
ಭೋರನೆ ಕರೆವುದು ನಾಲ್ಕು ವೇದಾ ।
ವೇದವಿಕಾರಗೆ ವೇದ ಮೂಲಾ ।
ಆದರೆ ಅವಗೆ ವೇದವೆ ಶೂಲಾ ।
ಶೂಲಕೆ ಬಿದ್ದನು ದೇಹಾಭಿಮಾನಿ ।
ಕಾಲವ ಗೆದ್ದನು ಆತ್ಮಜ್ಞಾನಿ ।
ಜ್ಞಾನಿಗೆ ಲಕ್ಷಣ ಹೇಗಿರಬೇಕು ।
ಏನೇನುಳಿಯದು ಮನಸಿನ ಕಾಕು ।
ಕಾಕು ಬುದ್ಧಿಗೆ ಶರಣು ಮಾಡಿ ।
ಲೋಕದೊಳಗೆ ಇರುತಿಹನೆ ಕೂಡಿ ।
ಕೂಡಿದರಾತನು ನೀರಿಗೆ ನೀರು ।
ಪುರುಷನೆಂಬುವನು ಪುರದಲಿ ವಾಸಾ ।
ಇರುತಿಹನು ಹಿಂಡನಗಲಿ ಉದಾಸಾ ।
ಉದಾಸದ ಸಾಧ್ಯೆರ್ಯದ ಮೇರು ।
ಸದಾ ಶರಣನ ಬಯಕೆ ಐನೂರು ।
ಎಣಿಕೆಯಿಲ್ಲದೆ ಶರಣನು ಮಾಡಿ ।
ತಿಣಿಕ್ಯಾಡಿ ನೀವ್ ದಣಿಯಲಿ ಬ್ಯಾಡಿ ।
ಹಣಿ ಮಣ ಕಾಲು ದಡ್ಡಾದದ ನೋಡಿ ।
ದಶಗ್ರಂಥಗಳು ಪಠಿಸಿ ಮುಖಕಾಗಿ ।
ಆಗಮ ತಿಳಿಯದೆ ಯಾತಕೆ ಕೂಗಿ ।
ಕೂಗಿ ಕೂಗಿ ಬಲಿದಾರೇನಾ ।
ಬಳಿಗೆ ಬಂದಿತೇ ಆತ್ಮಜ್ಞಾನಾ ।
ಆತ್ಮಜ್ಞಾನಕೆ ಅವಘಡವ್ಯಾಕೆ ।
ತೀರ್ಥಯಾತ್ರೆಗೆ ತಿರುಗಲಿ ಬೇಕೆ ।
ಹಿರದಿರಲಿಕ್ಕೆ ಕಿರದರ ಸಂಗ ।

ಕರೆಯದೆ ಬಂತಭಿಮಾನದ ಭಂಗ ।
ಕಾಮಿಸಿ ಮೋಹಿಸಿ ಪಡೆವನು ಸ್ವರ್ಗ ।
ನಂಬಿದವರಿಗೆ ಜನ್ಮದಪವರ್ಗ ।
ದಾನವಕೊಟ್ಟರೆ ಜ್ಞಾನಕೆ ಸರಿಯೆ ।
ಆನೆ ಕುದುರೆ ಕಟ್ಟಲವ ದೊರೆಯೆ ।
ರಥದಲಿ ಪರ್ವತ ಶಿಖರವನೇರಿ ।
ಹತಗೊಂಡಿಹನು ಅವಘಡ ತೋರಿ ।
ಖಂಡಿಸಿ ದಂಡಿಸಿ ದೇಹವ ಕೂಡಿ ।
ಮಂಡಿಸಿ ಪ್ರಲಯದಿ ಮುಕ್ತಿಯ ಬೇಡಿ ।
ಮಸಗುಣ ಅಧ್ಯಾತ್ಮಕೆ ಉಂಟೆ ।
ಕಾಮಶಾಸ್ತ್ರ ಸನ್ಯಾಸಿಗೆ ಉಂಟೆ ।
ಅಗಣಿತ ದುರ್ಲಭ ಬ್ರಹ್ಮಜ್ಞಾನ ।
ಸಹಜವಾದರೆ ಆತ್ಮನಿದಾನ ।
ಸ್ನಾನ ಕವಚ ಮಾನಸವೇ ಮೋಕ್ಷ ।
ಮೀನ ಮಾಡಿತದಕೇನೋ ಅಪೇಕ್ಷಾ ।
ಗಾಳಿಯ ಭಕ್ಷಿಸಿ ಪಾಲಿಸಿ ಗಾತ್ರಾ ।
ವ್ಯಾಳ್ಯಕೆ ದೊರಕದು ತಪಸಿನ ಸೂತ್ರಾ ।
ತರಿದು ತೊಪ್ಪಲವ ಮೆಲವದಕೇನು ।
ಕುರಿ ತಾ ಮೆಲುವುದು ಅದು ತಪಸೇನು ।
ಇಲಿ ನೆಲದೊಳು ತಾ ವಾಸ ಮಾಡಿ ।
ನೆಲೆಗಾಣುವದೇ ಗತಿಗೆ ಕೂಡಿ ।
ಕತ್ತೆ ಬೂದಿ ಬೂದಿ ಹುಸಿ ಬತ್ತಲೆಯ ।
ಹೊತ್ತಿತೆ ಹಿರೆತನವಾಯಿತೆ ಯೋಗಿ ।
ಬಕ ಕುಳಿತಂತೆ ಮಾಡುವ ಧ್ಯಾನ ।
ಅವರಿಗೆ ದೊರಕದು ಬ್ರಹ್ಮಜ್ಞಾನ ।
ಹಟಯೋಗದಿ ವಾಯು ದಣಿಸುವದೇಕೆ ।
ಷಟ್ ಚಕ್ರಗಳು ಸಾಧಿಸಬೇಕೆ ।
ಸ್ಫಟಿಕ ವರ್ಣಕೆ ಪರಬ್ರಹ್ಮನು ಬೇಕೆ ।
ಸಾಕು ಸಾಕು ನಿಮ್ಮ ಯೋಗಭಿಮಾನ ।
ಬೇಕಾದರೆ ತಿಳಿ ಆತ್ಮಜ್ಞಾನ ।

ಆತ್ಮಜ್ಞಾನಕೆ ಅವಘಡವ್ಯಾಕೆ ।
ಪರಮಾನ್ನಕೆ ಶಿವದಾನವು ಬೇಕೆ ।
ಯಂತ್ರೋದ್ಧಾರವ ಕಲಿತರೇನು ।
ಮಂತ್ರದ ಜಪ ಬಲಿದರೇನು ।
ಅಗಣಿತ ದುರ್ಲಭ ಬ್ರಹ್ಮಜ್ಞಾನ ।
ಸಿದ್ಧಗುರು ತ್ರಿಪುರಾಂತಕ ಧ್ಯಾನ ।
ಪ್ರಕಾಶ ಮುಖದಲಿ ಹೇಳಿದ ರಗಳಿ ।
ಶಿವ ಸಾಯೋಜ್ಯವೆ ಬೈಲನೆ ಹೊಗಳಿ ॥

## ೮೧

## ಅಕ್ಷರ ಮಾಲಾ

ಅದ್ವೈತ ಅಗಣಿತ
ಆದ್ಯಂತ ರಹಿತ
ಇಹ ಪರಕೆ ವರ್ಜಿತ
ಈಶ್ವರಯ್ಯ ।
ಉದಯಾಸ್ತಗಳಿಲ್ಲ
ಊ(ಉ)ಚ್ಚ ನೀಚಗಳಿಲ್ಲ
ಋಷಿಯ ಮೂಲವ ಬಲ್ಲವರಾರಿಲ್ಲ
ಌ ಚೇಕಗಳಿಲ್ಲ
ೡ ಗಳಿಲ್ಲ
ಏಕಮೇವ ತಾನೆಲ್ಲ
ಐಕ್ಯ ಮೊದಲಿಗಿಲ್ಲ ಸೌಖ್ಯಾನಂದ
ಓದಲಿಕೆ ಅಳವಲ್ಲ
ಔದಾಸೀನ ಶೀಲ
ಅಂತ ತಿಳಿಯದು ಬಹಳ
ಅ:(ಹ)ರ್ನಿಶಿಯಲಿ ॥ ಹರ ಹರಾ ಮಹಾದೇವ ಶಿವ ಶಿವ
ಮಹಾದೇವ ಶಂಕರಾ ಮಹಾದೇವ ದೇವ ದೇವಾ ೧

ಕರುಣ ಸಾಗರ ಗುರುವೆ
ಕಾರುಣ್ಯ ಮೂರ್ತಿ ನೀ
ಕಿರಣ ಕೋಟಿ ಪ್ರಕಾಶ ಮಹಿಮ
ಕೀರ್ತಿ ನಿಮ್ಮದು ಬಹಳ
ಕುಳಿತಲ್ಲಿ ನಿಂತಲ್ಲಿ
ಕೂ(ಖೂ)ನ ನಾ ತಿದ್ದದೆ ಕಾಲಿಲೊದ್ದು
ಕೇಳಿ ಬಂದೆನು ಮಹಿಮೆ
ಕೈ ಮುಗಿದು ಶರಣೆಂಬೆ
ಕೋಟಾಳ (ಕೋಟಲೆ) ನಮ್ಮದು ಬಿಡಿಸು ದೇವಾ
ಕೌ (ಕವಿ)ದು ಕೊಂಡಿದೆ ಮಾಯೆ
ಕಂಬನಿಯ ತೆರೆ ಗುಡಿದು
ಕಃ(ಷ)ಷ್ಟ ಕಷ್ಟ ಜನ್ಮ ಬಹಳ ಕಷ್ಟ ॥ ಹರಹರಾ ೨

ಖಳರ ಸಂಗತಿಯಿಂದ
ಖಾತಿಗೆ ನಾ ಬಿದ್ದೆ
ಖಿನ್ನನಾದೆ ಅಳುಕಿ ಭಿನ್ನನಾದೆ
ಖೀ(ಕೀ) ಸುತಿದೆ ಬಲು ಬಯಕೆ
ಖುರ ಖುರಿ ಗುಟ್ಟುತಲಿ
ಖೂನ ತೋರಿಸಿ ನಮ್ಮ ಕಡೆದಾಟಿಸು
ಖೇದವನು ಬಡಲಾರೆ
ಖೈರದ ಮನೆಯಲಿ
ಖೋಡಿತನ ನಮ್ಮದು ಬಿಡಿಸು ದೇವ
ಖೌ(ಖವ)ಟ ಮನವನು ಬಿಡಿಸಿ
ಖಂ ಮಗೆ (ಖಮಂಗ) ಮಾಡಯ್ಯ
ಖಃಖಃ ಎನುತಲಿ ಕೆಮ್ಮಲಾರೆ ॥ ಹರಹರಾ ೩

ಗದ್ದಲ ಮನದಿಂದ ತಿದ್ದಲಾರದೆ ಹೋದೆ
ಗಾವಿಲ ನಾನಾದೆ ಕರುಳನಾದೆ
ಗಿರಿಜೇಶ ನೀ ಕೇಳು ಪ್ರಳಯಕ್ಕೆ ಒಳಗಾದೆ ಉಳಿದು
ಕೊಂಡರೆ ನಿಮ್ಮ ಮರೆಯೆನೆಂದು ।

ಗೀತ ಹಾಡಿದರೇನು ನಾಥನನು ಕೊಳಲಿಲ್ಲ ಪ್ರೀತಿಗಳು
ನಡಲಿಲ್ಲ ಗುರುವಿನಲ್ಲಿ ।
ಗುಣಕರ್ಮಕಾಡುತಿದೆ
ಗೂಳಿಯನೆ ಮಾಡುತಿದೆ
ಗೆಲವ ಹಾದಿ ಬಯಲ ಜ್ಞಾನವಿಲ್ಲ ।
ಗೈಯಾಳ ತನದಿಂದ ಹೈಯಾಲಿಕೆಗೆ (ಹುಯಿಲಿಕೆಗೆ) ಬಿದ್ದು
ಗೊಡ್ಡತನ ಎಷ್ಟೆಂತು ಹೇಳಲಯ್ಯ
ಗೌಪ್ಯದ ಮನೆಯೊಳಗೆ
ಗಂಭೀರತನ ಬಿಟ್ಟು
ಗಃ(ಗಾಹ)ಳ ಹರಿಸೊ ಬಹಳ ಕೃಪೆಯಿಂದಲಿ ॥ ಹರಹರಾ ೪

ಘ(ಗ)ಳಿಸಲಾರೆನು ಪರವು
ಘಾ(ಗಾ)ಳಿಯಾಗಿದೆ ಮನಸು
ಘಿಲಕೆಂದರೆ ಬೆದರಿ
ಘೀರಿಡುತಲಿ
ಘುಮ್ಮರಿ ಸಿಕ್ಕುತದ
ಘೂ(ಗೂ)ಳಿ ಸೊಕ್ಕಿದ ಹಾಗೆ ಘುರಘೂರಿಯ ತಪ್ಪಿಸಿ
ಹರವ ಮಾಡು ॥
ಘೇರಿ ಬಂದೆರಗಿತು
ಘೈರಿಸುವರಿನ್ನಾರು
ಘೋರದಲಿ ಮುಳುಗಿದೆ ತಾರಿಸಯ್ಯ
ಘೌ(ಗೌ)ರವನು ಮಾಡೆನಗೆ
ಘಂಮನೆ ವರವಿತ್ತು
ಘಃ(ಘಾ)ಸಿಯಾಗಿಸಬೇಡ ಯಮನ ಬಾಧೆಯಲಿ ॥ ಹರಹರಾ ೫

ಜ್ಞಾನದ ಹಾದಿಯಿಲ್ಲ ಅ–
ಜ್ಞಾನಿ ನಾನಾದೆ ಸ್ವಾನುಭವವೆಂದರೆ ಏನೋ ಎಂತೋ
ಜ್ಞಾನವೆಂದರೆ ದೀಪ ಬೆಳಕಿಲಿ ನೋಡಿಪ್ಪ
ಜ್ಞಾನದ ಸ್ವರೂಪ ಸಾರ ಗುಹ್ಯ
ಜ್ಞಾನಿ ಸಂಗದ ಗೋಷ್ಟಿ

ಜ್ಞಾನಿಗೇ ಪರಿಪಾಟಿ
ಜ್ಞಾನಿಯೆಂದರೆ ಕೋಟಿ ಕೋಟಿ ಪುಣ್ಯ
ಜ್ಞಾನಕ್ಕೆ ಸರಿಯಿಲ್ಲ
ಜ್ಞಾನಿಯಾದವ ಬಲ್ಲ
ಜ್ಞಾನಿಯೆಂದರೆ ಕಲ್ಲು ಹಾಕುತಾರೆ ॥ ಹರಹರಾ ೬

ಚರಣವನು ಪಿಡಿಯಾದೆ
ಚಾರ್ವಾಕ ನಾನಾದೆ
ಚಿರಕಾಲ ಬದುಕುವ
ಚೀ(ಚಿ)ಹ್ನ ವಿಲ್ಲ
ಚುಲಕ ಬುದ್ಧಿಯ ಹಿಡಿದು
ಚೂಕ (ಚುಕಾ)ರಾದೆನು ಬಹಳ
ಚೇರಿಗೇಡಿತನವನು ಬಿಡಿಸು ದೇವಾ ।
ಚೈತನ್ಯನೆಂಬವನು ಒಳ ಹೊರಗೆ ಐದಾನೆ
ಚೋರತನವನು ಮಾಡಿ ಕದ್ದನನ್ನ
ಚೌಖಂಡಿ ಒಡೆದನೊ
ಚಂನಾಗಿ ಹಗಲವೆ
ಚಃ(ಚಾ)ಡಿ ನೋಡುತಲಿದ್ದೆ ಉಲವಿಲ್ಲವು ಹರಹರಾ ೭

ಛಲದ ಬುದ್ದಿಯ ಹಿಡಿದು
ಛಾನಸ ನಾನಾದೆ
ಛಿ
ಛೀ ಎಂದರು ಸಾಧು ಜನರು
ಛುಲಕತನಕೆಲ್ಲ
ಛೂರಿಯನೆ ಹಾತುತಲಿ
ಛೇದಿಸಲು ತಡವಿಲ್ಲ
ಛೈ ತಾಳಿಸಿ
ಛೋದವನು ಬಡುವರು ಭಕ್ತರಾದವರೆಲ್ಲ
ಛೌಕಂಠ ನಮ್ಮಯ್ಯ ಕೂಡಿಕೊಂಡ

ಛಂದಾಗಿ ಸಲಹಯ್ಯ ಆನಂದ ಪದವಿಯ ಕೊಟ್ಟು
ಛತ್ರವನು ಮೇಲಿಟ್ಟು
ಛಃ(ಛಾ)ಯ ವಾಗೋ ಹರಹರಾ ೮

ಜಪ ತಪಗಳ ನಾ ಮಾಡಿ
ಜಾಗ್ರತ ನಾನಾದೆ
ಜಿತೇಂದ್ರಿಯಾದೆನೊ
ಜೀವದಿಂದ
ಜುಗಳನೆಲ್ಲವನು
ಜೂಜನಾಡಿ ಗೆದ್ದೆ
ಜೇನವನಿಕ್ಕಿದೆ ನೆಲಕಬ್ಬಿಗೆ
ಜೈ ಜಯಾಕಾರವನು ಜಗವೆಲ್ಲ ಮಾಡುವರು
ಜೋಗುಳ ಹಾಡುವರು ಪ್ರೇಮದಿಂದ
ಜೌನಾಗಳೆ (ಯೌವನಾಗಲೆ) ಹೋಗಿ
ಜಂಬುಲಿಂಗನ ಕೂಡಿ
ಜಃ(ಹ)ಜ ನಾಡಿ ಹರಹರಾ ೯

ಝು(ಜ)ಳಕವನು ಮಾಡಿದೆ
ಝಾರಿ ಬ್ರಹ್ಮನ ಕೈಯ ಉದಕವೇ ಉಷ್ಣವನು ಬಿಡಿಸಿತಲ್ಲ
ಝಿಂಜ ಬೀಜ ಮಲ ತೊಳೆದು
ಝೀ ಎಂಬ ಖಣಿಯೊಳಗೆ
ಝುಣಿ
ಝೂಣಿಸುವನಾದ
ಝೇಲಿಸಿಕೊಂಡ
ಝೈಯ ರಾಗದ ಯೋಗ
ಝೋತಿ ಮಾಡಲಿ ಬೇಕು
ಝೌಗರದ ಒಳ ಮೊಲಿಯ ಭಾರಿಡುತಲಿ
ಝಂಮನೊದಗಿತು ಮೇಘ ಝಳಮಳ ಮಿಂಚೇರಿ
ಝಃಗ ಝುಗಿಸುವ ದಿವಾ ರಾತ್ರಿಯಲಿ ಹರಹರಾ ೧೦

ಟಕಮಕನೆ ನೋಡ್ಯಾಡಿ
ಟಾಳಿ ಬಲಿತು ಕೊಂಡ
ಹೊತ್ತರು ಆತ್ಮಜ್ಞಾನಿಗಳು
ಟೀಕು ಆಯಿತು ಹೀಗೆ
ಟುಕಿಲಿ ತಿಳಕೊಳ್ಳಿ
ಟೂಕ ಮಾಡಲಿ ದೇಹ ಮೋಕ್ಷವಿಲ್ಲ
ಟೇಕದ ಮೇಲೇರಿ ಜಾರಿ ಬಿದ್ದರೆ ಕೇಡು
ಟೈಳತನದಲಿ
ಟೊಂಕ ಮುರಿದುಕೊಂಡ
ಟೌಕರಕ ಗತಿಗಾಣ
ಟಂಮನೆ ಕೆಲಸಕ್ಕೆ
ಟಃ(ಟಾ)ಹ ಬಡೆವವರಿಲ್ಲ ಹುಟ್ಟಮೂಕಗೆ ಹರಹರಾ ೧೧

ಠಮಕದಲಿ ದಂಭಕಗ
ಠಾವಿಕ್ಯಾಗಲು ಶಿವನು
ಠಿಸಳ ಮನದವನು
ಠೀವಿ ಹೊಕ್ಕ
ಠುಮ
ಠೂಮಿಗುಟ್ಟುತಲಿ
ಠೇವೇನೆ ಕಳಕೊಂಡ
ಠೈ(ತೈ)ಳ ಬುದ್ಧಿಯ ಲಂಡ ಸಾಕುಸಾಕು
ಠೊಂಬಿಯ ಮತದವನು
ಠೌಳಿಕಾವನು ಬದ್ಧ
ಠಂಮೆಂದರೆ ನಮ್ಮರಸು ಸಿಕ್ಕ
ಠಃ (ಠಾ)ವು ಬಲ್ಲಿದವನಲ್ಲ ಠಾಣೇ ಕುಳಿತವನಲ್ಲ ಠಾಕುರಾಯಿ
ಕಾದು ಗೋವ ನಾದ ಹರಹರಾ ೧೨

ಡಗಳ ಮುದ್ರಿಯ ಹಾಕಿ
ಡಾಗಿನ ಪಶುವಾಗಿ
ಡಿವರಿ ಎಂದರೆ ಖೋ ಎನುತಲಿ

ಡೀಂಗರಿಗಲ್ಲದೆ
ಡುರುಕು ಹಾಕುತಲಿದೆ
ಡೂ(ಡು)ಳಿಕಿಸುತಲಿಹ ಸೊಕ್ಕಿನಲ್ಲಿ
ಡೇಗಣಿ ಕಟ್ಟದೆ
ಡೈಳತನ ಹೋಗದು
ಡೊಂಗ ತಟ್ಟಿದ ಬಳಿಕ ನೋಡು ಅಳುಕ
ಡೌಲಿಸಿದ ಮಡವಿನಲಿ ನೀರ ಕುಡಿಯಲು ಹೋಗಿ
ಡಂಕ ಮೊಸಳಿಯ ಕಂಡು
ಡಃ(ಡ)ಳಮಳಿಸಿತು ಹರಹರಾ ೧೩

ಢಣಿಢಣಿಸುವ ಜ್ಯೋತಿ
ಢಾಳಾಗಿ ತೋರುತದೆ
ಢಿಳಿಗ್ಯಾತಕ ಹೋದಿ ಇಲ್ಲಿ ನೋಡು
ಢೀಗು ಬಿದ್ದ ಮುನ್ನೆ
ಢುಮಿ
ಢೂಮಿಗುಟ್ಟುತಲಿ
ಢೇಕರವ ಕೊಟ್ಟುಂಡು ತೃಪ್ತನಾಗೊ
ಢೈಯಾಳಿತನದಿಂದ
ಢೋಗರ ಬೀಳಲಿ ಬೇಡ
ಢೌಳಿ (ಡೌಲು) ಮಾಡಲಿ ಬೇಡ ಸಾಧುರೊಳಗೆ
ಢಂಮನಾಗಿರ ಬೇಡ ಅಹಂಕಾರ ತಲೆಗೇರಿ
ಢಃ(ಢಾ)ಣಕ ನೀಗವಲ್ಲದೆ ಬಳಲುವಿ ಹರಹರಾ ೧೪

ತವನಿಧಿಗಳ ನೋಡು
ತಾರಕ ಬ್ರಹ್ಮನ ಕೂಡು
ತಿಳಿದವನು ನೀ ನೋಡು
ತೀಂ(ತಿ)ತಿಣಿಯನು
ತುಂಬಿ ಕೊಂಡಿದೆ ನೋಡು
ತೂ (ತು)ಳಕುವ ತೆರೆ ನೋಡು
ತೇಲಿ ಬರುತದೆ ನೋಡು

ತೈ ಧಾಂಗೆ (ತೆಯ್ಧಾಂಗೆ)
ತೊಳೆದ ಮುತ್ತನು ನೋಡು
ತೌರಮನೆಯನು (ತವರಮನೆಯನು) ಕೂಡು
ತಂದೆ ಶಿವರಾಯನ ಆನಂದ ನೋಡು
ತಃ(ತಾಹ) ಕುಡುತದೆ ನೋಡು ಬಹಳ ಅಭ್ಯಾಸ ಮಾಡು
ದೇಹವಳಿದು ಆತ್ಮನೊಡಗೂಡು ಹರಹರಾ ೧೫

ಥರ ಗೊಳಿಸುವ ಜ್ಞಾನ
ಸ್ಥಾ(ಸ್ಥ)ಳವ ಶುದ್ಧ ಮಾಡು
ಸ್ಥಿರವಾದ ಮನಸಿನ ಸೂತ್ರವಿಡಿದು
ಸ್ಥೀ(ಸ್ಥಿ)ತಿ ಉತ್ಪತ್ತಿ ಪ್ರಲಯ ಮೀರಿದ ಮುಹೂರ್ತದಲಿ
ಕೇಸರಗಳ ಹಾಕಿದರು ಯೋಗಿಗಳು
ಉಪ್ಪಾರ ಈಶ್ವರಣ್ಣ ಬಡಿಗೇರ
ಬೊಮ್ಮಣ್ಣ ಕಟ್ಟಲೀ ಜಾಣರು ಸೃಷ್ಟಿರಚನಾ
ಮುಟ್ಟಿತು ಮುಗಿಲಿಗೆ ದಟ್ಟಿಸಿತು ಭೂಮಿಗೆ
ಪಟ್ಟದರಸನು ನಮ್ಮ ಗುರುರಾಯನು ಹರಹರಾ ೧೬

ದಗಿಯ ಬೀಳಲಿ ಬೇಡ
ದಾ(ದ)ಯದ ಮನೆಯನು ಗಳಿಸು
ದಿನ ದಿನಕ ಭಕ್ತಿಯಿಂ
ದೀರ್ಘವಾಗಿ
ದುಗುಣಿಸಿದ ಪ್ರೇಮಗಳು
ದೂರ ಬೀಳದ ಹಾಗೆ
ದೇವರಿಗೆ ಅರ್ಪಿಸಿ
ದೈವ ಪಡೆಯೊ
ದೊರಕೊಂಬ ತಡವೇನು
ದೌಲಿತನ ಹೋದರೆ
ದಂಭವೆಂಬುದು ಎಲ್ಲ
ದಃ(ಹ)ನವಾಗಿ ದಾವ ದರಶನದೊಳಗೆ

ದೇವದರ್ಶನ ಮೇಲು ನೀನ್ಯಾಕ
ಕೊಳವಲ್ಲಿ ಏನು ಬಂತೋ ಹರಹರಾ... ೧೭

ಧನಕೆ ಹೆಣಗಲಿ ಬೇಡ
ಧಾರುಣಿಗಂಜ ಬೇಡ
ಧಿಗಿ ಧಿಗಿಗೊಳ ಬೇಡ
ಧೀರನಾಗೊ
ಧುಗಿ ಧುಗಿಸಲಿ ಬೇಡ
ಧೂಳಿ ಕೂಡಲಿ ಬೇಡ
ಧೇನು ಕರೆವುತಲಿದೆ ಸಂತರಲ್ಲಿ
ಧೈರ್ಯವನು ಬಿಡಬೇಡ
ಧೊ(ದೊ)ರೆಗೆ ಶರಣೋಗ ಬೇಡ
ಧೌತ ರಂಗದ ಬಿರುದು
ಧಂಮ ಧಂಮಿಸುತ
ಧಾ(ಧಃ)ಹಕಿಲ್ಲ ಮೃತ್ಯುವಿನ ಸೋಂಕಿಲ್ಲ ಜನ್ಮದ ಏಕಾಂತ
ದಲಿರುತಿಹ ಶಿವಶರಣನು ಹರಹರಾ ೧೮

ನರದೇಹಿ ಆದುದಕೆ
ನಾಗಭೂಷಣನ ಭಜಿಸು ನಮ್ಮ
ನಿವೆಲ್ಲರಿಗೆ ಮೋಕ್ಷ
ನೀರ ಮುಣುಗಲಿ ಯಾಕೆ
ನುಡಿಯ ಬಂಧನವ್ಯಾಕೆ
ನೂರಾರ ಶರಣ್ಯಾಕೆ ಬೆಂಡಾಗುತ
ನೇಮ ಕೊಳಬೇಕ್ಯಾಕೆ
ನೈಷ್ಠಿಯ ಕಟ್ಟಲ್ಯಾಕೆ
ನೊಗನ ಹೊತ್ತಾನಂತ ನೆನಿಸಲ್ಯಾಕೆ
ನೌಸರದ (ನವಸಿಗರ) ಪರಿಯಾಕೆ
ನಂಮಯ್ಯನಗಲಲ್ಯಾಕೆ
ನಃ(ನಾ)ನಾತ್ವವನಳಿದರೆ ಅಷ್ಟೇ ಸಾಕು ಹರಹರಾ ೧೯

ಪರಮ ಗುರುವಿಗೆ ಶರಣು
ಪಾಪನಾಶನೆ ಶರಣು
ಪಿರಿದು ಪರಿಣಾಮದ ದೊರೆಗೆ ಶರಣು
ಪೀಠದರಸನೆ ಶರಣು
ಪುಣ್ಯ ಪುರುಷನೆ ಶರಣು
ಪೂತ ಪಾವನ ಮೂರ್ತಿ ಶರಣು ಶರಣು
ಪೇತು ಪತಿಗೆ ಶರಣು
ಪೈಜ ಗೆದ್ದವಗೆ ಶರಣು
ಪೊಡವಿ ಕೈಲಾಸದ ನಿಧಿಗೆ ಶರಣು
ಪೌರೋಹಿತನೆ ಶರಣು
ಪಂಥ ದುರಿತನೆ ಶರಣು
ಪಃ(ಪಾ)ರ್ವತಿ ಕಾಂತನ ಪಾದಕ್ಕೆ ಶರಣು ಹರಹರಾ ೨೦

ಫಲವ ಬಯಸಲಿ ಬೇಡ
ಫಾಸಿ (ಪಾಶದಿ) ಬೀಳಲಿ ಬೇಡ
ಫಿರ್ಯಾದಿಗಳ ಹಳಿತಲ ಬೇಡ
ಫೀ (ಫಿ)ತವಿ ಮಾಡಲಿ ಬೇಡ
ಫುಗಸಾಟಿ ಕೆಡಲಿ ಬೇಡ
ಫೂರಸೊತ್ತಿತೆನಬೇಡ ಶಿವ ಶಿವಗೆ
ಫೇಡಿ ಮಾಡಲಿ ಬೇಡ
ಫೈಣ್ಯ ಹೂಡಲಿ ಬೇಡ
ಫೋಡಣಿ ಕೊಡಬೇಡ ಸಮುದ್ರಕೆ
ಫೌಗೊಂಡ ಹೂವಿನ
ಫಂಗಡಿಯನೆ ತಂದು
ಫಃ(ಫಾ)ರ ಪರಮಾತ್ಮಂಗೆ ಅರ್ಪಿಸಯ್ಯ ಹರಹರಾ ೨೧

ಭರವಸವು ನಿನಗೇನು
ಭಾಗ್ಯ ಬಂದೀತೆಂದು
ಭಿಕ್ಷೆ ಬೇಡುವಗಿನ್ನು
ಭೀತಿಯಿಲ್ಲ

ಭುವನದೊಳಗಿದಿರಿಲ್ಲ
ಭೂತಾಳ ಕೆಳಗಿರಲಿ
ಭೇದವಿಲ್ಲದೆ
ಭೈರವನು ಕಾವ
ಭೋಜನಂಗಿರುತಿಹನು
ಭೌತ್ಯ ವ್ಯಾಳೆ ಬಂದದಕೆ
ಭಂಗ ಬಡಿಸಿಲಕಿಲ್ಲ ಸಂಗ ಸಿಲುಕಿ
ಭಃ(ಭಾ)ಲ ಲೋಚನ ಚಂದ್ರಶೇಖರನ
ಸ್ಮರಣೆಗೆ ಭಾರನಿಳುಹಿ
ಭೂಮಿಯ ಹೊರಗಾಗಿ ಹರಹರಾ ೨೨

ಮರಣ ಬರುತದೆ ಕೊ
ಮಾರಗಳ ಹಾಕುತಲಿ
ಮಿ (ಮೀ)ರಲಿಕ್ಕಲಿದು
ಮೀ(ಮಿ)ಥ್ಯಾವಲ್ಲ
ಮುನಿಯು ಆದರೆ ಏನು
ಮೂರು ಕಣ್ಣಿರಲೇನು
ಮೇರು ಸಹಿತಾಗಿದು ನುಂಗುತದೆ
ಮೈಯ ತಾಳಿದ ಬಳಿಕ
ಮೋಕ್ಷ ಪಡೆಯಲು ಬೇಕು
ಮೌನವ ಹಿಡಿದಂಗೆ ದೇಶ ಭಂಗ
ಮಃ(ಮ)ಹಾ ಪ್ರಲಯಕೆ ಹೊಂದದ ಮಹಾತ್ಮಂಗೆ ಭಯವೇನು
ಮಹಾದೇವನ ಮೈಯ ಕೂಡಿಕೊಂಡ ಹರಹರಾ ೨೩

ಯದಿಯ (ಎದೆಯ) ಬಲ್ಲಿದನಾಗು
ಯಾತ್ಯಾತಕಂಜದೆ
ಯಿ(ಈ) ತನೆ
ಯೀ(ಈ)ಶ್ವರನು ಈಶ ಗುಣದಿ
ಯುವತಿ ಇದ್ದರು ಏನಳಯೂ(ಯು)ಗದ ಅಂಜಿಕೆ ಏನು

ಯೇ(ಏ)ಸೊಂದು ಗ್ರಹಗಳು ಬಂದರೇನು
ಯೈ(ಐ)ದಿಸಿ ಸಾಯೋಜ್ಯ
ಯೋಗಿಯಾದ ಬಳಿಕ
ಯೌವನಾಗಿರುತಿರಲಿ ಬಹು ವೃದ್ಧನು
ಯಂ(ಎಂ)ಮ ಬಸವನ ತಮ್ಮನಾಗಲಿಕೆ ಪರಬೊಮ್ಮ
ಯಃಕಾಕಸಾರೆ ನಿಮ್ಮಯೇಕಾಕನಂದ ಹರಹರಾ ೨೪

ರಮಣ ನಾಯಕತೆಯರು
ರಾಗವನೆ ಮಾಡುವರು ಸ-
ರಿಗದಲಿ (ಸರಿಗಮದಲಿ) ಹಾಡುವರು
ರೀತಿಯಿಂದ
ರುಣಿ ಝುಣಿಸುವ ತಂತಿ
ರೂಪದ ಮೃದಂಗ
ರೇಖ್ಯಕೊಳಗಾಗದೆ
ರೈಷಕೂಡಿ
ರೋಮಾಂಚ ಗುಡಿಗಟ್ಟಿ
ರೌದ್ರಾವತಾರದಲಿ
ರಂಗ ದಾರಿಗೆ ಸಿಲುಕಿ
ರಃ(ರಾ)ಹಣ ಒದಗಿ ರಾಯಪಂಚಾಕ್ಷರವ ಪರಶಿವನ ಕೊಂಡಾಡಿ
ವರವ ಪಡೆದರು ಪ್ರತ್ಯಕ್ಷವಾಗಿ ಹರಹರಾ ೨೫

ಲವಲವಿಕೆ ನನಗೆ ಹುಟ್ಟಿ
ಲಾವಕೆ ಹೆಣಗಿದೆ
ಲಿಂಗವನು ಗಳಿಸಿದೆ
ಲೀಲೆ ಗಮನೆ
ಲುಪ್ತವಾದೀತೆಂದು
ಲೂಟನೆ ಮಾಡಿದೆ
ಲೇಸು ಲೇಸೆಂದರು ಭಕ್ತರೆಲ್ಲ
ಲೈಕ್ಯದ ಹೆಸರೇನು
ಲೋಕದಂತಾಗದೆ

ಲೌಸಡಿಯಿಲ್ಲದೆ
ಲಂಭತನವೇ ಶಂಭುಶಂಕರ ನಿಮ್ಮ
ಲಃ(ಲಾ)ಹಣೆವು ನರಗುಂಟು ಲೋಹ ಪರಿಸಕೆ ತಾ
ಸೋಂಕಿದಂತೆ ಹರಹರಾ ೨೬

ವಶವಾದ ಪರಬ್ರಹ್ಮ
ವಾಸವಾಗಿರಲಿಕ್ಕೆ
ವಿಷಯ ತಪ್ಪಿಸಿದೆನು
ವೀ(ವಿ)ಪರೀತ ಕೇಳಾ
ವು(ಉ)ದಾಸವಿಲ್ಲದೆ
ವೂ(ಉ)ಪರತಿಯ ಹೊಂದದೆ
ವೇದವನು ಘುಂದದೆ
ವೈದಿಕನೆ ಓದಿದ ಫಲವೇನು
ವೌಂ(ವಂ)ಶಿತ ನಾಗದೆ
ವಂಮನವ ಬೀರದೆ ದೊಡ್ಡತನವೇ
ವಃ(ವೋಹ)ಳ ಸೋಹಳವುಂಟು ತಾಮಕರ
ದಾಮ ನಂಟು
ವಾಸುದೇವನ ಗಂಟು ಕಟ್ಟಿಕೊಳ್ಳಿ ಹರಹರಾ ೨೭

ಶಮದಮಗಳಿಂದ
ಶಾಶ್ವತ ಪದಕೇರಿ
ಶಿವನ ಒಲಿಸಿಕೊಂಡ
ಶೀಲ
ಶುಂಡ
ಶೂರ ನಿರ್ಧಾರ ಬಹು ಮೇಲುಳ್ಳವನುದಾರ
ಶೇರಿ ಬಂದನು
ಶೈವ ಮಾರ್ಗ ಹೊಂದಿ
ಶೋಭನದ ಮನೆಯಿಂದ
ಶೌ(ಸೌ)ಭಾಗ್ಯವಾಯಿತು
ಶಂಭು ಶಂಕರ ಶರಣು ಸಹಸ್ರ ಶರಣು

ಶಃ(ಶ)ರಚಾಪವಿಲ್ಲದೆ ಕಾದಿ ಶರಣನು ಗೆದ್ದ ತಿಮಿರ
ನಿದ್ರಿ ಕಣ್ಣು ತೆರೆದ ಹರಹರಾ ೨೮

ಸಕಲ ಶಾಸ್ತ್ರವನೋದಿ
ಸಾಕಾರ ತಿಳಿಯದು ನಿರಾಕಾರ ಎಂಬುದು ಬಹಳ ದೂರ
ಸಿದ್ಧವಾಗಿದ್ದದ್ದು
ಸೀ(ಸಿ)ಕ್ಕದು ಕೈಯೊಳಗೆ
ಸುಳವಿಲ್ಲ ಕಳವಿಲ್ಲ
ಸೂಕ್ಷ ಘನವು
ಸೇರಿ ಬಾರದ ನುಡಿಗೆ
ಸೈರಾವೈರಾವೆಲ್ಲ
ಸೊನೆ ಸೊನೆ........ಸನ್ನಿಹಿತನು
ಸೌರಸಾ(ಸುರಸ)ವಾದನು
ಸಂಮ್ಯಗ್ ಜ್ಞಾನವು ಬಲ್ಲ
ಸಃ(ಸಹ)ಜಾನಂದ ತುಂಬನು ಲೌಕಿಕಕ್ಕೆ ಹರಹರಾ ೨೯

ಹರ ಹರಾ ಎನುತಲಿ ಶಿವನ
ಹಾಡಿಕೊಂಡೆ
ಹಿತವು ತೋರಿತು ಘನಾ
ಹೀ(ಹಿ)ತಕಾರಿಗೆ
ಹುಗವರಿ ಕೇಳೊಲ್ಲ
ಹೂ(ಹು)ಸಿಯ ತೀರ್ಥಾಧಿಮಿಂದು
ಹೇತುವರ್ಜಿತನೆಂದು ಫಲವು ಕೊಂಡ
ಹೈಯೆಂದು ನಿಂತಿತು
ಹೊಂಗಲ್ಲವಾ ಹಾಡುಗಳು
ಹಂಸ ಅರಿತುದಿಲ್ಲ ಬಲ್ಲ ತನವೇ ಹಮ್ಮು ನಡಿಯದು ಇಲ್ಲಿ
ಹಃ(ಹಾಹಾ)ಕಾರ ಮಾಡಿದರೆ ಹಸಿದವನು ಉಣಬೇಕು
ಬ್ರಹ್ಮರಸವ ಹರಹರಾ ೩೦

ಕ್ಷಣ ಕ್ಷಣಕೆ ಶಿವನಿನ್ನ

ಕ್ಷಾ (ಖ್ಯಾ)ತಿ ಕೊಂಡಾಡಿದ
ಕ್ಷಿತಿಯ ಮೇಲಿಹುದು
ಕ್ಷೀರ ಉದಧಿ
ಕ್ಷುದ್ರ ಕರ್ಮಿಗಳು
ಕ್ಷೂ(ಕ್ಷು)ದ್ರನೆ ಎನಿಸುವರು
ಕ್ಷೇಮ ಕಲ್ಯಾಣವ ಪಡೆಯರೆಂದೂ
ಕ್ಷೈ(ಕ್ಷಯ) ವ್ಯಾಧಿ ಹೊಡೆದವನು
ಕ್ಷೋಭೆಯನು ಬಡುವನು
ಕ್ಷೌತಿಯನು ಕೂಡುತಿಹ ಜನ್ಮ ಜನ್ಮ
ಕ್ಷಂ(ಕ್ಷೇ)ಮ ಸಾಯೋಜ್ಯಕ್ಕೆ
ಕ್ಷಃ(ಕ್ಷಾ)ಳ ಸಕಲಪಾಪ ಪರಮಾತ್ಮ ಗತಿಗೆ ಕೋಪ
ಪರಮ ಸಾಧು ಹರಹರಾ ೩೧

ಗುರು ತ್ರಿಪುರಾಂತಕನ
ಅರುವಿನ ಪದವಿದು
ಅರಿತವಗೆ ಅರಿದು ಅಕ್ಷರ ಮಾಲೆ
ಕೊರತೆ ಆದ ಮಾತಿಗೆ
ಹೊರತಾದ ಮಾತುಗಳ
ಮುರುತಾದ ವೇದಗಳು ಗುರು ಗಮ್ಯವು
ಓರಿಯರಿಗೆ ಸಂಬಂಧ
ಪರಕೆ ಪರಮಾನಂದ
ಕರದ ಅಮೃತ ಬಿಂದು ಪ್ರಕಾಶ ತಾನು
ಶರಣರಿಗೆ ಇದು ಬೇಕು ಚರಣ ಸಾರಿದ ಟೀಕು
ಪರಬ್ರಹ್ಮದಾ ತೂರು ತೂಗಿಕೊಳ್ಳಿ ೩೨

ಹರಹರಾ ಮಹಾದೇವ ಶಿವ ಶಿವಾ ಮಹಾದೇವ
ಶಂಕರಾ ಮಹಾದೇವ ದೇವ ದೇವಾ ॥

## ೮೨

ಸೋಜಿಗ ಸೋಜಿಗ ಗೋವಿಂದನ
ಸೋಜಿಗ ಗೋಪಾಲನ ಸೋಜಿಗ ಪ

ಇಂದಿರೆ ರಮಣ ಈ ಪರಬ್ರಹ್ಮ । ಮಂದರೋದ್ಧಾರ ಈ
ದೇವಾ । ತಂದೆ ತಾಯಿ ತ್ರೈಲೋಕ್ಯಕ್ಕೆ ತಾನಾಗಿ ನಂದ ।
ಆನಂದ ಯಶೋದೆಗೆ ಮಗನಾದ ನೋಡಮ್ಮ ॥ ಸೋಜಿಗ ೧

ಸದಮಲ ಸ್ವರೂಪ ಸಚ್ಚಿದಾನಂದನು ।
ಮುನಿಜನ ವಂದಿಪನು ಈ ದೇವ ಮುನಿಜನ ವಂದಿಪನು ।
ಪದುಮನಾಭ ಪೀತಾಂಬರಧರ ದೇವ ವಿದುರನ । ಆ
ವಿದುರನ ಮನೆಯಲ್ಲಿ ಉಂಡದ್ದು ನೋಡಮ್ಮ ಸೋಜಿಗ ೨

ನಾನಾ ದೇವರ ದೇವ ನಾರಾಯಣ ಹರಿ ನಿಜಸುರ ವಂದಿ–
ಪನು ಈ ದೇವ । ಭಾನು ಕೋಟಿ ತೇಜ ಜ್ಞಾನ–
ಬೋಧನ ಸ್ವಾಮಿ । ತಾನಾಗಿ ಭಕುತಿಗೆ ಒಲಿದದ್ದು
ನೋಡಮ್ಮ ಸೋಜಿಗ ೩

## ೮೩

ಹೀಂಗ್ಯಾಕ ಪ್ರಾಣಿ । ಹೀನ ಗುಣಗಳನೆ
ಬಿಡಲಿಲ್ಲ । ಶ್ರೀ ಗುರುವಿನಾಶೆಯ ಮಾಡಲಿಲ್ಲ ಪ

ವಿವೇಕವ ತೊಡಲಿಲ್ಲ ಅ–
ವಿವೇಕವ ಸುಡಲಿಲ್ಲ ।
ಸಾವಧಾನದಿ ಮನವಿಡಲಿಲ್ಲ ೧

ಆಚಾರವ ಕೊಳಲಿಲ್ಲ
ಮತ್ಸರವ ಮರೆಯಲಿಲ್ಲ
ಸಚ್ಚಿದಾನಂದ ಸುಖ ಉಣಲಿಲ್ಲ ೨

ಈ ನಡತೀ ತರಹವ
ಜಾಣನಾದವನೇ ಬಲ್ಲ ।
ಜ್ಞಾನಬೋಧನು ಸಾರಿದ ಸೊಲ್ಲ ೩

೮೪

ಇನ್ನೂ ಭ್ರಾಂತಿಯ ಮಾಡುವರೆ । ನನ್ನದೆಂದು ಆಡುವರೆ ।
ತನ್ನ ತಾ ತಿಳಿಯದೆ । ಅನ್ಯರ ಗುಣದೋಷ ನೋಡುವರೆ ಪ

ಸ್ತುತಿಸುತ ಬಂದರೇನು । ಮತ್ತೆ ಜಲವ ಮಿಂದರೇನು ।
ಎತ್ತ ಹೋದರೂ ದಣಿವಿಕೆಯಿಲ್ಲದೆ । ನಿತ್ಯಾನಿತ್ಯ ವಿವರಿಸಲಿಲ್ಲ ೧

ಮಾತಿನ ಬಣವಿಯನೊಟ್ಟಿ । ಸ್ವಂತ ವಿಷಯಂಗಳ ಮುಟ್ಟಿ ।
ಯಾತಕೆ ವೈರಾಗ್ಯದ ಮಾತು । ಮಾತಿನಂತೆ ನಡೆದರಾಯಿತು ೨

ನಾನು ದೊಡ್ಡವ ನನ್ನವರೆಂದು । ಜ್ಞಾನ ಗರ್ವದ ಮನೆಗೆ ಬಂದು ।
ಜ್ಞಾನಬೋಧನ ಪ್ರಭುವ ಕೂಡದೆ ದೀನನಾಗಿ ಬಳಲುವದೇನೊ ೩

೮೫

ಗುರುತಕೆ ಮುಟ್ಟದೆ ಗುರುತದ ಮಾತನು ಆಡಬೇಡ ।
ಗುರುವಿನ ಸನ್ಮುಖ ಗರ್ವ ಅಹಂಕಾರ ಮಾಡಬೇಡ ಪ

ನರಜನ್ಮಕೆ ಬಂದು (ಅಸಿದ್ಧದವರ ಕಾಡಬೇಡ) ಗುರುವಿನ
ಭಕ್ತಿಯ ಮಾಡದವನ ಮೋರೆ ನೋಡಬೇಡ ೧

ಮನದೊಳಗಿನ ಮಾತು ಸದ್ಗುರುವಿನ ಮುಂದೆ ಮುಚ್ಚಬೇಡ ।
ಧನವಗಳಿಸಿಕೊಂಬ ನಾ ಬಲು ದೊರೆಯೆಂದು ನೆಚ್ಚಬೇಡ ೨

ಎನ್ನ ನೆಂಟರ ಚಿಂತಿಯ ಮನೆಯೊಳು ಸೇರಬೇಡ ।
ಜ್ಞಾನಬೋಧನ ಪ್ರಭು ಗೋವಿಂದನ ಮಾತು ಮೀರಬೇಡ ೩

## ೮೬

ನಿನ್ನ ನೀ ತಿಳಿದುಕೊಳ್ಳಣ್ಣ ಇನ್ನಾರ ಪ

ಸತ್ತು ಹೋಗುದು ಕಾಷಾಯ
ಮತ್ತೆ ಮಮತೆ ಮಾಡುವಿ ನೀ ೧

ಸಂತರ ಪಾದ ಪಿಡಿವದಕೆ
ಭ್ರಾಂತಿ ಮುಸುಕ್ಯಾತಕೆ ನಿನ್ನ ೨

ನಾನಾ ದೇಶವ ನೋಡಿದಿ
ಏನ ಗಳಿಕಿ ನೀ ಮಾಡಿದಿ ೩

ಮಾನವ ತನುವು ದೊರಕಿತು
ಜ್ಞಾನದ ರತ್ನ ಸಿಕ್ಕಿತು ೪

ಸಾರಾಯ ವಾದ ಶಬ್ದವನೆ
ಸಾರಿದ ಜ್ಞಾನಬೋಧ ಮುನಿ ೫

## ೮೭

ಹೋಗುಣು ನಡಿ ಸಾಧುರ ನೋಡುವಾ
ಬೇಗ ಪ್ರಾಣನಾಥನ ಕೂಡುವಾ ಪ

ವ್ಯರ್ಥ ಆಯುಷ್ಯ ವೆಚ್ಚ ಮಾಡಬೇಡಿ
ಹಿತಾಹಿತ ವಿವರಿಸಿ ನೋಡಿ ।
ನೀತಿ ಮಾರ್ಗದಲಿ ನಡೆದಾಡಿ
ಭೀತಿ ಭ್ರಮೆ ಮೂಲದಿ ಹೋಗಾಡಿ ೧

ಮನಸಿನ ಕಲ್ಪನೆಯ ಬಿಟ್ಟು
ಗುಣತ್ರಯದ ವೃತ್ತಿ ಕಡೆಗಿಟ್ಟು ।
ಪೂರ್ಣ ಜ್ಞಾನ ವೈರಾಗ್ಯ ಒತ್ತಿಟ್ಟು
ಘನ ಹರುಷ ತಮ್ಮೊಳಗಿಂಬಿಟ್ಟು ೨

ನಾನಾ ತೀರ್ಥ ಉಂಟು ಸಾಧುರಲ್ಲಿ
ನಾನೇನೆಂದು ಆ ಸುಖ ಹೇಳಲಿ ।
ಜ್ಞಾನಾಂಬುಧಿ ಸಾಧುರೇ ನೋಡಲಿ
ಜ್ಞಾನಬೋಧ ಸಾರಿದ ಭಕ್ತೀಲಿ ೩

## ೮೮

ಗುರುರಾಯ ನೀ ಎನ್ನ ತವರ ಮನಿ ।
ಶರಣರಿಗೆ ಕೈವಲ್ಯದಾನಿ ಪ

ಗುರುವೆ ಎನ್ನ ಬಂಧು । ಬಂದು ಪೇಳಿರಿ
ವಾಕ್ಯ ಎನಗೊಂದು । ಬಿಡಿಸೀದಿ ಈ ಜೀವ
ಶಿವ ಸಂದು । ನಿಜರೂಪ ತೋರಿದಿ ಕೃಪಾಸಿಂಧು ೧

ನಿನ್ನಂಥ ಉದಾರಿ ಎಲ್ಲಿ ಕಾಣೆ । ಸತತ ಸದ್ಬೋಧ
ಕೊಟ್ಟು ಕಾಯುವನೆ । ಶಾಂತಿ ಶಮ ದಮವು ಕೊಡುತಾನೆ ।
ಅಂತರ ಬಾಹ್ಯದಲಿ ತಾ ತುಂಬ್ಯಾನೆ ೨

ಇರಲಾರೆನು ಬಿಟ್ಟು ಅರಕ್ಷಣಾ । ಗುರುರಾಯ ಎನ್ನ

ಜೀವದ ಪ್ರಾಣ । ದೊರಕಿದಿ ಪರಮವೇ ದಾನ
ಸಾರಿ ಪೇಳುವ ಜ್ಞಾನಬೋಧ ಪೂರ್ಣ ೩

## ೮೯

ಎಂದಿಗಾದರೂ ನಾನು ಮರೆಯೆ ಗುರುವಿನ
ತಂದು ಪೂಜಿಸು ತ್ರಿನಯನ ಪ್ರಾಣದೊಡೆಯನ ಪ

ಪ್ರೇಮದಿಂದಲಿ ತನ್ನ ದಯದಿ ನೋಡಿದ
ಕಾಮಕ್ರೋಧ ಮೋಹ ಮದಕೆ ಅಂಬು ಹೂಡಿದ ।
ತಾಮಸದ ಗುಣಗಳನು ಕಡೆಗೆ ಮಾಡಿದ
ರಾಮ ರಾಮ ಎಂಬ ಬೀಜ ಮಂತ್ರ ನೀಡಿದ ೧

ಕಾಣ ಬಂತು ಜಗವು ಎನಗೆ ರಾಮರೂಪವು
ತಾನು ತಾನೆ ಉದಯವಾಯ್ತು ಜ್ಞಾನದೀಪವು ।
ಏನು ಪೇಳಲಿ ಕರಗಿ ಹೋಯ್ತು ಮನದ ತಾಪವು
ಸ್ವಾನುಭಾವದಲಿ ನಾಸ್ತಿ ಪುಣ್ಯಪಾಪವು ೨

ಎರಡು ಪಕ್ಷ ಮೀರಿಹ ಗುಣಾತೀತನ
ಪರಬ್ರಹ್ಮ ಪರಂ ಜ್ಯೋತಿ ಸದೋದಿತನ ।
ಕರುಣಸಿಂಧು ತಂದ ಜ್ಞಾನಬೋಧ ತಾತನ
ಹರುಷ ಪೂರ್ಣವಾಗಿ ಸುಖವ ಕೊಡುವ ದಾತನ ೩

## ೯೦

ಮುಟ್ಟಲು ಮಾಯೆ ಹೋಯಿತು, ಗುರುರಾಯ ಪ

ಜ್ಞಾನದ ಪ್ರಭೆಯು ತೋರಿತು ಅ–
ಜ್ಞಾನ ನನ್ನದು ಹಾರಿತು ೧

ಹರುಷಕೆ ಹರುಷವಾಯ್ತು
ನಿರಾಶೆಯು ಕಡೆಗಾಯಿತು ೨

ಜ್ಞಾನಬೋಧನ ಪ್ರಭು ಯೋಗಿ
ತಾನು ತಾನೆ ದಯವಾಗಿ ೩

## ೯೧

ಸಾಧುರು ದೊಡ್ಡವರು ಭವ ಬಂಧನ–
ದೊಳಗವರೆಂದಿಗೂ ಸಿಗರು ಪ

ಪದ್ಮ ಪತ್ರದಂತೆ ಅಲಿಪ್ತ ಇಲ್ಲಿರುವರು । ನಮ್ಹಾಂಗ
ತೋರರು ಜಗದೊಳಗ ಹಮ್ಮುನಳಿದು ಬೇಗ । ಶರಣು
ಹೊಕ್ಕವರಿಗೆ ಸುಮ್ಮನೆ ಚನ್ನಾಗಿ ದಯ ಮಾಡುವರು ೧

ಎಳ್ಳಿನೊಳಗೆ ಎಣ್ಣೆ ಇಂತಿಹರಂಥ ಬಲ್ಲವರಿವರು
ಭುವನದಲ್ಲಿ । ಬಲಸ್ತನದ ಬಡಿವಾರವ ಮಿಗಿವಲ್ಲೆ
ಸ್ವಾನಂದ ಸುಖದಿಂದ ಲೋಲ್ಯಾಡುವರು ೨

ಏನನರಿಯದೆ ಮರುಳರಂತೆ ಜಗದೊಳು ।
ತನುವಿನ ಹಂಬಲ ಹರಿದಿಹರು ।
ಅನುದಿನದಲ್ಲಿ ಜ್ಞಾನಬೋಧನ ಪ್ರಿಯರು
ಚಿನುಮಯ ರೂಪದಲಿ ಎಲ್ಲ ಬೆರೆದ ದೊರೆಯರು ೩

## ೯೨

ಇಂದು ನೋಡಿದೆ ನಾನು ಸಾಧು ಸಂತರ
ಇಂದು ಕೂಡಿದೆ ಎನ್ನ ಮನದ ಪ್ರೀಯರ ಪ

ಚರಣ ಕಮಲವು ಕಾಣುತಾಕ್ಷಣ
ಹರುಷವಾಯ್ತು ಪೂರ್ಣ ಎನ್ನ ಮನಸಿಗೆ ।

ಶರಧಿ ಎಬ್ಬಿದ ಪರಿಯ ಎನ್ನೊಳು
ಪರಮ ಚಿದ್ಘನಾನಂದ ತುಳುಕಿತು ೧

ಪೇಳಲೆ ಎನ್ನಯ ಅಮಿತ ಸುಖವನು
ಭಾಲಲೋಚನನೆ ಬಲ್ಲ ಇದರ ಬಗೆಯನು ।
ಕೀಳ ಜನರಿದನೇನು ಬಲ್ಲರು
ಹಾಳ ಬದುಕುವದಿಂದೇತರದಿವರ ಜನ್ಮವು ೨

ಸಕಲ ಸಾಧುರ ಪಾದ ಧೂಳಿಯ
ಭಕ್ತಿಯಿಂದಲಿ ನಾನು ಬಿಡದೆ ಧರಿಸುವೆ ।
ಮುಕ್ತಿ ನಾಲ್ಕಕೆ ಮಿಗಿಲ ಪದವನು
ನಿಖಿಲ ಮೂರ್ತಿ ಜ್ಞಾನಬೋಧನೊಡೆಯನೀವನು ೩

## ೯೩

ಮುಕ್ತಿ ದೊರಕಿತು ಗುರುಕೃಪೆಯಿಂದಲಿ ಪ

ಒಮ್ಮನದಿಂದಲಿ ವಿವರಿಸಿ ನೋಡಲು
ಕರ್ಮ ಬ್ರಹ್ಮಾಗಿ ತೋರಿತಕ್ಕ ।
ಅಮ್ಮಾ ಅಮ್ಮಾ ಈ ಮಾತು ಏನಂತ ಹೇಳಲಿ
ನಿರ್ಮಳ ನಿಜ ವಸ್ತು ಕಾಣ ಬಂತಕ್ಕ ೧

ಮಾತು ಮಾತಿನಲಿ ಸಪ್ತಧಾತುವಿನಲಿ
ಮತ್ತೊಂದು ತೋರಿದ ಭುವನದಲಿ ।
ಎತ್ತ ನೋಡಿದರತ್ತ ವಸ್ತುವೇ ಪರಿಪೂರ್ಣ
ವಿಚಾರದಿಂದಲಿ ಅನುಭವದಿಂದಲಿ ೨

ಇಂದು ಜ್ಞಾನಬೋಧಗೆ ಆನಂದವಾಯಿತು
ಸಂದೇಹ ಹೋಯಿತು ಮನಸಿನಲಿ ।

ಎಂದಿಗೂ ಅಳಿಯದ ಸೌಭಾಗ್ಯ ದೊರಕಿತು
ತಂದೆ ಗೋವಿಂದನ ವಾಕ್ಯದಲಿ ೩

## ೯೪

ಎಂತು ಗುರು ಪೂಜೆಯ ಮಾಡಲಿ
ನಿಂತಿಹನು ಅಂತರ್ಬಾಹ್ಯದಲಿ ಪ

ಪಾಣಿಪಾದ ವಾಕು ಮೊದಲಲ್ಲಿ
ಜ್ಞಾನೇಂದ್ರಿಯ ಪಂಚಕ ನೋಡಲ್ಲಿ ।
ಪ್ರಾಣಾಪಾನ ವ್ಯಾನೋದಾನದಲ್ಲಿ
ತಾನೇ ಇಹ ದಶಪ್ರಾಣದಲ್ಲಿ ೧

ಆಕಾಶಾದಿ ಪಂಚಭೂತದಲ್ಲಿ
ಅಕಾರಾದಿ ಮೂರು ಮಾತ್ರೆಯಲ್ಲಿ ।
ಲೋಕತ್ರಯ ವ್ಯಾಪಕವಲ್ಲಿ ।
ಏಕೋ ಮೂರ್ತಿ ತುಂಬಿಹವಿವನಲ್ಲಿ ೨

ಭಾನುಶಶಿ ನಕ್ಷತ್ರಂಗಳಲ್ಲಿ
ನಾನಾ ಜಾತಿ ಕುಲಗೋತ್ರದಲ್ಲಿ ।
ತಾನು ತಾನೇ ತೋರಿಸುವಲ್ಲಿ
ಜ್ಞಾನಬೋಧ ಬೇರುಂಟು ಮತ್ತೆಲ್ಲಿ ೩

## ೯೫

ಆಕಾರದಿ ತೋರಿರೆ ಜಗವೆಲ್ಲವು ।
ಓಂಕಾರದ ಹೊರತು ಏನಿಲ್ಲ ಪ

ಆದಿ ಶೂನ್ಯದಿಂದ ಅಕಾರ ಪುಟ್ಟಿತು ।
ದಂಡಕ ಉಕಾರ ಪಡೆಲಿಲ್ಲ ೧

ಅರ್ಧ ಮಾತ್ರದಿ ಮಕಾರ ವೇದಿ ।
ಊರ್ಧ್ವ ಶೂನ್ಯ ದಶನಾದೆಲ್ಲ ೨

ಇದರ ಮೂಲವು ಸಿದ್ಧರು ಬಲ್ಲರು ।
ಗೋರಖ ಮತ್ಸ್ಯೇಂದ್ರಾದಿಯರೆಲ್ಲ ೩

ಆದಿಸಿದ್ಧ ಬಾಬಾ ಚೈತನ್ಯನು ।
ತುಕಾ ವಾಣಿಗೆ ಹೇಳಿದನಲ್ಲ ೪

ಮನಿಹಾಳ ವಾಸಿ ಎಮ್ಮ ಶಿವನು ।
ಗಿರಿಜೆಗೆ ಉಪದೇಶಿಸಿದನಲ್ಲ ೫

## ೯೬

ಬ್ರಹ್ಮ ಬೇರೆ ಪರಬ್ರಹ್ಮ ಬೇರೆ । ಕ್ರಿಯಾ
ಕರ್ಮ ಬೇರೆ । ಬ್ರಹ್ಮದೊಳಗೆ ಕ್ರಿಯಾಕರ್ಮವಿಲ್ಲ ।
ಕರ್ಮ ಬ್ರಹ್ಮವಲ್ಲ ಪ

ಶಿವನೊಳು ನೋಡಲು ಜಗವೇ ಇಲ್ಲ ।
ಜಗ ಶಿವನಲ್ಲ. ಶಿವನೂ ಜಗವೂ
ಎಂಬೊ ಮಾತು ಸಲ್ಲ । ಅರಿದಾತನೆ ಬಲ್ಲ ೧

ಬೀಜದಿ ನೋಡಲು ವೃಕ್ಷವೆ ಇಲ್ಲ । ವೃಕ್ಷ
ಬೀಜವಲ್ಲ । ವೃಕ್ಷ ಬೀಜದಿ ಫಲಸ್ವಾದವಿಲ್ಲ ।
ತಿಂದಾತನು ಬಲ್ಲ ೨

ಪಾಮರ ನರರೆಲ್ಲ ಭವತಾರಕನ ಭಕ್ತರಲ್ಲ ।
ಭವತಾರಕನ ಭಕ್ತನು ನರನಲ್ಲ । ಗುರುನಾಥನೆ ಬಲ್ಲ ೩

## ೯೭

ಎಲ್ಲ ಮಾಡಿದವ ನೀನೊ ನಾನೊ ।
ಅಲ್ಲ ಅಹುದು ಎಂದು ಆಡುವದೇನೊ ಪ

ಪುಣ್ಯಕೆ ಉಗ್ರ ಪಾಪವ ರಚಿಸಿದೆ ।
ಪುಣ್ಯದಿಂದಲಿ ಪಾಪವ ಕಳೆದೆ ೧

ಸತ್ಯದೊಳಗೆ ಒಂದು ಮಿಥ್ಯವ ಪುಟ್ಟಿಸಿದೆ ।
ಸತ್ಯದಿಂದಲಿ ಆ ಮಿಥ್ಯ ಹರಿಸಿದೆ ೨

ಅರಿವಿನೊಳಗೆ ಒಂದು ಮರವನು ಬೆರಸಿದೆ ।
ಗುರು ಭವತಾರಕನಾಗಿ ತಾರಿಸಿದೆ ೩

## ೯೮

ಕೊಂಬುವರಿಲ್ಲೆನ್ನ ಸರಕ । ಇಂಬಿಲ್ಲ ಇಡಲಿಕ್ಕೆ ।
ಹೂರಲಾರೆ ಮುದುಕ ನಾ ಪ

ಹರನೊಳು ಗಿರಿಜೆಯು ತಾ । ಮೋಹಿಸಿ ಸೆರೆಯಾದಳು ।
ವರ ಮುನಿಗಳು ಅರಣ್ಯಕೆ ಪೋದರು ಸುರರು ಸೇವಿಸ
ಲಿನ್ನು । ಸೆರೆ ಸಿಕ್ಕಿರುವರಲ್ಲಾ । ಧರೆಯೊಳು ಲೋಗರಿಗೆ ।
ಗುರುತಿಲ್ಲಾ ಇದರೊಳು ೧

ಕೊಂಡವರಿಗೆ ಲಾಭವು ಒಂದಕ್ಕೆ ನಾಲ್ಕು ।
ಇಸಗೊಂಡವರಿಗೆಂಟು ಮಡಿಯಹುದು ॥ ಮಂಡ
ತನದಲಿ ಕಸಗೊಂಡೇನೆಂದವರಿಗೆ । ಮಂದ
ಮತಿಗಳಿಗೆಂದಿಗೂ ದೊರೆಯದು ೨

ತಂದೆ ಸದ್ಗುರು ಭವತಾರಕನ ಭಜಕ- ।
ರಿಂದು ಈ ವಾರ್ತೆಯನು ಕೇಳಿದರೆ । ಬಂದು ವಂದಿಸೆನ್ನ ॥
ಆನಂದವ ಬಡಿಸುವರು । ಎಂದು ಆಗುವದೋ
ಹಾಗೆಂದು ಯೋಚಿಸುವೆ ೩

## ೯೯

ಮಾಡಿದ್ಯಾ ಇಂದಿಗೆ ಹೀಂಗ । ಆಗದ್ಹಾಂಗ ॥
ಕೂಡಿ ದುರ್ಜನರೆಲ್ಲ ನಗುವ ಪರಿಯಲಿ ಪ

ಏನು ಕಂಡು ಒಲಿದೀ ನೀ ಅವಗೆ । ಖಳನ ಘಾತಕ
ಮನದವಗೆ । ತಾನು ದಾರೆಂದು ವಿಚಾರಿಸದಧಮಗೆ ।
ಸಾನುಕೂಲಾಗಿ ಸರ್ವ ಬಗೆಯಲಿ ೧

ಸಾಧು ಸಂತರು ಎಂಬುದನರಿಯಾ । ಭೇದವಾದ ಕುಬುದ್ಧಿಯ
ಮರೆಯಾ ॥ ಕಾದಾಡಿ ಕರ್ಮದ ಹಾದೀ ಹಿಡಿಯದ ।
ವಾದಕಂಜದ ಜನ ಸಾಧಕನಿಗೆ ೨

ಹಿಂದಿನ ಗುಣಗಳ ಬಿಟ್ಟಾಕೋ । ಮಂದಿಗೆ ಪದವಿಯ
ಕೊಟ್ಟಾಕೋ ತಂದೆ ಸದ್ಗುರು । ಭವತಾರಕನಂಘ್ರಿಯ ।
ಹೊಂದಿದವರಿಗಭಿಮಾನವಿಲ್ಲದಂತೆ ೩

## ೧೦೦

ಕಲಿಯುಗದೊಳು ಕಂಡೆನು ನಿನ್ನೊಬ್ಬನ । ಕಲಿವಾಳದ
ನಿಂಗಪ್ಪ ॥ ಕಲಿತ ಬುದ್ಧಿಯು ಕಡೆಯಲಿ ನಿನ್ನ ।
ಕೆಲಸಕೆ ಏನೂ ಬಾರದಪ್ಪ ಪ

ಎತ್ತು ಎಮ್ಮಿ ಆಕಳ ಹೋರಿ । ಜತನ ಮಾಡೀದೆಪ್ಪ ॥
ಮೃತ್ಯು ದೇವತೆಗೆ ತುತ್ತು ಇದರೊಳು ।
ಮುಕ್ತಿ ನಿನಗಿಲ್ಲಪ್ಪಾ ೧

ಹೊಲಮನಿಯೆಂದು ನಲಿನಲಿದಾಡುತ । ಒಲಒಲ
ಗುಟ್ಟುವಿಯಪ್ಪಾ ॥ ಹೊಲಮನಿ ಸಾಧಿಸಿ ಸಂಗಡ ।
ಒಯ್ದಿಲ್ಲಾ ನಿಮ್ಮಪ್ಪಾ ೨

ಶುದ್ಧವಾಗಿ ನೀ ಕೋಶವ ಕಲಿತು । ಬದ್ಧವ
ತಿಳಕೋಳಪ್ಪಾ ॥ ಬುದ್ಧಿವಂತನು ನೀ ಸ್ವರ್ಗದ
ಸುದ್ದಿಯು । ಸ್ವಲ್ಪವು ನಿನಗಿಲ್ಲಪ್ಪಾ ೩

ರೋಗವ ನೀಗಿಸಿ ಜನರಿಗೆ ಭೋಜನ । ಭೋಗವನ್ನು ನೀ
ಪಡೆದೆಪ್ಪಾ ॥ ಹೋಗದು ಕರ್ಮವು ಇದರಲಿ ಮುಂದಿನ ।
ಆಗಮ ಮಹಿಮೆಯ ತಿಳಕೋಳಪ್ಪಾ ೪

ಅಪರೂಪದ ನರದೇಹಕೆ ಬಂದು । ವಿಪರೀತ
ವಿದ್ಯಾಕಪ್ಪ ॥ ಗುಪಿತದಿ ಭವತಾರಕನ ಭಕ್ತರ ।
ಕೃಪೆಯನು ನೀ ಸಂಪಾದಿಸಪ್ಪಾ ೫

## ೧೦೧

ಇಷ್ಟು ಸುಳ್ಳೆಂಬೋದು ತಿಳಿಯಲಿಲ್ಲ ।
ಕಷ್ಟವಿದರೊಳಗು ಎಳ್ಳಷ್ಟು ಸುಖವಿಲ್ಲ ಪ

ಮಡದಿ ಮಕ್ಕಳು ಮನೆಮಾರೆಲ್ಲ ಸುಳ್ಳು ।
ಹಡೆದ ತಾಯಿ ತಂದೆ ಮೊದಲೇ ಸುಳ್ಳು ।
ಒಡ ಹುಟ್ಟಿದ ಅಣ್ಣ-ತಮ್ಮಂದಿರು ಸುಳ್ಳು ।
ಒಡವೆ ವಸ್ತುಗಳೆಲ್ಲ ಕಡೆ ತನಕ ಸುಳ್ಳು ೧

ಆನೆ ಕುದುರೆ ಸೇನೆ ದೌಲತು ಸುಳ್ಳು ।
ನಾನು ನೀನೆಂಬ ಅಜ್ಞಾನವೇ ಸುಳ್ಳು ।
ಮೌನ ಹಿಡಿವುದು ಸುಳ್ಳು ।
ಸ್ವಾನುಭವಕೆಲ್ಲ ಸುಳ್ಳು ೨

ಕೊಟ್ಟು ಕೊಂಡೋದು ಸುಳ್ಳು ।
ಕೆಟ್ಟದೊಳ್ಳೇದೆಂಬುವದು ಸುಳ್ಳು ।
ಧಿಟ್ಟ ಭವತಾರಕನ ಮುಟ್ಟಿ ಪೂಜಿಸಿನ್ನು ।
ಬಟ್ಟ ಬಯಲಾಗಿ ತಾ ಘಟ್ಯಾದನು ೩

## ೧೦೨

ಕೇಳು ಮಗನೆ ನಾ ಹೇಳುವೆ ನಿನಗಿದ –। ನೇಳಲ
ಮಾಡದಿರೋ ॥ ಭಾಲಾಕ್ಷನ ನೀ ತಿಳಿಯದೆ ಈ ಭವ
ಕೊಳ್ಳವ ಬೀಳದಿರೊ ಪ

ಹರುಷ ವಿಷಾದವು ಮನಸಿನದೆಂಬರೆ । ಮನಕೆ
ತಗುಲಿತೆಂತಾ ॥ ಸ್ಪರಿಶ ಶಬ್ದವು ರೂಪವು ರಸ ಗಂಧದಿ ।
ತೋರಿತು ಭ್ರಾಂತೀ ೧

ಹಸಿವು ತೃಷವು ಜೀವನದೆಂಬರೆ ಜೀವನಕದು ಉಂಟೇ ॥
ವಿಷಯ ಸುಖವು ಕಳೆದಾನಂದದ ಬೋಧದೊಳಗುಂಟೇ ೨

ಜರೆ ಮರಣವು ತನುವಿನದೆಂಬರೆ । ತನುವದು ಒಂದಲ್ಲಾ ॥ ಚಿನುಮಯ
ಭವತಾರಕನೊಲಿದರೆ ಷಡೋರ್ಮಿಗಳೇನಿಲ್ಲಾ ೩

## ೧೦೩

ಪಂಚಾಕರಣಿಯ ಹಂಚಿಕೆಗಳನು ನಿ– । ರ್ವಂಚನೆಯಲಿ
ನೀ ಮಾಡೋ ॥ ಸಂಚಿತ ಪ್ರಾರಬ್ಧ ಕ್ರಿಯಮಾಣಾ ।
ಪ್ರಪಂಚದಿ ಈಡ್ಯಾಡೋ ಪ

ಸ್ಥೂಲಕೆ ಭೋಗಕೆ ಸಾಕ್ಷಿಯು ಸೂಕ್ಷ್ಮವು ।
ಕಾರಣದಲಿ ಸಾಕ್ಷೀ ॥ ಭೋಗಾಪೇಕ್ಷೆಯು
ಸೂಕ್ಷ್ಮವು ನೀನಿತುದುಹ ಕಾರಣ ಲಕ್ಷೀ ೧

ಸ್ಪರ್ಶದಿ ಶಬ್ದವು ಶಬ್ದಾಸ್ಪರ್ಶವಿದು ।
ರೂಪವು ತೋರಿತು ರೂಪವು ರಸದಲಿ ॥
ಗಂಧದಿ ಕಾಣಿಸಿತೊ ೨

ಕರ್ಮದಿ ರೂಪವು ರೂಪದಿ ಕರ್ಮವು ।
ಕರ್ಮರೂಪಕ್ಕೇ ॥
ವ್ಯಾಪಕ ಭವತಾರಕನೆಂದರಿಯದೆ ಕಲಾಪವ್ಯಾಕೀ ಮನಕೆ ೩

## ೧೦೪

ಇದು ಎಲ್ಲಾ ಇದು ಎಲ್ಲಾ
ಏನಾರೆಂಬುದ ಬಲ್ಲ್ಯಾ ಪ

ತನುವಿದು ಮೊದಲಿಗೆ ನಿನ್ನದಲ್ಲಾ ॥
ತನು ಸಂಬಂಧದ ಗುರುತು ಬಿಡಲಿಲ್ಲಾ ೧

ನಿಜವೆನುತಲಿ ಆಶೆಯ ಕಚ್ಚಿ
ಅಜಹರಿಹರರಾದರು ಕೇಳೇ ಹುಚ್ಚಿ ೨

ಗುರುಭವತಾರಕನ ನಿಜವಾದ ಭಕ್ತಾ ।
ಅರಿತು ಆದನು ಜೀವನ್ಮುಕ್ತಾ ೩

## ೧೦೫

ಇದು ಏನೋ ನಿನ್ನ ಗುಡೀ ಗುಡೀ ।
ಒಳಗಿನ ಕಸವನು ಹೊಡೀ ಹೊಡೀ ಪ

ಹಗಲಿರುಳೊ ನೀ ಬದುಕ ಮಾಡಿ ।
ಏನು ಗಳಿಸಿದ್ಯೋ ಹುಡೀ ಹುಡೀ ॥
ಜಗದೊಳು ದೇವನ ತಿಳಿಯಲೊಲ್ಲಿ ।
ತಿಳಿದೀತೊ ಅಲ್ಲಿಗೆ ನಡೀ ನಡೀ ೧

ಹಸಿದು ಬಂದು ನೀ ವಸ್ತಿಯಾಗಿಳಿದರೆ ।
ಮತ್ತೇನಾರ ಕೊಡೂ ಕೊಡೂ ॥
ಅಸ್ತಮಯಾದಿತು ಉದಯದಲೆದ್ದು ।
ತಪ್ಪದೆ ಇಲ್ಲೆಂಬೊ ನುಡೀ ನುಡೀ ೨

ನಾಕು ಕಾಯದೊಳು ಎರಡಿಟ್ಟನು ನೀ ।
ಎರಡನೆ ದೇವರಿಗೊಡೀ ಒಡೀ ॥
ಲೋಕಪಾಲಕ ಭವತಾರಕನಂಘ್ರಿಯ ।
ಈ ಕಾಯದಿ ದಯಾ ಪಡೀ ಪಡೀ ೩

## ೧೧೬

ಈ ತನು ನೀನಲ್ಲಾ ನೀನಲ್ಲಾ ।
ತನುವಿನ ಗುಣವು ಇದುವೆ ಎಲ್ಲಾ ಪ

ರೂಪಕ ಬಂದಿತು ಸ್ಥೂಲ ಸೂಕ್ಷ್ಮ ।
ರೂಪವು ಒಂದೇ ಬೀಜದ ಮೂಲಾ ೧

ಕಾರಣ ದೇಹದೊಳಗೆ ಒಂದೇ ।
ಮಹಾ ಕಾರಣದಲಿ ನೋಡಿಂದೇ ೨

ತನುಮನ ಧರ್ಮದ ಜ್ಞಾನವ ಬಿಟ್ಟು ।
ಉನ್ಮನದಿ ನೀ ಲಕ್ಷಿಸು ಲಕ್ಷಿಟ್ಟು ೩

ತನುಮನ ಕರಣಗಳ್ ನಿನಗೆ ಬ್ಯಾರೆ ।
ತನುಮನ ನಿನಗಿಹುದೆಂದೆನಲಾರೆ ೪

ಗುರುಭವತಾರಕ ದೇವನು ಒಲಿದರೆ ।
ತೋರುವನರಿವಿನ ನಿಜ ಭಾವಾ ೫

## ೧೦೭

ಸುಖವಿಲ್ಲ ಆತ್ಮಕೆ ಈ ದೇಹದಿಂದ ।
ಸುಖವ ಪಡೆವುದು ದೇಹ ಈ ಆತ್ಮದಿಂದ ಪ

ಕರ್ಮದೊಳು ಜನಿಸಿ ಬಂದದ್ದು ಈ ದೇಹ ।
ಕರ್ಮಕ್ಕೆ ಅನುಕೂಲವಾಗುವದು ಈ ದೇಹ ।
ಕರ್ಮವನು ಕಡೆ ತನಕ ಮಾಡುತಿರುವದು ದೇಹ ೧

ನಾಮರೂಪದಲ್ಲಿ ನಿಲಿಸಿಹುದು ಈ ದೇಹ ।
ನೇಮನೀತಿಯನ್ನು ನಡೆಸುವದು ಈ ದೇಹ ॥
ಕಾಮ ಕ್ರೋಧದಲ್ಲಿ ಕುಂದಿ ಕುಂದಿ ಬೆಂದು ।
ಪ್ರೇಮದಲಿ ವೈರಾಗ್ಯ ತೊರೆ ತೊರೆದು ೨

ಹಿಂದೆ ಬಂದಿದ್ದು ಈ ದೇಹ ಮುಂದೆ ನಿಂತಿದ್ದು ಈ ದೇಹ ।
ಎಂದೆಂದೂ ಬಿಡನು ಜೀವನು ಈ ದೇಹ ॥
ತಂದೆ ಗುರು ಭವತಾರಕನ ಪಾದಾರವಿಂದವ ।
ಹೊಂದಿದವರಿಗೆ ಇಲ್ಲೋ ಈ ನಾಲ್ಕು ದೇಹ ೩

## ೧೦೮

ಸಾಯವಲ್ಲದೋ ಮನಸು । ಕಾಯದೊಳಗೆ
ಕುಳಿತುಕೊಂಡು । ಬಾಯ ಬಿಡಿಸುತಿಹುದು ಜನಕೆ ಪ

ಕಾಲಿಲ್ಲದೆ ಆಡುತಿಹುದು । ನಾಲಿಗಿಲ್ಲದೆ ನುಡಿಯುತಿಹುದು ।
ಕಣ್ಣಿಲ್ಲದೆ ನೋಡುತಿಹುದು । ಕರ್ಣವಿಲ್ಲದೆ ಕೇಳುತಿಹುದು ೧

ಎತ್ತ ಹೋದರೆನ್ನ ಬೆನ್ನ । ಹತ್ತಿಬಂದು ಕಾಡುತಿಹುದು ।
ಕಿತ್ತಿ ಇದರ ಬೇರನೆನಗೆ ಮತ್ತೆ ತೋರಿಸುವವರ ಕಾಣೆ ೨

ತಂದೆ ಭವತಾರಕನ ಭಜಕರಿದನು ಕೊಂದರಂತೆ ।
ಇಂದು ಶರಣು ಹೊಕ್ಕು ಅವರ । ಹಿಂದೆ ಕಳೆಯಬೇಕಿದನ ೩

## ೧೧೯

ಹಿಡಿ ಜ್ಞಾನಾ ಹಿಡಿ ಜ್ಞಾನಾ । ಬಿಡು
ಬಿಡು ಬಿಷಯದ ಧ್ಯಾನಾ ಪ

ಉತ್ತಮ ಮನುಷ್ಯ ಜನ್ಮಕೆ ಬಂದೆ ।
ಸತ್ಯ ಮಿಥ್ಯಾ ತಿಳಿಯದೆ ನೊಂದೆ ೧

ತನುವಿದು ನೋಡಲು ಮಣ್ಣಿಗೆ ಎರವು ।
ಮನದೊಳು ಮುಸುಕಿತು ಮಾಯಾ ಮರವು ೨

ಗುರುಭವತಾರಕ ಭಕ್ತನ ಪಾದಾ ।
ಪೂಜಿಸಿ ಆಲಿಸು ಬೋಧದ ನಾದಾ ೩

## ೧೨೦

ಏನು ಇವನದು ಗುಮಾನ ರಾಮಾ ।
ನೀನೆ ನೋಡಿದೆಲ್ಲ ? ಉಳಿದಿತೇ ಮಾನಾ ? ಪ

ದಶಕಂಠನಿಂದ ಬಲ್ಲಿದನೇ ?
ಪಶುಪತಿ ಇವಗೇನು ವರವ ಕೊಟ್ಟಿಹನೇ ? ೧

ಯಾತಕ ಅಂಜುವಿ ನೀನು ಮಹಾ ।
ಪಾತಕ ಹತ್ತದ ಕೊಂದರೆ ಏನೋ ೨

ಗುರುಭವತಾರಕನ ತಂದೆ ನೀ ।
ವರವ ಕೊಟ್ಟು ಮಾತು ಅರಿತುಕೋ ಇಂದೇ ೩

## ೧೧೧

ಇದು ಏನೋ ನಿನ್ನ ಮನೀ ಮನೀ ।
ಹಿಂದಿನ ಪಡಿಪಾಟ ನೆನೀ ನೆನೀ ಪ

ನೀನು ತಾಳಿದ ದೇಹವಿರುವವಗಣಿತ ।
ಗಣಿಸಲು ವರುಷದ ಹನೀ ಹನೀ ॥
ಏನ ಹೇಳಿದರೂ ತಿಳಿಯಲೊಲ್ಲಿ ನೀ ।
ಒಡೆಯದು ಜ್ಞಾನದ ಸೊನೀ ಸೊನೀ ೧

ನರ ತನು ದೊರೆವುದು ದುರ್ಲಭ ಕೇಳಿದು ।
ಪರಗತಿ ಬೀಜದ ತೆನೀ ತೆನೀ ॥
ಅರಿಯದೆ ಮರೆವರೆ ಪಾಮರ ನಿನಗೆ ।
ಹತ್ತಿದೆ ಆಶೆಯ ನೆನೀ ನೆನೀ ೨

ದೇವರಿಗೆ ನೈವೇದ್ಯವನಿಟ್ಟರೆ ।
ಸವಿಯನ್ನವುಂಬುದೆ ಕೊನೀ ಕೊನೀ ।
ಭಾವಿಸಿ ಭವತಾರಕನ ಭಕ್ತರ ।
ಪೂಜಿಸಿ ಶಿರವನು ವನೀ ವನೀ ೩

## ೧೧೨

ವಿಷಯ ಸುಖ ಇನ್ನೂ ವಿಷವಾಗಲಿಲ್ಲ । ನಿರ್ವಿಷಯ
ಬೋಧಾನಂದ ದೊರೆಯಲೇ ಇಲ್ಲ ಪ

ತನುವ ಧರಿಸಿ ಬಂದು ತನುವ ಕಳೆಯಲಿಲ್ಲ ।
ಮನದಿ ವಿಚಾರಿಸಿ ಮನವಳಿಯಲೇ ಇಲ್ಲ ।
ನೆನಹು ನೆಲೆಗೊಂಡು ನಿಜಕೆ ನಿಲ್ಲಲಿಲ್ಲ ।
ಚಿನುಮಯಾತ್ಮಕನಾಗಿ ಚರಿಸಲೇ ಇಲ್ಲ ೧

ಪಾಪ ಪುಣ್ಯಗಳ ಕಲಾಪ ಹೋಗಲಿಲ್ಲ ।
ವ್ಯಾಪಕ ತಾನೆಂದು ತಿಳಿಯಲೇ ಇಲ್ಲ ।
ರೂಪ ನಾಮ ಕ್ರಿಯಾ ವ್ಯಾಪವಳಿಯಲಿಲ್ಲ ।
ಆ ಪರ ವಸ್ತುವು ಗೋಚರಿಸಲೇ ಇಲ್ಲ ೨

ಗುರು ಭವತಾರಕ ಗುರುತು ತೋರಿಸಲಿಲ್ಲ ।
ಗುಪಿತದ ಮಾರ್ಗವು ಸಿಗಲೇ ಇಲ್ಲ ।
ಅಪರಿಮಿತದ ವಸ್ತು ಅಡಗಿ ನಿಂದಿತಲ್ಲ ।
ವಿಪರೀತ ಮಾಯಾ ಬಲಿ ಹಬ್ಬಿತಲ್ಲ ೩

## ೧೧೩

ತಿಳಿಸುವ ಮಾತಲ್ಲಾ । ತಿಳಿಸದೆ ತಿಳಿಯುವ ಮಾತಲ್ಲಾ ।
ತಿಳಿಸದೆ ತಿಳಿಯದು । ತಿಳಿಯದು ನಿನಗದು ।
ತಿಳಿಸದೆ ತಿಳಿಯದು । ತಿಳಿಯದೆ ಹೊಳೆಯದು ಪ

ಎಚ್ಚರ ನೀ ಮರೆತಿ ಮದ ಮತ್ಸರದಲೀ ಬೆರತೀ ।
ಅಚ್ಚ ಹೇಸಿಕೀ ದೇಹ ಮುಚ್ಚಿದ ಚರ್ಮಕ್ಕೆ ।
ನಿಶ್ಚಯವೆಂದರಿವೆ ಛೇಕರವೇ ೧

ಭೇದವಳಿಯಲು ಬೇಕೊ ಮನದ ವಿವಾದ ಕಳೆಯಲು ಬೇಕೊ ।
ಸಾಧುಸಂತರ ಸಂಗ ಸೇವಿಸಿ ತತ್ತ್ವದ್ವಾದಿ ಹಿಡಿಯ ಬೇಕೊ ।
ನೀನೆ ಹೀಗ್ಯಾಕೊ ೨

ಸಾಧಿಸುವದು ಯುಕ್ತಿ । ನಿಜಾನಂದ ಬೋಧ ಮುಕ್ತಿ ।
ಆದಿಮೂರ್ತಿ ಭವತಾರಕ ದೇವ ಪಾದವ
ಪೂಜಿಸಿ ನೀವ್ । ತಿಳಿದೆ ಭಜಿಸದಲೇ ೩

## ೧೧೪

ಏಳು ಏಳೆನುತ ಭಾನು ಬರುತಿಹ ।
ಹೇಳುವರ್‍ಯಾರಿಲ್ಲ ನಿಮಗೆ ಜ್ಞಾನವ ಪ

ಇರುಳೆಲ್ಲ ನೀವಿನ್ನು ವಿಷಯಕೆ ಮರುಳಾಗಿ ।
ಹರಟಿಯೊಳಗೆ ಸೊರಗುತಿಹರೀ ॥
ತರಳಾಕ್ಷಿಯರ ಅಂಗಸಂಗಕೆ ಬೆಂಡಾಗಿ ।
ಬರದ ಆಯುಷ್ಯ ಬರಿದೇ ಕಳೆವಿರೀ ೧

ಮಾಡಲಿಲ್ಲವು ಧ್ಯಾನ ಯೋಗ ಜಪ ತಪ ।
ನೀಡಲಿಲ್ಲವು ದಾನ ಧರ್ಮವ ॥
ನೋಡಲಿಲ್ಲವು ಸಾಧುಸಂತರ ನಡತೆಯ ।
ಕೇಡ ಬಂದಿತು ಮುಂದೆ ನೋಡಲು ೨

ತಂದೆ ಭವತಾರಕನೆ ಹಿಂದಾದುದಾಗಲಿ ।
ಮುಂದಾರ ನೀವಿನ್ನು ಒಂದು ನಿಮಿಷವು ।
ಗೊಂದಲ ಬಿಟ್ಟು ಅರಿತು ಕೊಂಡು ।
ಹೊಂದಿರಿ ಪೂರ್ಣ ಆನಂದವನೆಂದು ೩

## ೧೧೫

ಇದು ಏನೊ ನಿನ್ನ ಮತೀ ಮತೀ ।
ಇದರಿಂದಾಗದು ಗತೀ ಗತೀ ಪ

ಸತಿಸುತರತಿಶಯ ಹಿತವರು ಎನುತಲಿ । ಬಣ್ಣಿಸಿತೊ ನಿನ್ನ ಸ್ಥಿತೀ ಸ್ಥಿತೀ ।
ಸತಿ ಸುತರಿಂದಲಿ ಗತಿಯನ್ನು ಪಡೆದ
ಕೇಳ ಬಲ್ಲೆಯಾ ಕಥೀ ಕಥೀ ೧

ಸಂಚಿತ ಪ್ರಾರಬ್ಧ ಕ್ರಿಯಮಾಣಾ । ತೀರಲಿಲ್ಲವೋ ಮಿತೀ ಮಿತೀ ।
ಪಂಚ ದಶಾಕ್ಷರೀ ಮಂತ್ರವ ಜಪಿಸಲು ।
ನೀ ಪರಶಿವನೆಂಬುದೋ ಶ್ರುತೀ ಶ್ರುತೀ ೨

ಆದಿ ಮೂರ್ತಿ ಭವತಾರಕ ದೇವನ । ಪೂಜಿಸಿ ಮಾಡೊ ಸ್ತುತೀ ಸ್ತುತೀ ।
ಅರಿಯದಿರ್ದರರ್ಚಕರನು ಸೇವಿಸಿ ।
ಆಗು ನೀ ಭೂಪತೀ ಭೂಪತೀ ೩

## ೧೧೬

ಕೀಳಬಾರದೇ ಹಲ್ಲ । ಆಳುವಾಡ
ತಿನ್ನುಮತವ ಏಳಲ ಮಾಡುವವರ ಪ

ಮೂರು ಮೂರ್ತಿಗಳನೆ ಕರೆದು ।
ಸಾಯದಂಥ ದನುಜರನ್ನು ।
ತಾಯಿ ನೀನೆ ಕೊಂದು ಸುರ ನಿ– ।
ಕಾಯವನ್ನು ಕಾಯಲಿಲ್ಲ ೧

ಯಾಕೆ ಬಾರದಿನ್ನು ಕ್ರೋಧ ।
ಮೂಕಳಾದೆ ಮಾತನಾಡು ।
ಲೋಕಪಾಲಳೆಂಬ ಬಿರುದ ।
ಸಾಕು ಮಾಡಿದೇನೇ ಇಂದು ೨

ಇಂದು ನೀನು ಸುಮ್ಮನಿರಲು ।
ಮುಂದೆ ದಾರಿಗುಸುರಲಿನ್ನು ।
ತಂದೆ ಭವತಾರಕನ ।
ನಿಂದೆ ಮಾಡುವವರ ಹಲ್ಲ ೩

## ೧೧೭

ಏನ ನೋಡಿದೆ ದೇವಿ ಏನ ನೋಡಿದೆ ।
ಹೀನ ಜನರು ಭಜಕರ ಮಾನಹಾನಿ ಮಾಡುವದನ ಪ

ಹಿಂದೆ ದನುಜ ಕುಲವನೆಲ್ಲ ।
ಕೊಂದು ನಿನ್ನವರಿಗೆ ಆ- ।
ನಂದ ಪದವಿಯಿತ್ತು ದಯಾ ।
ಸಿಂಧು ಎಂದು ನಂಬಿ ಇದ್ದೆ ೧

ಖಳರ ನಾಲಿಗೆಯನ್ನು ಮತ್ತೆ ।
ಸೆಳೆದು ಸೀಳಿ ಬಿಸುಟುತಿರಲು ।
ಉಳಿವುದಿಲ್ಲ ಮತವು ಎಂದು ।
ತಿಳಿಯವಲ್ಲದೇನೆ ನಿನಗೆ ೨

ತಂದೆ ಭವತಾರಕನ ಪಾದ ।
ಹೊಂದಿದವರ ಹೆಸರನ್ನು ।
ಮುಂದೆ ತಗಿಯದ್ವಾಂಗ ನೀನು ।
ಇಂದು ತೋರು ಮಹಿಮೆಗಳನು ೩

## ೧೧೮

ಹೆಡಗುಡಿ ಕಟ್ಟಿ ಹೊಡೆಯಿರಿ ಇವನ ।
ಬಡತನ ಸಂತರಿಗ್ಹೇಳುವನ ಪ

ಸೆಡಗರದಲಿ ಸಂಸಾರವ ಮಾಡುತ
ಬಿಡದಾಶೆಯಲೀ ಮರಗುವನ ಅ. ಪ

ಅನ್ನವ ಬೇಡುವ ಅತಿಥಿಯು ಬಂದರೆ ।
ನಿನ್ನೆ ನಾ ಉಪವಾಸೆಂಬುವನ ।
ಅನ್ಯಾಯದಲಿ ಪಾಪವ ಗಳಿಸಿ ।
ನಾಯ್ ಕುನ್ನಿಯಂತೆ ಎಲ್ಲರ ಬೊಗಳುವನ ೧

ವಸ್ತ್ರವ ಕೊಡು ಎಂದವರಿಗೆ ಹರಕೊಂ- ।
ದೊಸ್ತ್ರವ ತೆರೆದು ತೋರುವನ ।
ವೇಶ್ಯಾ ಸ್ತ್ರೀಯರ ಕಂಡರೆ ಕರೆದು ।
ಉತ್ತಮ ವಸ್ತ್ರವನೀಯುವನ ೨

ಮಂತ್ರವ ಅರಿಯದೆ । ತಂತ್ರವ ಮಾಡುತ ।
ಅಂತರ ಪೂಜೆಯ ಅರಿಯದವನ ।
ಅಂತರಂಗದಿ ಭವತಾರಕನಂಘ್ರಿಯ ।
ಶಾಂತದಿಂದಲಿ ಧ್ಯಾನಿಸದವನ ೩

## ೧೧೯

ಮೊಚ್ಚೆ ಮೊಚ್ಚೆಲಿ ಹೊಡೆಯಿರಿ ಇವನ । ನೆಚ್ಚಿದೆ
ತನುವಿದನೆಂಬುವನ ॥ ಹುಚ್ಚ ನಾಯಿಯೋಲ್
ಎಚ್ಚರವಿಲ್ಲದೆ । ಅರ್ಚಕ ಜನರನು ಬೊಗಳುವನ ಪ

ದಾನಧರ್ಮ ಪರ ಉಪಕಾರಿಲ್ಲದ । ಮಾನುಷನಾಗಿ
ಬಾಳುವನ ॥ ತಾ ಅಜ್ಞಾನ ಮಾರ್ಗದಿ ನಡೆದು ।
ಜ್ಞಾನವ ಪರರಿಗೆ ಹೇಳುವನ ೧

ಸತಿಸುತರತಿಶಯ ಹಿತವರು ಎನುತಲಿ । ಸತತವು ಅವರೊಳು
ಮರಗುವನ । ಮಿತಿಯಿಲ್ಲದೆ ಧನಧಾನ್ಯವ ಬೇಡುತ ।
ಕ್ಷಿತಿಯ ಮೇಲೆ ತಿರುಗುವನ ೨

ಕರುಣವ ಪಡೆಯದೆ ಭವತಾರಕನ । ನರ ತನುಗಳನು
ಸ್ತುತಿಸುವನ । ಪರಿಪರಿ ಸಂಸಾರದ ವಿಷಯದಲಿ ।
ನಿರುತದಿ ಮನವನು ಮಥಿಸುವನ ೩

## ೧೨೦

ನೀ ಬಲು ಒಳಗೆ ಒಳಗೆ । ಇಲ್ಲವು
ಜಗದೊಳು ನಿನ್ನಂಥಾಕಿ ಎಂಥಾಕಿ ಎಂಥಾಕಿ ಪ

ಕಣ್ಣಿನೊಳಗೆ ನೀ ಬರುವೆ ।
ಕಣ್ಣ ತೆರೆದರೆ ಕಾಣಿಸದಿರುವೆ ೧

ನಿನ್ನಯ ರೂಪವು ಮುಚ್ಚಿ ।
ಎಲ್ಲಾ ರೂಪಕೆ ತಗಲಿತು ಮಚ್ಚಿ ೨

ಭವತಾರಕ ಭಜಕರಿಗೊಲಿವೆ ।
ಭಾವಿಕ ಜನರಾನಂದದಿ ನಿಲುವೆ ೩

## ೧೨೧

ನೋಡು ನಿನ್ನೊಳು ನೀ ನೋಡು । ಸಾಕು ಸಾಕು ಈ
ಲೋಕದ ನಡವಳಿ । ಯಾಕಬೇಕು ಪಿನಾಕಿಯ ಭಜಿಸೋ ಪ

ನೋಡೊ ಸದ್ಗುರುವಿನ ಸೇವೆಯ ಮಾಡೋ ।
ನೀಡೋ ತನುಮನಧನವನು ನೀ । ಕೂಡೋ
ಸಂತರ ಸಂಗದಿ ಬೇಗ । ಆಡಲ್ಯಾಕೆ ಅಗಣಿತ
ಸಂಪದ ಕೈಗೂಡುವದೋ ಅದ । ಬೇಡದೆ ಬೇಗನೆ ೧

ಆಶೆ ಹಿಡಿದು ಆದಿ ಘಾಸಿ ಮನದೊಳು ।
ಮೀಸಿಯ ತಿರುವಿದಿ ಪಂಥವ ಹೆಚ್ಚಿಸಿ ।
ಸಾಸಿರ ನಾಮದಿ ಒಂದನು ನೆನೆಯದೆ ।
ಕ್ಲೇಶ ಬಡುವಿ ಜಗದೀಶನು ಒಲಿವನೆ ? ೨

ಹಿಂದೆ ಜನ್ಮ ನೊಂದೆ ಸದ್ಗತಿ ಪಡೆಯದೆ ।
ಮುಂದೆ ಸಾಧಿಸು ಶಿವ ತತ್ತ್ವವ ಒಂದೇ ।
ತಂದೆ ಸದ್ಗುರು ಭವತಾರಕನಂಘ್ರಿಯ ।
ಹೊಂದಿ ನಿಜಾನಂದ ಬೋಧದಲಿರು ನೀ ೩

## ೧೨೨

ನೋಡಿದ್ಯಾ ಈ ದೇಹಕೆ ಬಂದು । ನೋಡಿದ್ಯಾ ನೋಡಿದ್ಯಾ ।
ನೋಡದವನ ನೀ ನೋಡುವೆ ಎಂದರೆ ।
ನೋಡುವಿ ಎಂದಿಗೆ ನೋಡಿದ್ಯಾ ಪ

ಒಬ್ಬವರ್ಯಾರೂ ತೋರುವದಲ್ಲ । ತೋರಿಸಿಕೊಂಡರದು ತಾನಲ್ಲ ।
ತೋರಡಗುವದಕೆ ಮೀರಿರುವದು ಎಂದು ।
ಸಾರುತಿಹುದು ಶ್ರುತಿಸಾರವೆಂದು ೧

ರೂಪವನ್ನು ಕಲ್ಪಿಸಲಿಲ್ಲಾ । ಚಿದ್ರೂಪವನು ಸರ್ವ
ರೊಳೆಲ್ಲಾ । ಪಾಪ ಪುಣ್ಯಕೆ ವ್ಯಾಪಕನಾದ ।
ದೀಪ ಪ್ರಕಾಶನ ಬೋಧಿಪ ಬಲ್ಲಾ ೨

ಕರೆದರೆ ಎತ್ತೆತ್ತ ಬಾರ ಮತ್ತೆ । ಮರೆದರೆ ಎತ್ತೆತ್ತ
ಹೋಗನು ದೂರ । ಗುರು ಭವತಾರಕ ಶಿರದೊಳು
ಕರವಿಟ್ಟು । ವರದ್ಹೇಳಿದ ವಸ್ತು ಪರಿಪೂರ್ಣವಾಗೆ ೩

## ೧೨೩

ನೀ ಬ್ರಹ್ಮ ನೀ ಬ್ರಹ್ಮ ನಿನಗ್ಯಾತಕೀ ಕರ್ಮ ಪ

ತನುವಿದು ನೋಡಲು ಮೊದಲೆಲ್ಲಿತ್ತು ।
ತನುವಿಗೆ ತಗಲದೆ ಬಂದಿಯಾ ಹೊತ್ತು ೧

ಮಾಡುವಿ ಪಠಣವ ಅನುದಿನ ವೇದಾ ।
ಅದರೊಳು ಹೇಳಿತ್ತೇ ? ಜೀವ ಶಿವ ಭೇದಾ ೨

ಗುರು ಭವತಾರಕ ಭಕ್ತನಾದರೆ ।
ಆಗುವಿ ನೀ ಜೀವನ್ಮುಕ್ತಾ ೩

## ೧೨೪

ಆವ ಕರ್ಮವಿಲ್ಲ ಆವ ಧರ್ಮವಿಲ್ಲವೋ ।
ಕೇವಲಾನಂದಭಾವ ಬೋಧದಲ್ಲಿ ಬೆರೆಯಲು ಪ

ತನುವು ಬೇರೆ ಮನವು ಬೇರೆ । ಮನದ ಒಳಗೆ ನೆನಹು ಬೇರೆ ।
ತನುವು ಮನವು ನೆನವಿಗಿನ್ನು । ಸಾಕ್ಷಿಯಾಗಿಹ । ಚಿನುಮಯಾತ್ಮ
ತಾನೆ ತನಗೆ । ಜನನ ಮರಣ ಎಂಬುದೆಲ್ಲ । ಮನದ
ಆಟವೆಂದು ತಿಳಿದು । ಉನ್ಮನದಿ ಘನದಿ ನಲಿವಗೆ ೧

ಸತ್ಯ ಶರಣರಡಿಯ ಪಿಡಿದು । ತತ್ತ್ವ ಶಾಸ್ತ್ರವನ್ನು ತಿಳಿದು ।
ನಿತ್ಯಾನಿತ್ಯವನು ವಿವರಿಸುತಲಿ । ಭಕ್ತಿಯಿಂದಲಿ ॥
ನಿತ್ಯ ಪೂರ್ಣ ವಸ್ತು ತಾನೆ । ಮತ್ತೆ ಬೇರೆ ಇಲ್ಲವೆಂದು ।
ಚಿತ್ತದಲ್ಲಿ ತಿಳಿದುಕೊಂಡು । ಮಿಥ್ಯವೆಲ್ಲ ಕಳೆದಗೆ ೨

ಹಿಂದಾದುದ ನೆನಿಸಲಿಲ್ಲ । ಮುಂದೆ ಒಂದು ಬಯಸಲಿಲ್ಲ ।
ಬಂದುದೆಲ್ಲ ಸುಖವು ಎಂದು ಶಾಂತದಿಂದಲಿ ॥

ತಂದೆ ಭವತಾರಕನ । ಹೊಂದಿ ಪೂರ್ಣ ವಸ್ತುವಾಗಿ ।
ಬಂಧನವನು ಕಡಿದು ಕೊಂಡು । ಆನಂದದಲಿರುವವಗೆ ೩

## ೧೨೫

ಗಂಡ ಎನಗೆ ಹಾದರ ಮಾಡೆಂದು ಹೇಳಿದನು ।
ಭೂಮಂಡಲದೊಳಗೆಂಥ ಪುಣ್ಯ ಪುರುಷನವ್ವಾ ಪ

ಹತ್ತು ಮಂದಿಯೊಳಗೆ ನಾನು । ಗುತ್ತಿಗಿಲಿದ್ದನೇ ।
ಮತ್ತೆ ಎನ್ನ ಕರೆದು ಒಯ್ದು । ಬ್ಯಾರೆ ಇಟ್ಟನೇ ।
ಅತ್ತ ಇತ್ತ ನೋಡ ಬೇಡ । ಇನ್ನು ಎಂದನೇ ।
ಕತ್ತಲೆಯ ತೆಗೆದು ಸುತ್ತ । ಬೆಳಕ ತಂದನೇ ೧

ಆರು ಮನಿಯ ಮೇಲಕಿನ್ನು । ಏರು ಎಂದನೇ ।
ಆರು ಮಂದಿ ನಾದಿನೇರ ಮೂಗ ಕೊಯ್ದನೇ ।
ಮೂರು ಕೋಣೆಯೊಳಗೊಬ್ಬನ । ತೋರಿ ಕೊಟ್ಟನೇ ।
ಆರ ಅಂಜಿಕೇನವನೊಳು । ಸೇರು ಎಂದನೇ ೨

ತಂದೆ ಭವತಾರಕನು ತಾನು । ಇಂದು ಬಂದನೇ ।
ಒಂದು ಮಾತಿನಿಂದ ಜೀವವನ್ನು ಕೊಂದನೇ ।
ಹಿಂದೆ ಹತ್ತಿ ಬಾರದಂತೆ ಮುಂದೆ ನಿಂತನೇ ।
ಕುಂದು ಕೊರತೆಯೆಲ್ಲ ತೆಗೆದು । ಆನಂದವಿಟ್ಟನೇ ೩

## ೧೨೬

ತೋರಿದ ಶ್ರೀ ಗುರು ಪರಬ್ರಹ್ಮವ ।
ನೋಡಿದೆ ನಾನು ಎನ್ನೊಳಗೆ ।
ಆಡಲ್ಯಾಕೆ ಅಗಣಿತ ಶಾಸ್ತ್ರವ । ಓದಿ ಕಾಣಲಿಲ್ಲ ಪ

ಆಸನ ಬಲಿದು ಶ್ವಾಸವ ನಿಲಿಸಿ । ನಾಸಿಕಾಗ್ರದಲ್ಲಿ ।
ಸೂಸಿದ ಮನ ಹಿಡಿ ಭ್ರೂ ಮಧ್ಯದಲಿ ।
ನೋಡು ಪ್ರಕಾಶಿಪುದು ಅಲ್ಲಿ ೧

ರೂಪವು ಒಂದೇ ವ್ಯಾಪಕವಾಯಿತು । ಈ ಜಗ ಜನದೊಳಗೆ ।
ಆ ಪರ ವಸ್ತುವು ದೀಪಿಸುತಿಹುದದಕೆ ।
ಪಾಪ ಪುಣ್ಯವೆಲ್ಲೀ ? ೨

ವೇದಗಳನುದಿನ ವರ್ಣಿಸುತಿರುವವು । ಆಗಮೋಕ್ತದಲ್ಲಿ ।
ಸಾಧು ಮೂರ್ತಿ ಭವತಾರಕ ದೇವನು ।
ಭೋಧಿಸಿದನು ಇಲ್ಲೀ ೩

## ೧೨೭

ಬಂದಿಯಾತಕೋ ಈ ಭವದೊಳು ।
ನೊಂದಿಯಾತಕೋ ನೀನೊಂದನರಿಯೆ ॥
ಬಂದಿಯಾತನು ನೀ ಮತಿಮಂದನಾಗದೆ ।
ಗತಿ ಮುಂದೇನೆಂದು ತಿಳಿಯದಲೆ ಪ

ನಾ ನಾ ಎನುತಲಿ ನಾನಾ ಯೋನಿಯೊಳು ।
ಜನಿಸಿ ಬಂದು ನೀ ಹೀನನೆನಿಸಿಕೊಂಡು ॥
ಅಜ್ಞಾನದೊಳಗೆ ಬೆರೆತು ನೀ – ।
ನಾರೆಂಬದನರಿಯಲಿಲ್ಲವು ಗುರುತು ।
ಜ್ಞಾನಿ ಪುರುಷರ ಕೇಳುವದನೆ ಮರೆತು ।
ಇನ್ನು ಸದ್ಗತಿಗೆ ಆದಿಯೊ ಹೊರತು । ನೀ ಇದನರಿತು ೧

ಆರರೊಳಗೆ ಬಿದ್ದು ಆರನು ನೋಡದೆ ।
ಆರು ಚಕ್ರದ ಮೇಲೆ ಏರಿ ಮ್ಯಾಲಕಿನ್ನು ।
ತೋರುತಿಹುದು ನೋಡು ರೂಪವಲ್ಲೀ ।
ಧಾರುಣಿಯೊಳಗೆಲ್ಲ ಅದರ ವ್ಯಾಪವು ।

ತೋರಿದಾಕ್ಷಣ ಅಳಿದ್ಹೋಯ್ತು ಪಾಪ ।
ಇದನು ಬಿಟ್ಟು ಮೂರ ನೆನಿಸಿ ಕೆಟ್ಟೀ । ಬಯಸಿ ನೊಂದೀ ೨

ನರ ತನು ದೊರೆಕೋದು ಬರಿದೇನೊ ।
ಎರಡಿನ್ನು ಸರಿಯಾಗೊ ತನಕ ।
ಬರುವದೇನೊ ಸುಮ್ಮನೆ ಮರುಳಾಗ ಬ್ಯಾಡ ॥
ಸರಿಸು ಅಸ್ಥಿರವೆಂದು ನೀ ಬೇಗದಲಿ ।
ಸಂಚಿತವೆಲ್ಲ ಕೂಡಿ ಬಂದಿತಿನ್ನೇನು ।
ಗುರು ಭವತಾರಕನ ಭಜಿಸು ನಿನ್ನ । ಮನಸಿನಿಂದಲಿ ೩

## ೧೨೮

ಅಪ್ಪಾ ಕೇಳೊ ನಿನ್ನ ಗುರುತ ನೀನೆ ತಪ್ಪಿದೆಪ್ಪ ।
ತುಪ್ಪ ಹಾಲು ಬಿಟ್ಟು ನೀ ಅಡವಿಯ
ಸೊಪ್ಪು ಮೆಲಬ್ಯಾಡಪ್ಪ ಪ

ತನುವ ನೆಚ್ಚಲಿ ಬ್ಯಾಡಾ ಹಿಂದಿನ ತನುವೇನಾದೀತಪ್ಪ ।
ವನಿತೆ ಸುತರು ಮನೆಯ ಪಶುವು ರಿಣ ಸಂಬಂಧಿಗಳಪ್ಪ ।
ಮನದೊಳು ಅನುದಿನ ನೆನೆದು ಮಾಡುವ ಕರ್ಮವು
ನಿನಗಿಲ್ಲಪ್ಪ । ಚಿನುಮಯಾತ್ಮಕ ಬ್ರಹ್ಮನು ನೀನು
ಅನುಮಾನ ಇದಕಿಲ್ಲಪ್ಪ ೧

ವೇದ ಶಾಸ್ತ್ರ ನಿಗಮಾಗಮವ ಶೋಧಿಸಿ ನೀ ನುಡಿಯಪ್ಪ ।
ಸಾಧು ಸಂತರ ಸೇವಿಸಿ ನಿತ್ಯ ಬೋಧಾಮೃತವ ಕುಡಿಯಪ್ಪ ।
ನಾದ ಬಿಂದು ಕಲಾತೀತರು ಹಾಡುವ ಪದವ್ಯಾಕಪ್ಪ ।
ಸಾಧು ಪುರುಷರು ಹೋದ ಹಾದಿಯ ಹಿಡಿದು
ಮುಕ್ತಿ ಪಡೆಯಪ್ಪ ೨

ಇಂದು ನಾಳೆ ಎಂಬುವದೊಂದು ಸಂಶಯ ನಿನಗೆ ಬ್ಯಾಡಪ್ಪ ।
ಕುಂದು ಕೊರತೆಯು ಇಲ್ಲಾತನಿಗೆ ಆನಂದವೆ ಸ್ವಾದವಪ್ಪ ।

ಬಂದು ಹೋಗಿ ನೀ ಭವಸಾಗರದೊಳು ಬಹು ಪರಿಯಿಂದಲಿ
ನೊಂದೆಪ್ಪ । ತಂದೆಯಾದ ಭವತಾರಕನ ಹೊಂದಿ
ದಿನವ ಕಳೆಯಪ್ಪ ೩

## ೧೨೯

ನಿತ್ಯ ಸುಖವಿದೂ ನೋಡು ನಿತ್ಯ ಸುಖವಿದೂ ।
ಚಿತ್ತದಲ್ಲಿ ಮಾಯ ಮೋಹ ಕತ್ತಲೆಯ ಕಾಣದಿಹುದು ಪ

ತನುವು ತಾನಲ್ಲವೆಂದು । ಮನದಿ ಉನ್ಮನಸಿನಿಂದ ।
ಬಿನುಗು ವಿಷಯಗಳನೆ ಕೊಂದು ।
ಚಿನುಮಯಾತ್ಮನಾದೆ ಎನಲು ೧

ಆಶೆಮೂಲವನ್ನು ಅಳಿದು । ಕೋಶ ಪಂಚಕಗಳ ಕಳೆದು ।
ಪಾಶವೆಂದು ತುಳಿದು ಲಕ್ಷ ಈಶನಲ್ಲಿ ಬೆರೆದ ಮೇಲೆ ೨

ತಂದೆ ಭವತಾರಕನ । ಹೊಂದಿ ಪೂರ್ಣ ಬ್ರಹ್ಮನಾಗಿ ।
ಮುಂದೆ ಮೂರು ದೇಹ ಬಿಟ್ಟು ।
ಒಂದು ಗೂಡಿ ಬ್ರಹ್ಮನಲ್ಲಿ ೩

## ೧೩೦

ಹಿಡಿ ಹಿಡಿ ಹಿಡಿ ನೀ ಬ್ರಹ್ಮಜ್ಞಾನ ।
ಬಿಡು ಬಿಡು ಬಿಡು ನೀ ಸಂಸಾರ ಧ್ಯಾನ ।
ಕಡೆಯಲ್ಲಿ ನಿನ್ನ ಕಳಹುವರಲ್ಲಿಗೆ ।
ಬಿಡದಿರು ಸದ್ಗುರುವಿನ ಧ್ಯಾನ ಪ

ಯಾತಕೆ ಕಲಿತ್ಯೋ ಬಹು ಯುಕ್ತಿಗಳ ।
ಬರಿ ಮಾತಿಲಿ ಆಗದು ನಿಜ ಮುಕ್ತಿ ।

ನೀತಿಯಿಂದ ನೀ ಅರಿತು ನೋಡಲು ।
ಸ್ವಾತ್ಮದ ಜ್ಞಾನವು ಆಗುವದಿದಕೆ ೧

ಸತಿ ಸುತರಾ ನೀ ನೋಡಿ ಹಿಗ್ಗುತಿ ।
ಮಿತಿಯಿಲ್ಲದೆ ಅವರಿಗೆ ತಗ್ಗುತಿ ।
ಗತಿಯ ಕೊಡುವ ಸಂತರು ಬಂದರೆ ।
ಮೋತಿಯ ತಿರುವಿ ವ್ಯಸನಕೆ ತಗ್ಗುತಿ ೨

ಸಾಧು ಪುರುಷರ ಸಂಗವ ಹಿಡಿಯೊ ।
ಬೋಧಾಮೃತವನು ನೀ ಕುಡಿಯೊ ।
ಆದಿಯಲಿ ಭವತಾರಕ ಭಜಕರು ।
ಹೋದ ಹಾದಿಯ ನೀ ಹಿಡಿಯೊ ೩

## ೧೩೧

ಪಾಲು ಪಾಲು ಇದು ಯಾತರ ಪಾಲು ।
ಪಾಲು ಹಂಚ್ಯಾನೊ ಶಿವ ಮೊದಲೇ ಪ

ದೇಹ ನೋಡೆಲೊ ಮೃತ್ತಿಕೆ ಪಾಲು ।
ಜೀವ ನೋಡೆಲೊ ವಾಯುವಿನ ಪಾಲು ೧

ಪುಣ್ಯ ನೋಡೆಲೊ ಸುಖದ ಪಾಲು ।
ಪಾಪ ನೋಡೆಲೊ ದುಃಖದ ಪಾಲು ೨

ಭಕ್ತಿ ನೋಡೆಲೊ ಮುಕ್ತಿಯ ಪಾಲು ।
ಭಕ್ತ ಭವತಾರಕನ ಪಾಲು ೩

## ೧೩೨

ಇದು ಏನೋ ನಿನ್ನ ಕುಲಾ ಕುಲಾ ।
ಬಿಡಲಿಲ್ಲವು ಮೂರ್ ಮಲಾ ಮಲಾ ಪ

ನರ ತನುವೆಂಬುದ ತಿಳಿದರ ನೋಡು ।
ಇದು ಒಂದು ಮನಿಯ ಹೊಲಾ ಹೊಲಾ ।
ಅರಿಯದೆ ಹದಚಿ ಬರಿದೇ ಬಿತ್ತಲು ।
ಆಗುವದೇ ಅದು ಫಲಾ ಫಲಾ ? ೧

ವೇದಶಾಸ್ತ್ರ ಆಗಮ ನೋಡಿ ।
ಏನು ಕಲಿತಿಯೊ ಭಲಾ ಭಲಾ ।
ನಾನ್ಯಾರೆಂಬುದ ಅರಿವಿಲಿ ನೋಡದೆ ।
ಬಾಯ್ಮಾಡುವಿ ನೀ ಕಲಾ ಕಲಾ ೨

ಸಾಧು ಸಂತರ ಸಂಗವ ಮಾಡೊ ।
ಭಕ್ತಿ ಮುಕ್ತಿಗೆ ಬಲಾ ಬಲಾ ।
ಆದಿ ಮುರಾರಿ ಭವತಾರಕ ಭಕ್ತರ ।
ಪಾದಾರ್ಚನೆ ಮಾಡೆಲಾ ಎಲಾ ೩

## ೧೩೩

ಮಾಡುವುದೆಲ್ಲ ವಿವಾದಕೆ ಕಾರಣ ।
ಸಾಧಿಸುವದೆ ಬ್ರಹ್ಮಾ ಪ

ಸಾಧು ಜನರ ಸುಸಮಾಧಿಯ ಬೋಧವು
ಬಾಜಾರವೇನೋ ತಮ್ಮಾ ಅ.ಪ

ಮನದೊಳು ತನದೊಳು ನಯನಗಳಿರುತಿರೆ ।
ಮನ ಬಯಸಿದದೊಂದು । ಘನ ಜ್ಯೋತಿಯ ತಾ
ತಾರದೆ ತೋರದು । ಸನ್ಮುಖದಲಿ ನಿಂದೂ ೧

ಅರಿವುದು ಕರಣದಿ ಬೆರೆವುತ ನಿನ್ನ ।
ಅರಿಯದಲಿರುತಿಹುದೂ ।
ಪರಮ ಪುರುಷರಾಚರಿಸುವ ಪರಿಯಲಿ ।
ಗುರುಪದ ಸಾರುವದೋ ೨

ತಪ್ಪದೆ ನೆಲಕೆ ಭಗುರಿಯನೆ ಎಸೆವರೆ ।
ಜಪ್ಪಿಸುವರೆ ಹೇಳಾ । ದಪ್ಪನೆ ಗುರು
ಭವತಾರಕ ತ್ರಯ ಜಗದಪ್ಪನ ನೀ ಕೇಳಾ ೩

## ೧೩೪

ಏನು ಮಾಡಿದಿ ಲಿಂಗವೇ ಭವ ।
ಭಂಗವಾಗುವದು ಅಂಗವಯ್ಯೋ ಪ

ಅಗ್ಗವಾದರು ಸಂತರು ಲಾಭವನು ।
ಮುಗ್ಗು ಜೋಳವ ಕೊಟ್ಟಿತು ।
ಗೊಗ್ಗಯ್ಯನೆಂಬರೇ ಕಡೆಯಲ್ಲಿ ನಿನಗೆ
ಅಗ್ಗಳವದಕಿಂತ ಒಂದುಂಟು ಗಂಟು ೧

ಸಕಲ ಶಾಸ್ತ್ರಗಳ ಬಲ್ಲೆ ।
ಮಿಕ್ಕ ಕಾಪುರುಷರಂತೇನು ಕಲ್ಲೇ ।
ಪ್ರಕಟಿಸುವರಾರಿಲ್ಲೆ ನಿನಗಿನ್ನು ಶಿವ
ಶಿವಾನುಭವ ನೀನ್ಯಾಕ ಒಲ್ಲೆ ಇಲ್ಲೇ ೨

ಹುಚ್ಚರೇ ಭವತಾರಕನ ಭಕ್ತರು ? ನೆಚ್ಚುವರೆ
ಸಂಸಾರವ ? ಮೆಚ್ಚುವರೆ ಶ್ರುತಿಯುತರು ಈ
ಮಾತಿಗೇ ? ಎಚ್ಚರಿಕೆ ಇನ್ನಾರ ಓಡಿಯೊ ಬೇಗ ಈಗ ೩

## ೧೩೫

ತೀರ್ಥವು ಬೇಡಾ ಕ್ಷೇತ್ರವು ಬೇಡಾ
ಜಪ ತಪ ಯೋಗವು ಬೇಡಾ ಪ

ಸ್ನಾನ ಸಂಧ್ಯಾವಂದನೆ ಪೂಜಾ ವ್ರತನೇಮಗಳು ಬೇಡಾ ।
ದಾನ ಧರ್ಮ ಪರ ಉಪಕಾರ ಶಾಸ್ತ್ರ ಪುರಾಣಗಳು ಬೇಡಾ ।
ಸ್ವಾಮಿ ಸದ್ಗುರು ಭವತಾರಕನ ಭಜಕರ
ಪಾದವ ನೀ ಬಿಡಬೇಡಾ ೧

ಸತ್ಯವು ಸಂಸಾರವು ಜಗವಿದು ಮಾಡೆಂಬರು ನೋಡೀಜನರು ।
ಮಿಥ್ಯವು ಸರ್ವವು ಜಗದೀಶನನು ತಿಳಿಯೆಂಬುವರಾ ಸಜ್ಜನರು ॥
ಜಾಗ್ರದಿ ಸ್ವಪ್ನದಿ ಬಳಲುತ ನಲಿವುತ ಚರಿಸುವರಾ ಕಾರ್ಮಿಕರು ।
ತುರ್ಯಾವಸ್ಥೆಯೋಳ್ ಮರೆದು ತಮ್ಮನು
ಇರುತಿಹರಾ ಸಾಧುವರು ೨

ವೇದಾಗಮಗಳ ಮಾತಿದು ತಿಳಿ ಕರ್ಮಾ ಧರ್ಮಾ ದೇವರು ಭಕ್ತಿ ।
ವೇದಾಂತದ ವಾಕ್ಯದ ಸಾರ ನಿವೃತ್ತಿಯ ಅರಿವುದೆ ಜೀವನ್ಮುಕ್ತಿ ॥
ಇದರ ಹಂಚಿಕೆ ಮಾಡುತ್ತಿಹುದೇ ಅದುವೆ ಶಾಸ್ತ್ರದ ಯುಕುತೀ ।
ಸದಮಲ ಬೋಧಾನಂದವೆ ಬಲಿದರೆ
ನಿಜವೇ ತಾ ಅವ್ಯಕ್ತಿ ೩

ವೇದಶಾಸ್ತ್ರ ಅನುದಿನ ಓದಿ ಸಾಧಿಸಿದೇನೊ ಅದರಲಿ ಏನಾ ।
ವಾದವನರಸುತ ಸಕಲರ ಜಯಿಸಲು ಆದಿತೆ ಲೋಕದಿ ಮಾನಾ ॥
ಸಾಧು ಸಂತರ ಸೇವಿಸದಿದ್ದರೆ ತಿಳಿಯದು ಬ್ರಹ್ಮಜ್ಞಾನಾ ।

ಆದಿ ಮೂರ್ತಿ ಭವತಾರಕ ಭಜಕರ
ಕೇಳೋ ನಿನ್ನ ಖೂನಾ ೪

ಸಂಸಾರವ ಸದ್ಧರ್ಮದಲಿ ಸಾಧು ಸಂತರಂತೆ ನೀ ಮಾಡೊ ।
ಸಂಶಯವಳಿದು ಸರ್ವವು ಶಿವನೆಂದರಿದು ಅವರೊಳು
ಕೂಡೊ । ಸತ್ತು ಹುಟ್ಟುವ ಕಟ್ಟಳೆಗಳನು ಕಿತ್ತಿ ಈಡ್ಯಾಡೊ ।
ನಿತ್ಯದಿ ಭವತಾರಕನ ಭಜಕರ ಸಂಗದಲಿ ಲೋಲ್ಯಾಡೊ ೫

ಗುರು ವರನಲಿ ಸತ್ಪುರುಷರ ಬಳಿಯಲಿ ಅರಸಬಾರದು ಇಷ್ಟಾ ।
ಕುಲ ವಯ ಕ್ರಿಯಾ ಕರ್ಮವ ತಾಪತ್ರಯಗಳನೆಣಿಸುವ ಭ್ರಷ್ಟಾ ।
ಅನುಭವ ಜ್ಞಾನದಿ ಬೋಧದಿ ಲಕ್ಷ್ಯವೀಕ್ಷಿಸುವವನೆ ಶ್ರೇಷ್ಠಾ ।
ಇನಿತನು ಬಿಟ್ಟು ನಿಂದಿಸುವವನೆ ಭವದಲಿ ಬಡುವನು ಕಷ್ಟಾ ೬

ಆರು ಶಾಸ್ತ್ರವ ಮಾಡಿದ ಕರುಣದಿ ಆ ನಿಜಗುಣ ಶಿವಯೋಗಿ ।
ಆರು ಓದಿ ತಿಳಿದವರೊಳು ನಿಂದರು ಜನ್ಮವ ನೀಗಿ ।
ಬಾರದು ಭವದೊಳು ಎಂದಿಗೆ ತಿರುಗೀ ಹೋದರು ಶಿವನೊಳಗಾಗಿ ।
ಆದಿ ಮೂರ್ತಿ ಭವತಾರಕ ಭಜಕರ ಸೂರ್ಯನ ಬಲ್ಲದೆ ಗೂಗಿ ೭

ಅವರಿಗೆ ತೊಗರಿಗೆ ದಳ ಮೂರಾದರೆ
ಶಿವಪೂಜೆಗೆ ತರಬಹುದೇ ? ।
ಜೌಡಲಕಾಯೀ ರುದ್ರಾಕ್ಷಿಯೊಳಿರೆ ಜಪ
ಮಾಲಿಗೆ ತರಬಹುದೇ ? । ತಿಳಿಯದ
ಪಾಮರ ಅರ್ಚನೆ ಮಾಡಲು ಭವ
ದೋಷವು ಅಳಿವಹುದೇ? ।
ಗುರು ಭವತಾರಕ ಭಜಕರ ಬೋಧವು
ಧರೆಯೊಳು ನರರಿಗೆ ಇಹುದೇ ? ೮

ಮಾತು ಸತ್ಯವಾದರೆ ಆತಗೆ ಶಿವನೆನು–
ತಿಹರೀ ಜಗ ಜನರೂ । ಭೂತಭವಿಷ್ಯತ್
ಹೇಳಲು ಭಕ್ತಿಯೊಳಾತಗೆ ನಡಕೊಂಬುವರೂ ।

ಭೂತಳದೊಳು ಭವತಾರಕ ಭಕ್ತರ ನೀತಿ
ಮರೆತ ಪಾಮರರೂ । ನೂತನ ಖ್ಯಾತಿಯ
ಕೊಂಡಾಡುತ ಬಹು ಪಾತಕಕೆಳಿ ಎಂಬುವರೂ ೯

ಸಿದ್ಧಿಯನೊಂದು ತೋರಲು ಪಾದದಿ ಬಿದ್ದು ಕರ ಮುಗಿಯುವರೂ ।
ಬುದ್ಧೀ ಬುದ್ಧೀ ಎನುತಲಿ ಬೇಡದೆ ಇದ್ದಲ್ಲೊಯ್ದು ಕೊಡುವರು ।
ಬದ್ಧರಲ್ಲದೆ ಈ ಭವ ಮಾಲೆಯ ಗೆದ್ದರೆ ನೋಡೀ ಜನರೂ ।
ಶುದ್ಧ ಮೂರ್ತಿ ಭವತಾರಕ ಭಜಕರು ಇದ್ದ ಸ್ಥಿತಿಯನರಿಯರು ೧೦

ಆಡುವರಾಟವ ಬಾಲರ ಮನೆಯಲಿ ಮಾಡುತ ಬ್ರಹ್ಮಾಂಡವನೂ ।
ನೋಡರು ಹಿರಿಯರು ಸಟೆಯೆಂದೇ ದಿಟ ಮಾಡುವರಿಹದಾಟವನೂ ।
ಪಾಡಲ್ಲೆನುತಲಿ ತಿಳಿದವರೊಳು ಬೇಡುವರಾ ನಾಕವನೂ ।
ರೂಢಿಯೊಳಗೆ ಭವತಾರಕ ಭಜಕರು ನೋಡರು ಪುಸಿಯೆಂದದನೂ ೧೧

ಹತ್ತಿಗೆ ಇಲ್ಲವು ಬತ್ತಿಗೆ ಇಲ್ಲವು ಮತ್ತರಬಿಗೆ ಮುಡಚಟ್ಟೂ ।
ಸತ್ಯ ಸರ್ವವು ಬ್ರಹ್ಮವು ಎಂದೇ ಚಿತ್ತದಿ ತಿಳಿವುದ ಬಿಟ್ಟೂ ।
ಮಿಥ್ಯಾಜ್ಞಾನಕೆ ಬಿದ್ದು ಹೊರಳಿ ಹೋಗುವಿರೇನೊ ಕೆಟ್ಟೂ ।
ನಿತ್ಯ ಪೂರ್ಣ ಭವತಾರಕನಂಘ್ರಿಯ ಹೊಂದದೆ ತಿಳಿಯದು ಗುಟ್ಟೂ ೧೨

ಸಂಚಿತ ಪ್ರಾರಬ್ಧ ಕ್ರಿಯಮಾಣಾ ಜನರಿಗೆ ಬರೆದನು ಬ್ರಹ್ಮಾ ।
ಮುಂಚೆ ಶಿರವನು ನೀಗಿದಾ ಬರದವರಾರೊ ಆತಗೆ ತಮ್ಮಾ ।
ಮಿಂಚಿನಂತೆ ಜೀವನಕೆ ತಗಲುವಾ ಮಾಡುವ ಕರ್ಮಾ ಧರ್ಮಾ ।
ಹಂಚಿಕೆ ತಿಳಿಯದೆ ನುಡಿವರು ಮರುಳರು ವಂಚನೆ ಬಿಡು ಇದು ವರ್ಮಾ ೧೩

ದೇವ ನೈವೇದ್ಯವು ಖೊಬ್ಬರಿ ಸಕ್ಕರಿ ಪನಿವಾರವು ನೋಡಿ ।
ಆವ ಕುಲದವನಾದರೂ ಏನು । ಇಲ್ಲದ ಹಂಚಿಕೆ ಮಾಡೀ
ಭಾವಿಸಿ ಮೃಷ್ಟಾನ್ನವನಿಟ್ಟರೂ ಕುಲಧರ್ಮದಲ್ಲಿ ನೋಡೀ ।
ಕೇವಲ ಭವತಾರಕನ ಭಜಕರ ಮುಂದೆ ರಹಸ್ಯವ ಮಾಡೀ ೧೪

# ೧೩೬

ಗಣಪತಿ ಶಾರದೆಗೆರಗಿದೆ ಇಂದೇ । ಇಬ್ಬರ ಹೃದಯದಿ
ಕರುಣದಿ ಬಂದೆ । ನುಡಿಸಿದರ್ವಚನವ ಒಂದೊಂದು ತಂದೆ ।
ಕೇಳಿರಿ ಜನರೆಲ್ಲಾ ಕಿವಿಗೊಟ್ಟು ಬಂದೆ ೧

ನರನಾಗಿ ಬಂದು ನೀ ಮಾಡಿದಿ ಏನಾ । ತಿಳಿಯದೆ
ಬೊಗಳುವಿಯಾತಕೆ ಶ್ವಾನಾ । ಎಳ್ಳಷ್ಟು ಇಲ್ಲದೆ ಹೋಯಿತು
ಜ್ಞಾನಾ । ಇನ್ನಾದರೂ ಮಾಡೊ ಸದ್ಗುರುವಿನ ಧ್ಯಾನಾ ೨

ಮಾಡಲಿಲ್ಲಾ ಪುಟ್ಟಿ ನೀ ದಾನ ಧರ್ಮಾ । ಮಾಡಿದಿ ತಿಳಿಯದೆ
ನೀ ಕೆಟ್ಟ ಕರ್ಮಾ । ಆಡಿದಿ ನೀ ಸಾಧುಸಂತರಿಗೊರ್ಮಾ ।
ನೋಡಿಕೊ ನಿನಗಿಲ್ಲದಾಯ್ತು ಶರ್ಮಾ ೩

ಮಾಡಿದ ಬದುಕನು ಸುಮ್ಮನೆ ಕಳೆದೆ । ಮಾಡುವಾಗ
ಬಹು ನಿಜವೆಂದು ತಿಳಿದೆ । ನೋಡದೆ ಪೂರ್ವದ
ಸುಕೃತವನಳಿದೆ । ರೂಢಿಯೊಳಗೆ ಪಾಮರನಾಗಿ ಬೆಳೆದೆ ೪

ಮಾಡುವ ಕರ್ಮಕೆ ಮನವೇ ಸಾಕ್ಷೀ । ಮಾಡುವಿ ಜಪ
ನಿನಗ್ಯಾಕೀ ರುದ್ರಾಕ್ಷೀ । ಮಾಡಿದನೇ ಗುರು ಹೀಗೆಂದು
ದೀಕ್ಷಾ । ಆಡಲ್ಯಾತಕೊ ನಾಳೆ ಆದೀತೋ ಶಿಕ್ಷಾ ೫

ಹುಣಿಶಿ ಹಣ್ಣ ಹಚ್ಚಿ ಬೆಳಗಿದಿ ಗಿಂಡೀ । ಎಣಕೀ ಶರಣ ಮಾಡಿ
ಅಲ್ಲೇನು ಕಂಡೀ । ಸಂತರ ನಿಂದಾ ಬಲು ಮಾಡಿ ಉಂಡೀ ।
ಅಂತರಂಗದಿ ಇರು ಛೇ ಹುಚ್ಚ ಮುಂಡೀ ೬

ಹಗಲೂ ಇರುಳೂ ಎದ್ದುಂಬುವಿ ಕೂಳೂ । ಕೂಳಿಗೆ ಆದಿ ನೀ
ಒಬ್ಬರ ಆಳೂ । ಬಲು ಮಂದಿ ಮನೆಯನು ಮಾಡಿದಿ ಹಾಳೂ ।
ಏನು ಪುಣ್ಯ ಬಂದದ ಅದನಾರ ಹೇಳು ೭

ಹಗಲೂ ಇರುಳೂ ಎದ್ದು ಮಾಡಿದಿ ಬದಕಾ । ಮಾಡುತ
ಮಾಡುತ ಆದೆಲ್ಲೊ ಮುದುಕಾ । ಸಾಯುವ ತನಕಾ
ಬಿಡಲಿಲ್ಲೊ ಚುದಕಾ । ಸತ್ತಮೇಲೆ ನೀ ಆಗುವಿ ಶುನಕಾ ೮

ಏನೇನಿಲ್ಲದೆ ಹೋಯಿತು ಬುದ್ಧೀ । ಶಾಸ್ತ್ರ ಪುರಾಣದಿ ಕೇಳಿಲ್ಲ
ಸುದ್ದೀ । ಇರುಳ ಕಂಡ ಕುಣಿ ಹಗಲ್ಯಾಕೆ ಬಿದ್ದೀ ।
ಮರುಳಾದ್ಯಾ ಯಮ ನಾಳೆ ಕೊಂದಾನೊ ಗುದ್ದೀ ೯

ಸಂಸಾರ ನಂಬಿದಿ ನಿಜದಲಿ ಹ್ಯಾಂಗ । ಸದ್ಗುರು ಪಾದವ
ನಂಬೋ ನೀ ಹಾಂಗ ॥ ಸಂಶಯಾ ಅದಕಂಜಿ ಬಿಟ್ಟರೆ ಈಗ ।
ಕಾಂಶಿಲಿ ಬಡಿದಾರು ತಿಳಿದೀತು ಆಗ ೧೦

ಬೆಳಕಿನೊಳಗ ಒಂದು ನೋಡುವ ಕಣ್ಣು । ಕತ್ತಲಿಯೊಳ
ಗೊಂದು ಕಾಂಬುವ ಕಣ್ಣು । ಕತ್ತಲಿ ಬೆಳಕನ್ನು ನೋಡುವ
ಕಣ್ಣು । ಅದ ಬಿಟ್ಟು ಏನ ನೋಡುತಿ ಮಣ್ಣು ೧೧

ಓದುವಿ ಅನುದಿನ ಶಾಸ್ತ್ರ ಪುರಾಣಾ । ಅದರೊಳಗಿನ ಮಾತ
ತಿಳಿಯದೆ ಕೋಣಾ ॥ ಅರ್ಥವ ಹೇಳುವಿ ಮಂದಿಗೆ ಜಾಣಾ ।
ರುಪ್ವಿಯ ಬೇಡಲು ಹೋಯಿತು ಪ್ರಾಣಾ ೧೨

ಕಂಡರೆ ನೋಡುವಿ ಹೆರವರ ಹೆಣ್ಣು । ಚೆಲುವೆಂದೂ ಇಟ್ಟೆಲ್ಲೊ
ಆಕೆಗೆ ಕಣ್ಣೂ । ಆದರೆ ಹತ್ತ್ಯಾವೊ ಆಕೆಯ ಹುಣ್ಣು ।
ಕಡೆಯಲಿ ಬಿದ್ದಿತು ಬಾಯಲಿ ಮಣ್ಣು ೧೩

ನಿತ್ಯ ತೆಗೆದುಕೊಳ್ಳುವಿ ದೇವರ ತೀರ್ಥಾ । ಮತ್ತಿನ್ನು ಬಿಡಲಿಲ್ಲ
ಮನದ ಸ್ವಾರ್ಥಾ ॥ ಕತ್ತೆಯ ಹಾಂಗ ನೀನೊದರುವಿ ವ್ಯರ್ಥಾ ।
ಎಂದೆಂದಿಗೂ ದೊರೆಯದು ಆ ಪರಮಾರ್ಥಾ ೧೪

ತನುವು ನಾನೆಂಬುವಿ ತನುವಿದು ತೊಗಲು । ತನುವಿಗೆ ಅವ
ನೋಡು ಒಂಬತ್ತು ಹುಗಲು । ಚಿಂತಿ ಮಾಡುವದ್ಯಾಕೊ
ಹಗಲೂ ಇರುಳೂ । ನಿನ್ನಾಧೀನವು ಹೀಗೆಂದು ಇರಲು ೧೫

ದೂರ ಹೋಗದಿನ್ನು ಆಗದು ಕಾಶೀ । ದೂರ ಮಾಡಿ
ಕಳಿ ನೀನು ಮೂರಾಶಿ । ತೀರದು ಶಿವಯೋಗ ಪುಣ್ಯ ರಾಶಿ ।
ಸೇರುವಿ ಸಾಯುಜ್ಯದಲಿ ಮಿರಾಶಿ ೧೬

ತಂದೆಗೆ ಬಿಡದಿನ್ನು ಮಗನಲ್ಲಿ ಮಾಯಾ । ಮಗಗಿನ್ನು ಹತ್ತಿದೆ
ಸ್ತ್ರೀಯರ ಮಾಯಾ । ಸ್ತ್ರೀಯರಿಗೆ ಹತ್ತಿದೆ ದುಡ್ಡಿನ ಮಾಯಾ ।
ದುಡ್ಡಿನಂತೆ ಮಾಡೊ ಮನಕೆ ನಿರ್ಮಾಯಾ ೧೭

ಮೀಶಿಯ ಹುರಿ ಮಾಡಿ ಮೇಲಕೆ ನೋಡಿ । ಕಾಲಾಗ ಸಿಕ್ಕವು
ಮೋಹದ ಬೇಡಿ ॥ ಮಾಡಬಾರದಂಥ ಕೆಲ್ಸವ ಮಾಡಿ ।
ಸಿಕ್ಕಿದೆಲ್ಲೊ ಗಾಂಡೂ ಇನ್ನೆತ್ತ ಓಡೀ ೧೮

ಸಂತರ ಸಂಗವ ಮಾಡಲು ಒಲ್ಲೆ । ಭ್ರಾಂತಿಯ
ಬಲಿಯೊಳು ಸಿಲ್ಕಿದೆ ಇಲ್ಲೆ ॥ ಶಾಂತಿಯ ತಿಳಿಯದೆ
ಕ್ರೂರವ ಬಲ್ಲಿ । ಕಂತುಹರನ ಪಾದ ದೊರೆವುದಿನ್ನೆಲ್ಲಿ ೧೯

ಕಾಮನ ಸುಡುವುದು ನೋಡು ಹೀಂಗಲ್ಲಾ । ಕಾಮನ
ಶಿವ ಸುಟ್ಟರವ ಸಾಯಲಿಲ್ಲ ॥ ಕಾಮನು ಸುಡುವ ಮೂರು
ಲೋಕವನೆಲ್ಲ । ಕಾಮರಹಿತ ಭವತಾರಕ ಬಲ್ಲ ೨೦

ಕಟ್ಟಿದಿ ಮನೆಯನು ನೀ ಬಲು ಛಂದಾ । ಬಿಟ್ಟು ಹೋಗುತಿ
ಇದದಾವಂದಾ ॥ ತೊಟ್ಟಿಲೊಳಗೆ ಇದ್ದ ಹೇಳಿದ ಕಂದಾ ।
ಎಷ್ಟಂತ ಹೇಳಲಿ ನೀ ಮತಿಮಂದಾ ೨೧

ಯಾತಕಗಳಿಸಿದ್ಯೊ ಹೊನ್ನಿನ ಹೂಜಿ । ಪಾತಕ ಬರುವದು
ಬಿಡಬ್ಯಾಡ ವಾಜಿ । ನೀತಿಯಿಂದಲಿ ಮಾಡು ನೀ ಗುರು ಪೂಜಿ ।
ಯಾತನ ಬಡಿಸುವ ನಾಳಿನ ಪಾಜಿ ೨೨

ಒದರುವಿ ಯಾತಕೆ ಬಾಯನು ಕಿಸ್ತು । ಬೆದರ ಬೇಡಾದುದಕೆನ್ನು
ಅಸ್ತು ॥ ಚತುರ ತನದಲಿ ಸಾಧಿಸು ನೀ ವಸ್ತು ।
ಆದರಿಂದಲಾಗುವದು ಆ ಮನ ಸ್ವಸ್ತು ೨೩

ಯಾತಕೆ ಆಡುವಿ ಸುಮ್ಮನೆ ಹೋಳಿ । ಪಾತಕ ಬರುವದು
ತಿಳಿಯದೆ ಕೋಳಿ ॥ ನೀತಿಯಿಂದಲಿ ತತ್ತ್ವ ಮಾತನು ಕೇಳಿ ।
ಘಾತಕ ಯಮ ನಾಳೆ ಬರುವನು ದಾಳಿ ೨೪

ಮಾಡುವಿ ಸುಮ್ಮನೆ ಈ ಭವ ಬಿಟ್ಟಿ । ಮಾಡದೆ ದಾನ
ಧರ್ಮವ ಕೆಟ್ಟೀ ॥ ಮಾಡಿದುದೆಲ್ಲಾ ನೀ ಜೋಕಿಲಿ ಇಟ್ಟಿ ।
ಮಾಡಲು ಬಾಧೆಯ ನೀ ಬಾಯ ಬಿಟ್ಟಿ ೨೫

ನೆನೆದರೆ ದೃಢದಲಿ ರಾಮ ನಾಮ । ತನುವಿದು ಮುಂದೆ
ಬಾರದು ನೇಮ ॥ ಮನದೊಳು ಪುಟ್ಟಿತು ತಾನೆ ನಿಷ್ಕಾಮ ।
ಘನಸುಖ ತೋರಿತು ಅದು ಸಾರ್ವಭೌಮ ೨೬

ಹುಟ್ಟಿ ಹುಟ್ಟಿ ನೀ ಯಾತಕೆ ಸತ್ತೀ । ಹುಟ್ಟುತ ಸಾವುತ ನಿತ್ಯದಿ
ಅತ್ತೀ ॥ ಹುಟ್ಟು ಸಾವನ್ನು ಕಳೆಯಲೊ ಕತ್ತೀ ।
ಕೆಟ್ಟೆಯೊ ಇನ್ನಾರ ಬೆಳಿ ಧರ್ಮಾ ಬಿತ್ತೀ ೨೭

ಶಾಸ್ತ್ರ ಪುರಾಣವ ಓದುವಿ ಬರಿದೇ । ಉತ್ತಮ ಸ್ತ್ರೀಯರ
ಕಂಡು ನೀ ಕರೆದೆ ॥ ನಿನ್ನೊಳು ತಿಳಿದು ನೀ ನೋಡುದು
ಮರೆದೇ । ಸಾಧು ಸಂತರುಗಳ ಸೇವೆಗೆ ಮರೆದೆ ೨೮

ಪಡಿ ಜೋಳಕೊಬ್ಬರ ಅಡಿಗಳ ಹಿಡಿವೆ । ಕೊಡುವದಿಲ್ಲೆಂದರೆ
ದವಡಿಯ ಕಡಿವೆ ॥ ಕೊಟ್ಟರೆ ಮನದೊಳು ಸಂತೋಷ
ಪಡುವೆ । ಕೆಟ್ಟ ಮಾರ್ಗದಿಂದ ಕಡೆ ತನಕಾ ನಡಿವೆ ೨೯

ಭವತಾರಕನೆಂಬುದಾತನ ಬಿರುದು । ಭವ ಪರಿಹರಿಸುವದಿದು
ಏನು ಅರಿದು ॥ ಭವದೊಳು ಬಿಟ್ಟರು ನಾಮವ ಮರೆದು ।
ಭವಕಿನ್ನು ಕರಸ್ಯಾರೊ ಆತನ ಬರದು ೩೦

ಮಾಡಿದೆ ಏನು ಬದುಕನು ಹೇಳು । ಮಾಡಿದುದೆಲ್ಲಾ ತಿಂದೆಲ್ಲಾ ಕೂಳು ॥
ಕೂಳಿಗಾಗಿ ಆದಿ ಒಬ್ಬರ ಆಳು । ನೋಡಿ ಏನು ಸದ್ಗತಿಯ ಹೇಳು ೩೧

ಮನದೊಳು ಗಳಿಸಿದಿ ಕೆಂಚೀ ಹೊನ್ನು । ಗಳಿಸಿದವರು ಏನು
ಒಯ್ದಾರು ಇನ್ನು ॥ ಬಿಟ್ಟು ಹೋದರು ಹ್ಯಾಂಗ ಬಲ್ಲೆಲ್ಲಾ ನೀನು ।
ನಿಷ್ಠೆಯಿಂದಲಿ ಒಮ್ಮೆ ಹರಗುರು ಎನ್ನು ೩೨

ಮಾಡಲಿಲ್ಲ ಒಂದು ನರನಾಗಿ ಯೋಗಾ । ಮಾಡುವಿ
ಸುಖವೆಂದು ಸ್ತ್ರೀಯರ ಭೋಗಾ । ಆಡಲ್ಯಾಕೆ ಆಯುಷ್ಯ
ಹಾರಿತು ಬೇಗಾ । ನೋಡಿಕೊಳ್ಳೊ ಇನ್ನು ತಿಳಿದೀತು ಈಗಾ ೩೩

ಮಾಡುವಿ ಬಹು ಪರಿ ಸಂಸಾರ ಯುಕ್ತಿ । ಮಾಡಲು ಒಲ್ಲ್ಯೋ
ಶ್ರೀ ಗುರು ಭಕ್ತಿ ॥ ಹೋಯಿತೊ ದೇಹದೊಳ್ ನಿನ್ನ ಶಕ್ತಿ ।
ಸಾಧಿಸಲರಿಯೊ ನೀ ಜೀವನ್ಮುಕ್ತಿ ೩೪

ಪಾಡುವಿ ಯಾತಕೆ ಅನುದಿನ ವೇದಾ । ಸಾಧಿಸಿ ತಿಳಿಯದೆ
ಜೀವಶಿವ ಭೇದಾ ॥ ಕಾದಾಡಿ ಕೊಂಬುವದು ಸುಮ್ಮನೆ ವಾದಾ ।
ಬ್ಯಾಡಿನ್ನು ಶೋಧಿಸು ನಿನ್ನೊಳು ಬೋಧಾ ೩೫

ತನು ಮನ ಧನವದಾರೆನ್ನದು ಎಂಬೆ । ಹೋಗುತ ವೈಲಿಲ್ಲಾ
ನೀ ಮದುರಿಂಬೆ ॥ ತನುವಿನಿಂದಲಿ ಬಹು ಕರ್ಮವನುಂಬೆ ।
ಮನದಿಂದ ಈ ಭವ ಬೀಜವ ಕೊಂಬೆ ೩೬

ಗುರು ಭವತಾರಕನಂಘ್ರಿಯ ಭಜಿಸು । ಅರಿವಿಲಿ ಮಾಯಾ
ಮರವನು ತ್ಯಜಿಸು ॥ ಧ್ಯಾನ ಮುದ್ರೆಯೋಳ್ ಮನವನು ನಿಲಿಸು ।
ಜಗವಿದು ನಿಜವೇ ನೋಡೆಲು ಕನಸು ೩೭

ರೂಪದೊಳಗಿಲ್ಲಾ ಗುಣವೊಂದು ತೃಣವು । ಗುಣದೊಳಗಿಲ್ಲವು
ರೂಪದ ಅಣುವು ॥ ರೂಪ ನಾಮಕ್ರಿಯಾ ಆದೀತು ಹೆಣವು ।
ಆ ಪರಬ್ರಹ್ಮನೆ ತಿಳಿಯಿನ್ನು ಪ್ರಣವು ೩೮

ಗುರು ಭವತಾರಕ ದೇವನ ಪಾದ । ಅರಿತು ಪೂಜಿಸಿದವ
ಪರಶಿವನಾದ ॥ ಅನುಭವಿ ಬಲ್ಲನು ಆ ಸುಖ ಸ್ವಾದ ।
ತನ್ನೊಳು ಆಲಿಸುತಲಿ ನಿಂತ ನಾದ ೩೯

## ೧೩೭

ಚಿಂತಿ ಮಾಡಬೇಡ ಭ್ರಾಂತ ಮನುಜಾ । ನಿ– ।
ಶ್ಚಿಂತಿಯ ಪಥ ಕೇಳಿನ್ನು ಪ

ಅಂತರಂಗದಲಿ ಶಾಂತಿಯ ತಾಳಿ ।
ಅಂತರಾತ್ಮನು ನೀನೆನ್ನು ।
ಸತಿಸುತರಿಗೆ ಗತಿಯೇ ನಂಬಿದೆ ।
ಗತಿಯಿದ್ದದ್ದಾಗುವದೆನ್ನು ।
ಅತಿಶಯ ದುಷ್ಕರ್ಮಿಗಳು ನಿಂದಿಸೆ ।
ಕೃತ ಪೂರ್ವದ ಫಲವೆನ್ನು ॥
ಸತತ ದ್ರವ್ಯವ ಬಯಸಿ ಗಳಿಸಿದೆ ।
ಗತಿಯಾಗುವದದು ಏನು ? ।
ಪತಿತ ಪಾವನ ರಘೂನಾಥನ ।
ನಾಮವ ಗುಪಿತದಿ ಜಪಿಸೊ ನೀನು ೧

ಅಣ್ಣ ತಮ್ಮ ತಾಯಿ ತಂದೆ ಬಳಗದ ।
ಕಣ್ಣು ಮುಂದಿರಬೇಡಿನ್ನು ।
ಬಣ್ಣ ಬಣ್ಣ ಮಾತುಗಳಾಡಲು ।
ಪುಣ್ಯವು ಅದರಲಿ ಏನು ? ॥
ಹೆಣ್ಣು ನೋಡಿ ಮನದಲಿ ಹಿಗ್ಗುವಿ ।
ಮಣ್ಣು ಕೂಡಿತದು ಏನು ? ।
ಹಣ್ಣು ಹಾಲು ಮೃಷ್ಟಾನ್ನಕಿಂತ ನೀ ।
ಉಣ್ಣು ಬ್ರಹ್ಮಾನಂದಾಮೃತವನ್ನು ೨

ಅಂಶವುಳಿಯಬೇಕೆಂದರೆ ಈ ಜಗ– ।
ದಂಶವು ನನ್ನದು ಎನ್ನು ।
ಮಾಂಸಪಿಂಡ ಮುಖಾಂಡ ದಹನವು
ಹುತಾಶನಗಾಹುತಿ ಎನ್ನು । ಕಂಸನ ತಂಗಿಯ

ಮಗ ಪಾರ್ಥಗೆ ಹೇಳಿದ । ಸಂಶಯವ್ಯಾತಕೆ ಇನ್ನು ।
ಹಂಸ ಪರಮರ ಐಕ್ಯವ ತಿಳಿಯದೆ ।
ಹಂಸೋಹಂ ಎಂದರದೇನು ? ೩

ನೋಡಿದುದೆಲ್ಲಾ ಪುಸಿಯೆಂದು ।
ಮಾಡೋ ನಿಶ್ಚಯವಿನ್ನು ।
ಆಡಬೇಡ ಅನೃತ ವಚನವನು ।
ಆಡುತಲಿರು ಸತ್ಯವನು ।
ಕೂಡಬೇಡ ಕಾಮಂದಿಯ ಸಂಗ ।
ಕೇಡು ತಪ್ಪದದಿನ್ನು ।
ರೂಢಿಯೊಳಗೆ ನರನಾಗಿ ಪುಟ್ಟಿ ।
ಮಾಡುತ ನಡಿ ಧರ್ಮವನು ೪

ವೇದಾಂತದ ಮಹಾ ಶ್ರವಣದ ವಾಕ್ಯವ ।
ಸಾಧು ಮುಖದಿ ಕೇಳಿನ್ನು ।
ಭೇದನಾದವ ನೀಗಿ ಕಳೆದು ನಿಜ ।
ಬೋಧದೊಳಗೆ ನಿಲ್ಲಿನ್ನು ॥
ನಾದ ಬಿಂದು ಕಳಾತೀತಗೆ ಹಾಡುವ ಪದವನು ।
ಶೋಧಿಸುವದು ಇನ್ನೇನು ? ।
ಆದಿ ಮೂರ್ತಿ ಭವತಾರಕ ದಯೆ ಪಡಿ ।
ನಾದವನಾಲಿಸು ನೀನು ೫

## ೧೩೮

ಹಿಡಿ ಹಿಡಿ ಹಿಡಿ ಭಕ್ತಿ । ಹಿಡಿ ಭಕ್ತಿ ।
ಪಡಿ ಪಡಿ ಪಡಿ ಜೀವನ್ಮುಕ್ತಿ ಪ

ಗುರುವರನು ತಾ ಪರಶಿವನೆಂದು ।
ಅರಿದು ಪೂಜಿಸು ಮನದೊಳಗಿಂದು ೧

ವ್ರತನೇಮಗಳೊಳು ಫಲವಿಲ್ಲಾ ।
ಸದ್ಗತಿ ನಿನಗದರೊಳಗಾಗುವದಿಲ್ಲ ೨

ಭವತಾರಕನ ಭಜಕರ ನೋಡು ।
ಕಂಡರೆ ಕರೆದರ್ಚನೆಯನು ಮಾಡು ೩

## ೧೩೬

ತನ್ನ ತಾ ತಿಳಿದು । ಧನ್ಯನಾಗೊ ಬಗೆ ಇದು ।
ಖಿನ್ನವಳಿದು ಪೂರ್ಣ ಬ್ರಹ್ಮವನ್ನು ಕಾಂಬುದು ಪ

ತತ್ತ್ವ ಶಾಸ್ತ್ರವನ್ನು ಓದಿ । ಭಕ್ತಿಯಿಂದ ಮನನ ಮಾಡಿ ।
ಯುಕ್ತಿ ಭಾವವೆಲ್ಲ ಕಳೆದು ಮುಕ್ತನಾಗುತಾ ॥
ನಿತ್ಯವಾದ ವಸ್ತು ತಾನೆ । ಮತ್ತೆ ಬೇರೆ ಇಲ್ಲವೆಂದು ।
ಸತ್ಯ ಶರಣರಡಿಯ ಪಿಡಿದು ಚಿತ್ತದಲ್ಲಿ ನಲಿವುದು ೧

ಆಶೆ ಮೂರರಲ್ಲಿ ಇನ್ನು । ಬೇಸರಾಗಿ ವಿಷಯದ ।
ವಾಸನೆಗಳ ಜರಿದು ಪಾಶ ಕ್ಲೇಶವಳಿಯುತ ॥
ನಾಸಿಕಾಗ್ರದಲ್ಲಿ ಮನವ । ಸೂಸದಂತೆ ನಿಲಿಸಿ ಜಗ– ।
ದೀಶನಾಟವನ್ನು ನೋಡಿ ನಾದ ಘೋಷ ಕೇಳ್ವುದು ೨

ಹಿಂದೆ ಒಂದು ನೆನೆಸದಿನ್ನು । ಮುಂದೆ ಉಳಿದ ಕರ್ಮವನ್ನು ।
ಬಂದುದೆಲ್ಲ ಉಂಡು ಗೆದ್ದು ಹರುಷದಿಂದಲಿ ॥
ತಂದೆ ಭವತಾರಕನ । ಹೊಂದಿ ಸದಾನಂದದಿಂದ ।
ಮುಂದೆ ಭವಕೆ ಬೀಳದಂತೆ ಛಂದದಿಂದ ನಲಿವುದು ೩

## ೧೪೦

ಬಂದು ನೊಂದೆನು ನಾನು । ಮುಂದೆ ರಕ್ಷಿಸು ನೀನು ।
ಎಂದೆಂದೂ ತಾರದಂತೆ ।
ತಂದೆ ಸದ್ಗುರು ನಿನ್ನ ಹೊಂದಿದೆನು ।
ಪರಮಾನಂದವನು ಪಾಲಿಸೀಗ ಬೇಗ ಪ

ಎನ್ನವಗುಣದೋಷಗಳ । ಅರಸುವದ್ಯಾಕೆ ।
ನಿನ್ನ ಪಾದವ ನಂಬಿದೆ ॥
ಚಿನ್ನಕ್ಷತ್ರಿದ ಟೆಂಕ ಭಿನ್ನವಾಗುವದುಂಟೆ ।
ಇನ್ನು ಬ್ಯಾರೆನ್ನಬಹುದೆ ಇಹುದೆ ೧

ಉರಿಯ ಮುಟ್ಟಿ ಕಾಷ್ಠವನು । ಮರಳಿ ತರಬಹುದೇ ।
ಪರಮ ತತ್ತ್ವವ ತಿಳಿಯದೆ ॥
ಹರಿವ ಶರಧಿಗೆ ಜಲವು ಹಲವು ಕೂಡಿದರದರ ।
ವಿವರದಲಿ ನೋಡಲರಿದೇ ಜರಿದೆ ೨

ಚಿತ್ತ ಕಮಲವ ನಿನ್ನ ಪಾದಕರ್ಪಿಸಿದೆನೋ ।
ಸತ್ಯದಲಿ ಮತ್ತೆ ಪಾತಕವು ಯಾರಿಗೆ ।
ಕರ್ತೃ ಭವತಾರಕನು ಕೊಟ್ಟ ಕುದುರೆಯ ಮೇಲೆ ।
ಎಷ್ಟೊಂದು ಹೇರಲಿಂದು ತಂದು ೩

## ೧೪೧

ಬಾರೋ ಬೇಗನೆ ರಾಮಾ ನೀ ಬಾ ಪ

ಏಕೆ ಪಂತರ ಮನೆಯೊಳು ನೀರ ತಂದೆ ।
ಲೋಕದೊಳಗೆ ನಿನ್ನ ಮಹಿಮೆಗೆ ಕುಂದೇ ೧

ಅಂದು ಕಬೀರನ ಸತಿಗಾಗಿ ಹಿಂದೆ ।
ಛಂದಾಗಿ ಕೊತವಾಲನಾಗಿ ಬಂದೆ ೨

ಗುರು ಭವತಾರಕ ಎನ್ನ ತಂದೆ ।
ಆರು ಮುನಿದರೂ ಏನಿಲ್ಲ ಮುಂದೆ ೩

## ೧೪೨

ತಿಳಿದರೆ ನೀ ಶಿವ ದಿಟಾ ದಿಟಾ ।
ತಿಳಿಯದೆ ಕಳೆದ್ಯೋ ಘಟಾ ಘಟಾ ಪ

ವೇದ ಶಾಸ್ತ್ರಾಗಮವನು ಓದಿ ।
ಏನು ಕಲಿತಿಯೋ ಹಟಾ ಛಲಾ ।
ಸಾಧು ಸಂತರು ಮನೆಗೆ ಬಂದರೆ ।
ಬಯ್ಯುವಿ ಆ ಕ್ಷಣ ಥಡಾ ಥಡಾ ೧

ದಾನ ಧರ್ಮ ಪರ ಉಪಕಾರಿಲ್ಲದೆ ।
ಯಾತಕ ಈ ಮನಿ ಮಠಾ ಮಠಾ ।
ಸ್ವಾನುಭವ ಸುಜ್ಞಾನವಿಲ್ಲದೆ ।
ಮೌನವ ಧರಿಸಿದ್ಯೋ ಶಠಾ ಶಠಾ ೨

ಶ್ರೀ ಭವತಾರಕನಂಘ್ರಿಯ ಪೂಜಿಸು ।
ಈ ಭವ ಚಿನ್ನದ ಪುಟಾ ಪುಟಾ ॥
ಹರ ಗುರುನಾಥನ ಸ್ಮರಣೆಯ ಮಾಡದೆ
ಒದರುವಿ ಸುಮ್ಮನೆ ವಟಾ ವಟಾ ೩

## ೧೪೩

ಇಲ್ಲವಾಯಿತು ಸಾಧು ಜನಕೆ ಎಲ್ಲಾ ।
ಇಲ್ಲವೆಂಬುದವರ ಚಿತ್ತದೊಳಗಿಲ್ಲಾ ಪ

ತನುವಿಲ್ಲ ಮನವಿಲ್ಲ, ಮನದೊಳಗೆ ನೆನವಿಲ್ಲ ।
ಬಿನುಗಿನ ಸುಖವ ಬಯಸಲಿಲ್ಲ ।
ಅನುಮಾನ ಎಂಬುವದಲ್ಲಿ ಜನಿಸುವದಿಲ್ಲ ।
ಚಿನುಮಯಾತ್ಮಕರಾಗಿ ಚರಿಸುತಿಹರೆಲ್ಲ ೧

ವ್ರತನೇಮಗಳಿಲ್ಲ ಪ್ರತಿಮೆ ಪೂಜೆಗಳಿಲ್ಲ ।
ಸತಿ ಸುತರೆಲ್ಲ ಹಿತವರೆಂದೆನಿಸಲಿಲ್ಲ ।
ಪತಿತಪಾವನ ರಘುನಾಥ ನೀನನ್ನದಲೆ ।
ಮಿತಿಯ ಆಯುಷ್ಯ ಕಳೆದರಲ್ಲ ೨

ಪಾಪ ಪುಣ್ಯಗಳಿಲ್ಲ ಕೋಪತಾಪಗಳಿಲ್ಲ ।
ರೂಪ ಕುರೂಪಗಳ ನೋಡಲಿಲ್ಲ ।
ಆ ಪರಬ್ರಹ್ಮ ಮೂರ್ತಿ ಭವತಾರಕನ ।
ವ್ಯಾಪ ಕಾಣದೆ ಅನ್ಯ ಕಾಣಲಿಲ್ಲ ೩

## ೧೪೪

ಇಂದು ಶಿವಯೋಗಾ ಶಿವಯೋಗಾ ।
ಮುಂದಿಲ್ಲವು ತನು ಭೋಗಾ ಪ

ಕೋಟಿ ತೀರ್ಥದಲಿ ಮುಣುಗಿ ಬಂದು ।
ಕೀಟಕ ಜನರರಿಯರು ಎಂದೆಂದೂ ೧

ಎಲ್ಲಿಹುದರಿದರೆ ಗೋಕರ್ಣ ।
ಇಲ್ಲದಾಯ್ತು ದೇಹದ ವರ್ಣ ೨

ಭವತಾರಕನ ಭಜಕನು ಬಲ್ಲಾ ।
ಭವದೊಳು ಇದ್ದರೂ ಭಯ ಅವಗಿಲ್ಲಾ ೩

## ೧೪೫

ಆ ಪರ ಪುರುಷರಾಚರಣೆ ಬೇರೆ ।
ಈ ಪಾಪಿ ಜನಕೆ ಮತ್ತೊಂದು ಬಗೆದೋರೆ ಪ

ಚಿಂತೆಯೆಂಬುದು ಚಿತ್ತದಲ್ಲಿಲ್ಲಾ ।
ಅಂತರಂಗದಿ ಆನಂದದಲಿಹರೂ ।
ಸಂತ ಸಮೂಹದಿ ಶಾಂತದಿ ಒಡಗೂಡಿ ।
ಕಂತುಹರನ ಯೋಗ ಮಾಡುತಿಹರೂ ೧

ಸತ್ತು ಹುಟ್ಟುವರಲ್ಲ ಮತ್ತೆ ಕಾಡುವರಲ್ಲ ।
ಸತ್ಯವಲ್ಲದೆ ಮಿಥ್ಯವಾಡಲಿಲ್ಲ ।
ಮತ್ತೆ ಮಾಯಾ ಮೋಹ ಕತ್ತಲಿ ಕಳೆದು ।
ನಿತ್ಯ ವಸ್ತುವಿನೊಳು ಪೂರ್ಣರಾಗಿಹ ೨

ಬೇಕೆಂದು ಬೇಡರು ಬೇಕೆಂದು ಮಾಡರು ।
ಕಾಡು ಮಂದಿಗಳೊಡನೆ ಮಾತನಾಡರು ।
ಲೋಕನಾಯಕ ಭವತಾರಕನ ಚರಣವ ।
ಏಕಾಂತದಲಿ ಪೂಜಿಸುತಿಹರು ೩

## ೧೪೬

ಇನ್ನೇನು ಕೇಳುತಿ ಛೀ ಹುಚ್ಚ ಮರುಳೆ ಪ

ಆರನು ಕಟ್ಟಿನ್ನು ಆರನು ಬಿಟ್ಟಿನ್ನು ।
ಆರಕ ಆರಿಟ್ಟು ಆರಳಿದು ।
ಆರು ಚಕ್ರವ ಮೀರಿರುವ ।
ಮೂರು ಗುಣಕೆ ದೂರಿರುವವನ ೧

ವೇದಾಗಮವನು ಶೋಧಿಸಿ ಅನುದಿನ ।
ಸಾಧು ಪುರುಷರ ಸಂಗದಲಿ ।
ಭೇದವ ಬಿಟ್ಟು ನಾದವನಾಲಿಸಿ ।
ಬೋಧದೊಳಗೆ ಲಯಗೊಂಡ ಮಹಾತ್ಮನ ೨

'ತತ್ತ್ವಮಸಿ' ಮಹಾವಾಕ್ಯದ ವಿವರವ ।
ಸತ್ಯದಿ ತಿಳಿ ನೀ ಬೋಧದಲಿ ।
ಕರ್ತೃ ಸದ್ಗುರು ಭವತಾರಕನಂಘ್ರಿಯ ।
ನಿತ್ಯ ಪೂಜಿಸಿ ಶಾಂತಿ ಪೊಂದಿದವನ ೩

## ೧೪೭

ಯೋಗಿ ಬಂದನೇ ಶಿವಯೋಗಿ ।
ಭೋಗ ಸುಖವ ತ್ಯಾಗ ಮಾಡಿ ।
ಆಗಮೋಕ್ತದಿಂದ ನಡಿವ ಪ

ತಮ್ಮ ತಾವು ಮರೆತ ಜನರ ।
ಹಮ್ಮಿನೊಳಗೆ ಬಿದ್ದಿರುವವರ ।
ಕರ್ಮವನ್ನು ಕಡಿದು ಹಾಕಿ । ಪರ ।
ಬ್ರಹ್ಮ ತೋರಬೇಕೆಂದು ೧

'ತತ್ತ್ವಮಸಿ' ಮಹಾವಾಕ್ಯದ ವಿವರವ ।
ಮತ್ತೆ ತಿಳಿಸಿ ಮಾಯ ಮೋಹ ।
ಕತ್ತಲೀಯ ಕಳೆದು ಹಾಕಿ ।
ನಿತ್ಯ ಸುಖವನು ನಿಲಿಸುವಂಥ ೨

ತಂದೆ ಭವತಾರಕನ ಪಾದ ।
ಹೊಂದಿದವರಿಗೆಲ್ಲರಿಗೆ । ಪರಮಾ- ।
ನಂದ ಪದವಿಯ ತೋರಿ ।
ದಯಾಸಿಂಧು ಮರ್ತ್ಯದೊಳಗೆ ೩

## ೧೪೮

ಮತವಿದು ಮುಚ್ಚಿ ಮುಚ್ಚಿಲ್ಲಾ ।
ಹುಚ್ಚರಾದರು ಈ ಜನರೆಲ್ಲಾ ಪ

ಶಿವ ಹೇಳಿದನೋ ಶಾಂಭವಿಗೆ ।
ಜವನ ಭಯವಿಲ್ಲಾ ಅನುಭವಿಗೆ ೧

ನಡೆದರೆಲ್ಲಾ ಸಂತರು ಹಿಂದೆ ।
ಪಡೆದರು ಸದ್ಗತಿ ಇದರಲಿ ಒಂದೆ ೨

ಭವಪಾತಕಿಗೆ ಅರಿವೇ ಇಲ್ಲಾ ।
ಭವತಾರಕ ತಾ ಮರೆ ಮಾಡಿಲ್ಲಾ ೩

## ೧೪೯

ಎಂಥ ಮಾತನಾಡಿದಿ ಎಲಾ ನೀನು । ಛೀ ।
ಸಂತನಾದ ಮೇಲೆ ಮುಂಚಿನದೇನೊ ಪ

ಊರ ಮುಂದಿನ ಕೆರೆ ಭಾವಿಯ ನೀರು ।
ಊರೆಲ್ಲ ಬಳಕಿಗೆ ತಾವು ತರುವರು ।
ಪಾರಮಾರ್ಥಿಕರ ಪಾದೋದಕ ಮಾಡಲು ।
ನೀರೆಂದು ಅದಕಿನ್ನು ದಾರಾಡುವರು ? ೧

ಕಲ್ಲಲ್ಲಿ ಲಿಂಗವ ಮಾಡಿದರೇನೊ ।
ಲಿಂಗವಲ್ಲದೆ ಕಲ್ಲು ಎಂಬುವರೇನೊ ।
ಬಲ್ಲ ಸತ್ಪುರುಷರ ಬಗೆಯನರಿತು ।
ತನ್ನಲ್ಲಿ ಬ್ರಹ್ಮವ ಕಂಡವನೀಗ ನರನೇನೊ ೨

ಕಾಮರ ಅಡವಿಯೊಳಿರುವದಾ ತಂದು ।
ಕಾಮಿಸಿ ಪಾದುಕ ಮಾಡಲು ಎಂದು ।
ಸ್ವಾಮಿ ಸದ್ಗುರು ಭವತಾರಕ ಮೆಟ್ಟಲು ।
ಭೂಮಿ ಜನರಡ್ಡ ಬೀಳ್ವರಿದೇನೋ ೩

## ೧೫೦

ಕಾಲ ಕರ್ಮವ ಕಾಲಿಲೊದೆದವ । ಕತ್ತಲಿಗಂಜುವನೇ ।
ಆಲಿಯ ಮೇಲಕೆ ನಿಲಿಸಿದ ಪುರುಷನು ।
ಬಾಲೆರ ಬಯಸುವನೇ ಪ

ಅಮೃತ ನದಿಯೊಳು ತೃಪ್ತ್ಯಾದ ಮಹಾತ್ಮನು ।
ಅಂಬಲಿ ಸುರಿಯುವನೇ ।
ಕುಂಭಕ ವಾಯುವ ನಿಲಿಸಿದ ಸಜ್ಜನ ।
ಕುಂಭಿನಿಗುದಿಸುವನೇ ೧

'ತತ್ತ್ವಮಸಿ' ಮಹಾವಾಕ್ಯವ ತಿಳಿದವ ।
ಮಿಥ್ಯಕೆ ಮೆಚ್ಚುವನೇ ।
ನಿತ್ಯನಿತ್ಯದಿ ಇರುವವನೂ ।
ಅನಿತ್ಯಕೆ ಮೆಚ್ಚುವನೇ ೨

ವೇದಾಗಮವನು ಶೋಧಿಸಿದವನು ।
ಭವ ಬಾಧೆಗೆ ಬೀಳುವನೇ ।
ಆದಿ ಮೂರ್ತಿ ಭವತಾರಕ ಭಜಕನು ।
ಭೇದವ ಮಾಡುವನೇ ೩

## ೧೫೧

ಧನವಗಳಿಸಬೇಕೆಂಥಾದು । ಈ ।
ಜನರಿಗೆ ಕಾಣಿಸದಂಥಾದು ಪ

ಹರಿಹರ ಬ್ರಹ್ಮಾದಿಗಳೆಲ್ಲ ।
ಹೌದಹುದಹುದೆಂಬಂಥಾದು ಅ.ಪ

ಕೊಟ್ಟರೆ ಹತ್ತಿರದಂಥಾದು ।
ತನ್ನ ಬಿಟ್ಟು ಹೊರ ಹೋಗದಂಥಾದು ॥
ಬಿಚ್ಚಿದ ಗಂಟನು ಬಯಲೊಳಗಿಟ್ಟರೆ ।
ಮುಟ್ಟಬಾರದಾರಿಂಥಾದು ೧

ಕರ್ಮವು ಬಾರದಂಥಾದು ।
ಜನರೋರ್ವರು ತೋರಿಸದಂಥಾದು ।
ನಿರ್ಮಲವಾದ ಮನಸಿಗೆ ದಾನ ।
ಧರ್ಮವ ಮಾಡಿಸುವಂಥಾದು ೨

ಮರವನು ತಾರದಂಥಾದು ।
ನಿಜದರಿವಿನೊಳಗೆ ಇರುವಂಥಾದು ।
ಗುರು ಭವತಾರಕ ಭಜಕರ ಕಣ್ಣಿಗೆ ।
ತೊರಹಿಲ್ಲದೆ ತುಂಬಿದಂಥಾದು ೩

## ೧೫೨

ಆವದಾದರು ಏನು ಲಿಂಗವಾದರು ಆಯ್ತು ।
ಆವ ಕುಲವದು ಏನು ಜ್ಞಾನಿ ಕರ್ಮವು ಹೋಯ್ತು ಪ

ಆವ ಅನ್ನವು ಏನು ಉಣಲ್ಹಸಿವು ಹೋಯಿತು ।
ಆವ ಮುದ್ರೆಯು ಏನು ಧ್ಯಾನಾನಂದವ ತೋರಿತು ೧

ಆವ ವಸ್ತ್ರವು ಏನು ಶೀತ ಬಾಧೆ ನೀಗಿತು ।
ಆವ ಅಗ್ನಿ ಏನು ದಿವ್ಯ ಕಾಂತಿ ಬೆಳಗಿತು ೨

ತಂದೆ ಭವತಾರಕನ ಪಾದ ಸೋಂಕಲಾಯಿತು ।
ಮುಂದೆ ಭವಕೆ ಬಾರದಂತೆ ಹೊಂದಿಕೊಂಡು ಹೋಯಿತು ೩

## ೧೫೩

ಗುರುಭಜಕರಿಗೆ ದುರಿತ ಬರುವದುಂಟೆ ? ।
ಸುರತರುವಿನಲಿ ದಾರಿದ್ರ್ಯ ಗುಣ ಉಂಟೆ ಪ

ನಾಗನೇರಿದವಗೆ ಅಂಜಿಕೆಯುಂಟೆ ।
ಯೋಗ ಪುರುಷನಿಗೆ ಪೂರ್ವ ಕರ್ಮ ಉಂಟೆ ॥
ಆಗಮದಿ ನಡೆವವಗೆ ಅನ್ಯ ಮಾರ್ಗವುಂಟೆ ।
ರೋಗವಿಲ್ಲದವನಿಗೆ ಪಥ್ಯ ಉಂಟೆ ೧

ವೇದಾಂತ ತಿಳಿದವಗೆ ಭೇದಬುದ್ಧಿಗಳುಂಟೆ ।
ಸಾಧು ಸಂಗದಲಿ ದುರ್ವಾದವುಂಟೆ ।
ಬೋಧ ನೆಲೆಗೊಂಡವಗೆ ಕ್ರೋಧ ಜನಿಸುವದುಂಟೆ ।
ನಾದ ಬಿಂದು ಕಳಾತೀತಗೆಣೆಯುಂಟೆ ೨

ತಂದೆ ಭವತಾರಕನ ಹೊಂದಿರಲು ಭಯವುಂಟೆ ।
ಇಂದುಧರನಲ್ಲಿ ಸಂದೇಹವುಂಟೆ ।
ಕುಂದು ಹೆಚ್ಚೆಂಬೋದು ಅಲ್ಲಿ ಜನಿಸುವದುಂಟೆ ।
ಒಂದೆ ಬ್ರಹ್ಮವ ಕಂಡ ಮಹಿಮಗೆರಡುಂಟೆ ? ೩

## ೧೫೪

ನಾದವನಾಲಿಪ ಯೋಗಿಯ ನೋಡಿ ।
ಕಕುಲ ಮಾಡಬ್ಯಾಡಿ ಪ

ಪಂಚಭೂತದ ಸಂಚಿತ ಬಿಟ್ಟು ।
ಪಂಚಾದಶಿಯಲಿ ಮನವಿಟ್ಟು ೧

ಪರಮ ವೈರಾಗ್ಯದ ಭೋಗಿ ।
ಪರಶಿವ ರೂಪನೆ ತಾನಾಗಿ ೨

ಇಹಪರವೆರಡೆಂಬುದ ಕಡಿದು ।
ಹಂಸೋಹಂ ಎಂಬನ ಪಿಡಿದು ೩

ಭವ ಭಯ ಸಂಶಯಗಳನೆ ಜರಿದು ।
ಭವತಾರಕನಂಘ್ರಿಯ ಬೆರೆದು ೪

ತಾರಕ ಮಂತ್ರವ ಜಪಿಸುತಲಿರಲು ।
ಅರಿತು ಜ್ಞಾನಿಯಾಗುವನೆನಲು ೫

## ೧೫೫

ಆರೂಢನಾದ ಯೋಗಿಯ ಬಗೆಯಿದು । ಈ ।
ರೂಢಿಯೊಳು ಜನಕಿನ್ನು ಕಾಣಿಸದು ಪ

ಮಾತುಗಳ ಆಡನು । ಮೌನಗಳ ಮಾಡನು ।
ನೀತಿ ಅನೀತಿಗಳೆಂಬುದ ನೋಡನು । ಯಾತರೊಳು ತನಗೆ
ಸಂಪ್ರೀತಿಯೆಂಬುವದಿಲ್ಲ । ದಾತನಾಗಿನ್ನಾತ ಚರಿಸುತಿಹನು ೧

ವೇದಗಳ ನೋಡನು ಶಾಸ್ತ್ರಗಳ ಕೇಳನು । ನಾದ ಬಿಂದು
ಕಳಾತೀತ ತಾನು । ಸಾಧು ಸಂತರ ಸಂಗದೊಳು ಬೋಧದಲಿ
ನಲಿವುತಲಿ । ಆದ್ಯನಾದಿ ತಾನೆಂದು ತಿಳಿದಿಹನು ೨

ವಂದಿಸಲು ಹಿಗ್ಗನು । ನಿಂದಿಸಲು ತಗ್ಗನು ।
ಬಂದದಕೆ ತಾ ಹಿಂದು ಮುಂದಾಗನು ।
ತಂದೆ ಭವತಾರಕನ ಚರಣಾರವಿಂದವನು ।
ಹೊಂದಿ ಪೂರ್ಣಾನಂದದೊಳಗಿಹನು ೩

## ೧೫೬

ಹರ ಹರ ಹರ ಹರ ಶ್ರೀ ಗುರುನಾಥಾ ।
ಪರಿಹರಿಸುವ ಈ ಭವ ಭವಹರ ಪ

ಕಾಮಿತ ಜನರನು ಕಂಡರೆ ಕರೆವ ।
ಕಾಮಿತ ಫಲ ಕಲ್ಪನೆಗಳ ಜರೆವ ೧

ಶಿರದೊಳು ತನ್ನಯ ಕರಕಮಲಿಡುವ ।
ಮರಳಿ ಜನಿಸದ ಪದವಿಯ ಕೊಡುವ ೨

ಭವ ಭಯ ಸಂಶಯ ಬೀಜವ ಹುರಿವ ।
ಭವತಾರಕನಾಗಿಳೆಯೊಳು ಬರುವ ೩

## ೧೫೭

ಬಂದುದ ಕೊಂದರೆ ಹೋಗಲಿ ಮತ್ತೇ ।
ಹೋದುದೆಲ್ಲಾ ಹೋಗಲಿ ಶಿವನೆ ಪ

ಮನದ ಆಶೆಗಳು ಕಡಿಯಲಿ ಶಿವನೆ ।
ಉನ್ಮನಾನಂದಕೆ ನಡೆಯಲಿ ಶಿವನೆ ॥
ಘನವಾದ ಘನವನು ಹಿಡಿಯಲಿ ಮುಂದೆ
ಜನನದ ಬಾಧೆಯು ನೀಗಲಿ ಶಿವನೆ ೧

ಬಂದು ಹೋಗುದೆಲ್ಲ ನೀಗಲಿ ಶಿವನೆ ।
ಎಂದೆಂದು ನಿಜವೆಂಬುದಾಗಲಿ ಶಿವನೆ ॥
ಮಂದ ಮತಿತ್ವ ಹೋಗಲಿ ಜಗವು ।
ಇಂದುಧರನ ಸಮತೂಗಲಿ ಶಿವನೆ ೨

ಪರಿ ಪರಿ ಕಲ್ಪನೆ ಜರೆಯಲಿ ನಾ ।
ಪರಮಾತ್ಮನೊಳಗಿನ್ನು ಬೆರೆಯಲಿ ಶಿವನೆ ॥
ಗುರುಭವತಾರಕ ದೊರೆಯಲಿ ನಾ ।
ಪರಪುರುಷನೆಂದು ಅರಿಯಲಿ ಶಿವನೆ ೩

## ೧೫೮

ಗುರುವರ ನಿನ್ನಯ ಕರ ಶಿರ ಸೋಂಕಿದರೆ ।
ದುರಿತ ತೃಣಕೆ ನಾ ಮೊರೆಯಿಡಲೇಕೆ ? ಪ

ಕರುಣಾಕರನೆಂದು ವರ್ಣಿಸುತಿವೆ ಶ್ರುತಿ ।
ಕರುಣಿಸೆನುತ ಮತ್ತೆ ಮೊರೆಯಿಡಲೇಕೆ ಅ.ಪ

ಪಾವನ ಮಾಡೆನುತಲಿ ಪರುಷಕೆ ಲೋಹಾ ।
ಸೇವಿಸಲ್ಯಾಕೆ ಹರುಷದಿ ದಿನ ದಿನ ।
ಸ್ಪರ್ಶವು ಕಾರಣವಲ್ಲದೆ ಅದರೊಳು ।
ದರುಶನ ನಿರುತದಲಿರುತಿರ ಬೇಕು ೧

ಶ್ವೇತ ಮಧ್ಯದಿ ಬಿದ್ದ ಸೂಕ್ತಿಕವದು ತಾ ।
ಸ್ವಾತಿಯುದಕಕೆ ಜ್ಯೋತಿ ಮೌಕ್ತಿಕವದು ।
ಪ್ರೀತಿಯಿಂದ ಸವಿ ಮಾತಾಡಬೇಕು ೨

ಕತ್ತಲೆಯನು ಪರಿಹರಿಸೆನುತಲಿ ।
ಮತ್ತೆ ಭಾಸ್ಕರಗೆ ಪ್ರಾರ್ಥಿಸಬೇಕೆ ? ।
ಕರ್ತೃ ಸದ್ಗುರು ಭವತಾರಕ ಒಲಿದರೆ ।
ಮಿಥ್ಯವೀ ದೇಹದ ಸಾಧನ ಯಾಕೆ ? ೩

## ೧೫೯

ದೇವನಲ್ಲವೇನೋ ಸದ್ಗುರು ಮಹಾದೇವನಲ್ಲವೇನೋ ।
ಆದಿಯೊಳ್ ಸಿದ್ಧರು ಹೋದ ದಾರಿಯ ।
ತೋರಿ ಭೇದವ ಬಿಡಿಸಿದ ಮೂರುತಿ ಪ

ನರಜನ್ಮದೊಳಗೆ ಬಂದು ನೀನು । ಪ್ರಪಂಚದ ಕಡಲು ಮಧ್ಯದಿ
ನಿಂದು । ಅರಿತು ಮರೆತು ಒಮ್ಮೆ ಗುರುವೆಂದು ನೆನೆದರೆ ।
ಗುರುತಿಟ್ಟು ಅವರಿಗೆ ಪರತರ ತೋರುವ ೧

ಆಶಾಪಾಶವ ಬಿಡಿಸಿ ಮಾಡಿದ । ದೋಷ ಭವಂಗಳ
ಕರ್ಮವ ಕೆಡಿಸಿ । ನ್ಯಾಸ ಧ್ಯಾಸದಿ ಜಪ ಮಾಡೆ ಗುರು ।
ಬೋಧ ಪ್ರಕಾಶವ ತೋರಿದ ಈಶನು ೨

ಭಕ್ತಿ ಜ್ಞಾನವ ಹಿಡಿದು ನಂಬಿದಗೆ । ಮುಕ್ತಿಯ ನಿಶ್ಚಯದಿ
ಪಾಲಿಸುವ । ಕರ್ತೃ ಸದ್ಗುರು ಭವತಾರಕ ಧರೆಯಲಿ ।
ಪ್ರತ್ಯಕ್ಷವಾದಂಥ ಪರಬ್ರಹ್ಮರೂಪನು ೩

## ೧೬೦

ತನ್ನ ತಾನು ಕಂಡರೆ ಜೀವಶಿವರೆಂಬ
ಭೇದವೆಲ್ಲಿಹುದೋ ಪ

ಶ್ರವಣ ಮನನ ನಿದಿಧ್ಯಾಸವು ಬಲಿದರೆ ।
ಭುವನದ ಜನಪದ ಪುಸಿಯಹುದೊ ೧

ರೂಪನಾಮಕ್ರಿಯಾ ವರ್ಣಗಳು ।
ಕಾಯದಿ ತೋರಲು ನಿಜವಲ್ಲಾ ೨

'ತತ್ತ್ವಮಸಿ' ಮಹಾ ವಾಕ್ಯವು ಬಂದರೆ ।
ಮಿಥ್ಯೆಗಳೆಲ್ಲಾ ನೀಗುವವು ೩

ಆಗಮದಲಿ ಶಿವಯೋಗವ ಮಾಡಲು ।
ಈಗಲೆ ಜೀವನ್ಮುಕುತಿಯು ಸಿಗುವದೊ ೪

ಭವತಾರಕನ ಕರುಣವ ಪಡೆದರೆ ।
ಜನನ ಮರಣ ಭಯ ಹಿಂಗುವದೊ ೫

## ೧೬೧

ಶ್ರುತಿ ಮತವ ಕೇಳಿ ನೀ ಮರುಳಾಗಬೇಡ ।
ಶ್ರುತಿಯುತರ ಸಂಗ ಬಿಡಬೇಡ ಪ

ಮಾಡಿದನ್ನವು ಎಲ್ಲ ಪ್ರಸಾದವೆ ನೋಡು ।
ಆಡುವ ವಚನ ಅಕ್ಷರ ಮಂತ್ರವೇ ।
ರೂಢಿಯೊಳ್ ಜನರೆಲ್ಲ ಸಾಧು ಸತ್ಪುರುಷರೇ ।
ಬೇಡುವವರೆಲ್ಲ ಫಲಗಳ ಕೊಡುವರೇ ೧

ಜಲವೆಲ್ಲ ತೀರ್ಥವೇ ಸ್ಥಳವೆಲ್ಲ ಕ್ಷೇತ್ರವೇ ।
ಶಿಲೆಯೆಲ್ಲ ತಿಳಿದರದು ಶಿವಲಿಂಗವೇ ।
ಹಲವು ಮತದಿ ಸಾಯೋದು ಜಪಮುಕ್ತಿಯೇ
ಕುಲವೆಲ್ಲ ಕಾಷ್ಠವದು ಶ್ರೀ ಗಂಧವೇ ೨

ವೇದಾಗಮವ ಶೋಧಿಸಿ ನಿನ್ನೊಳು ।
ನಾದಬಿಂದು ಕಳಾತೀತ ನೀನಾಗಿ ।
ಆದಿ ಮೂರ್ತಿ ಭವತಾರಕ ಪಾದದ ।
ಬೋಧದಲಿ ಸುಖಿಯಾಗೊ ಮನುಜಾ ೩

## ೧೬೨

ಶಿವನ ನೋಡಿದೆ ಶಿವರಾತ್ರಿಯಲಿ । ನಾ ।
ಶಿವನಾದೆ ನಾಕೂ ಪಾತ್ರೆಯೊಳ್ ಪ

ನಾದವು ತುಂಬಿದೆ ಶ್ರೋತ್ರದಲ್ಲಿ ।
ದಿವ್ಯ ರೂಪವು ತುಂಬಿದೆ ನೇತ್ರದಿ ೧

ತಿಳಿಯದೆ ಮೊದಲು ಶಾಸ್ತ್ರದಲ್ಲಿ ।
ತಿಳಿದಿತು ಬೋಧ ಮಾತ್ರದಲ್ಲಿ ೨

ಕರುಣಿಸಿದನು ಈ ಕ್ಷೇತ್ರದಲ್ಲಿ ।
ಭವತಾರಕ ಕೃಪೆ ಮಾತ್ರದಲೀ ೩

## ೧೬೩

ಗುಡಿಯ ತುಂಬ ದೇವರ ಕಂಡೆ ।
ಅಡಿಯಿಡಗೊಡದೆನ್ನ ಹಿಡಿಕೊಂಡಿತಕ್ಕ ಪ

ಕೈಯಿಲ್ಲ ಕಾಲಿಲ್ಲ ಮೂಗಿಲ್ಲ ಮಾರಿಲ್ಲ ।
ಮೈಯೆಲ್ಲ ನೋಡಲು ಮರಿಯಾದೆ ಇಲ್ಲ ।
ಸೈಯೆನಿಸಿ ಜಗಕೆಲ್ಲಕೆ ಮಿಗಿಲಾದ ದೇವರು ।
ವೈಯಾರ ಇಲ್ಲದೆ ಸಿಕ್ಕಿತಕ್ಕ ೧

ಹೆಣ್ಣಲ್ಲ ಗಂಡಲ್ಲ ಹಣ್ಣಲ್ಲ ಕಾಯಲ್ಲ ।
ಹೂವಿಲ್ಲದೆ ಪೂಜೆಗೊಂಡಿಹುದಕ್ಕ ।
ಪೂಜೆಯ ಮಾಡುವ ಪೂಜಾರಿಯ ನುಂಗಿತು ।
ಮೂಜಗದೊಳು ಇದು ಸೋಜಿಗವೆನ್ನಿ ೨

ಅರಿತು ನೋಡಲು ಬೆರೆತು ನಿಂತಿಹುದಲ್ಲ ।
ಮರೆತು ಹೋಯಿತು ನಾನೆಂಬುವದೆಲ್ಲ ।
ಗುರುತವ ಬಲ್ಲದು ಗುರು ಭವತಾರಕ ।
ಭಜಕರ ಹೊರತು ತಿಳಿಯದು ಜನಕೆ ೩

## ೧೬೪

ದೃಷ್ಟಿಯೊಳಗೆ ದೃಷ್ಟಿ ನಿಂತಿತು ।
ನೋಡಲಿನ್ನು ದೃಶ್ಯ ನಷ್ಟವಾಯಿತು ।
ಕಷ್ಟವೆಲ್ಲ ಕಡೆಗೆ ಸಾರಿ । ಅದೃಷ್ಟವನ್ನು ಮೀರಿ ನಿಂದು
ನಿಷ್ಠೆಯಲ್ಲಿ ತುಷ್ಟಿಯಾಯ್ತು ನೀ ನೋಡು ಸಖಿಯೆ ಪ

ಐದು ಮಂದಿ ಅಗಲಿ ಹೋದರೆ ।
ಐದಕ್ಕೈದು ಕೂಡಿ ಬಂದು ಕೂಡದಾದರೆ ।

ಐದರೊಳಗೆ ನೋಡಲಿನ್ನು ॥
ಐದು ಐದು ತಾನೆ ಅಲ್ಲ ।
ಐದನೇದರಲ್ಲಿ ನಿಂತೆನೇ । ನೀ ಕೇಳಿದೇನೆ ? ೧

ಕರ್ಮವೆಲ್ಲ ಕಾಣದಾಯ್ತು ।
ಧರ್ಮವೊಂದು ಸರ್ವಕಾಲ ತೂಗಿ ನಿಂತಿತು ।
ಶರ್ವನಲ್ಲದಿನ್ನು ಮತ್ತೆ ।
ಉರ್ವಿಯಲಿ ಪೇಳದಾಗಿ ಪರ್ವತಾಗ್ರ
ಭೂಮಿ ಒಂದು ನಿರ್ವಿಕಾರ ತೋರಿತಲ್ಲಾ ೨

ಹಿಂದೆ ಎಂದು ಕಂಡಿದಿಲ್ಲ । ಈ ಸೋಜಿಗವನ ।
ಮುಂದೆ ದಾರಿಗುಸುರಲೀಗತೀ । ತಂದೆ ಭವತಾರಕನ ।
ಹೊಂದಿದವರ ಕೇಳಿದೇನೆ ।
ಎಂದು ಎಂದು ಹೀಗೆಂಬರೆ । ನೀ ಬಲ್ಲಿಯೇನೇ ೩

## ೧೬೫

ಚಿಕ್ಕವನೇನೆ ಮಿಕ್ಕಾದಂಥ ।
ಮಕ್ಕಳಿಲ್ಲೇನೆ, ನಿಮ್ಮವರೊಳು ॥
ದಿಕ್ಕಿಲ್ಲವೇನೆ, ಇವಗೆ ತಕ್ಕ ।
ಬುದ್ಧಿಯ ಕಲಿಸುವವರಿನ್ನು ಪ

ತಂಡ ತಂಡದಿ ಬರುತಿಹ ನಮ್ಮನ ।
ಕಂಡು ಆಡುವ ಆಟಕಿಯ ಬಿಟ್ಟು ॥
ಚೆಂಡು ಪುಟಿದು ಬಂತು ಬಚ್ಚಿಟ್ಟಿರ್ಯಾಕೆಂದು ।
ದುಂಡ ತೋಳಗಳೆತ್ತಿ ಭಂಡು ಮಾಡುವನಿವ ೧

ಶಿಶುವೆಂದು ಎತ್ತಪ್ಪಿಕೊಂಡು ಮುದ್ದಿಡಲು ।
ದಶನಗಳಿಂದಧರ ನೋಯಿಸಲು ॥
ಆಶೆಯಲಸುವ ಪೀರಿದವನಿವನೆಂದಂಜಿ ।
ಸೂಸಿಯನ್ನಬ್ಬರಿಸಿ ಬೀದಿಯೊಳಂದು ೨

ಆರಿಲ್ಲದಾಗೊಬ್ಬವನನ್ನು ಬಾಲಕನೆಂದು ।
ದ್ವಾರವಿಕ್ಕಿ ನೀರೆ ಮೇಲಿರಿಸಿ ॥
ಬಾರಯ್ಯ ಮುದ್ದು ಕೊಡಯ್ಯ ಎನೆ ಹದಿ– ।
ನಾರು ವರುಷದವನಾದ ರುಕ್ಮಭೂಷಾ ೩

## ೧೬೬

ಹರಿ ಗೋರಸ ಕುಡಿವುದು ನೋಡಿರೋ ।
ಪರಿ ಪರಿಯ ಸಂಭ್ರಮ ಮಾಡಿರೋ ಪ

ಕಾರಣ ಒರಳಲಿ ವೃತ್ತಿಗುಣದಿ ತಾ ।
ಇದ್ದು ಯಶೋದೆಯು ಕಟ್ಟಿರಿಸಿ ॥
ಸ್ತನವನುಣಿಸುತಿರಲು ನಿಜಕರ್ಮದ ।
ಬಲದಿ ಬಿಡಿಸಿಕೊಂಡಾಡುತಲಿ ೧

ನಾ ನಾ ಎನುತಾಡುವಾ ಗೋಪಾಲರ ।
ನೆರೆಸುವರಂತೆ ಕುಣಿವುತಲಿ ॥
ನಾನಾ ದ್ವಾರಗಳಿಂದ ಧುಮುಕಿ ।
ಮುಚ್ಚಿದ ಮಡಿಕೆಗಳ ನೋಡುತಲಿ ೨

ರಾಗ ಪೀಠದಲಿ ಮೋಹದ ಹೆಗಲಲಿ ।
ನಿಲ್ಲಲು ನೆಲವು ನಿಲುಕುತಿರಲು ॥
ಯೋಗ ರುಕ್ಮ ಘಟಿಯನಾ ಭೇದಿಸಿ ।
ವಿರತಿ ಗೊಲ್ಲತಿಗತಿ ಕಾಡುತಲಿ ೩

## ೧೬೭

ಕೇಳಯ್ಯ ರಂಗಯ್ಯ ಪ

ತಮ್ಮವರೆಂದು ತಾಳಿ । ಸುಮ್ಮನಿರುವವರಲ್ಲ ॥
ಹಮ್ಮಿಲಿ ಹರಿಸಿ ಬಂದು ನಮ್ಮನೆ ದೂರುವರೋ ೧

ಮೊಸರನ್ನೆಲ್ಲ ಸುರಿದಾನೆಂದುಸುರು ಹಾಕಿದರೆ ।
ನಮ್ಮ ಹೆಸರಿಗೆ ಮರಗಿ ಮುಖವು ಹಸಿರಿಡುದಯ್ಯಾ ೨

ಬಾಲಕರ ಹೆಗಲನೇರಿ । ಪಾಲನೆಲ್ಲವಕಿತ್ತೆಳೆದು ।
ಬಾಲೇರ ಬಳಲಿಸುವದು ಬಾಲ ಬೇಕೇನೋ ೩

ಸರಿಯಿಲ್ಲದವರ ಕೂಡ । ಮರೆಯಿಲ್ಲದೆ ಮಾತಾಡಿ ।
ಸೆರಗ ಸೆಳೆದರೆ ನಮ್ಮ ಹಿರಿಯತನವೇನೋ ೪

ಚಿಕ್ಕತರದವರು ನಮಗೆ । ಸೊಕ್ಕಿನವನೆಂಬುವರು ।
ರುಕ್ಮಭೂಷಗೆ ಈ ಮಾತು ತಕ್ಕದಹುದೇನೋ ೫

## ೧೬೮

ನಿನ್ನ ಮಗನೇನೇ ನಂದಗೋಪರಾಣಿ ।
ಇನ್ನು ಇಂಥ ಚಪಲ ಚಿಕ್ಕವನ ಕಾಣೆ ಪ

ಗೊಲ್ಲರಿಗೆ ತಕ್ಕ ತನಯನಿವನಲ್ಲ ।
ಎಲ್ಲೆಲ್ಲಿಲ್ಲದಂಥ ನಡೆನುಡಿಯ ಬಲ್ಲ ೧

ವಾವಿಲ್ಲದವನ ಸಂಗ ಭಂಗ ಮಳೆ ನಮ್ಮ ।
ನಾವಿಲ್ಲಿಹುದಿನ್ನು ನಿತ್ಯಲ್ಲ ಕಾಣಮ್ಮ ೨

ಕಣ್ಣಲೆ ಎಲ್ಲರ ಮನವ ಕದ್ದು ಕದಡುವನು ।
ಕಣ್ಣಲಿಳ್ಳೀ ಕಟ್ಟಿಸಿ ಮೊಗವನು ಗಿರುವವನು ೩

ಮಾರನ ಸಖನಾಗಿ ಹೇಮಗ ತಿರುಗುವವನು ।
ದೂರ ಬಂದವರಿಗಿಲ್ಲ ದರ ದೂರಾಗಿಹನು ೪

ನಕ್ಕು ಮುದ್ದಿಸಿ ನಮ್ಮ ಸೊಕ್ಕು ತಗ್ಗಿಸುವನು ।
ರುಕ್ಮದಂತೆ ನಾನಾಕಾರ ಧರಿಸುವವನು ೫

## ೧೬೯

ಬಂದ ನೋಡಮ್ಮ ಗೋಪಿಯ ಕಂದ ಬಂದ ನೋಡಮ್ಮ ॥
ಮಂದರ ಧರ ಗೋವಿಂದನು ಹರಿ ಉಪೇಂದ್ರನು ಲಕ್ಷ್ಮೀ
ವೃಂದಾವನ ಗೋಕುಲ ಪ್ರೀಯಾ ಪ

ಹಿಂಡಾಕಳು ಹೊರ ಹೊರಡಿಸಿ ಕರೆವನು– । ಚ್ಚಂಡಾ ವೃಷಭ
ಕಾದಸುರರು ಹಿಂಡುವ ಗಂಡಾ ಕರ್ಣದಿ ।
ಕುಂಡಲ ಮಂಡಿತ ಪುಂಡರೀಕಾಕ್ಷಾ ೧

ತೊಟ್ಟಿಲಲ್ಲೆ ತಾ ಬಟ್ಟನೆ ಚೀಪುತ । ಧಿಟ್ಟಾ ಕೃಷ್ಣನು
ತಟ್ಟನೆ ಚುಂಬನವ । ಕೊಟ್ಟಾ ವಿಷವನು ಕೊಟ್ಟವಳಸುವನು
ಧಿಟ್ಟಿಸಿದಾ ಜಗಜಟ್ಟಿಯು ಕೃಷ್ಣಾ ೨

ಬಾಲಕರನು ಹೆಗಲೇರಿಸಿ ಮೇಲಿನ । ನೆಲವಿನ ಬೆಣ್ಣೆಯ
ಕಳವನು ಮಾಡಿ । ಶಾಲಾ ಹುಡುಗರ ಪಾಲಾ ಉಣಿಸುತಲಿವ
ಲಕ್ಷ್ಮೀಲೋಲಾ ರಂಗಯ್ಯಾ ೩

ಫಣಿಮಣಿ ಮೇಲಿಟ್ಟನು ಮಣಿ ರುಣಿ ಝಣಿ– । ರೆನಿಸುವ
ಮಣಿ ಸಜ್ಜನ ಮಾಕೃಷ್ಣನ ಫಣಿ ಫಣಿದಲಿ ಮೆಟ್ಟಿ ।
ಕುಣಿಕುಣಿದಾಡುತಲಿ ೪

ಮಂಗಲಮಹಿಮನು ಶೃಂಗಾರ ಮಾಧವ । ಮಂಗಲ
ಕರತರಂಗನ । ಅರಿತತಿ ಭಂಗವ ಬಿಡಿಸುತ ।
ಕಂಗಳ ಸದೋದಿತ ರುಕ್ಮ ೫

## ೧೭೦

ತಮ್ಮನರಿಯದೆ ತಮ್ಮೊಳೀತೆರನಾಡುವರು ।
ಹಮ್ಮ ಬಿಡದೆ ಪರಬಮ್ಮನ ಜರಿಯುವರು ಪ

ಒಂಬತ್ತು ಛಿದ್ರುಳ್ಳ ಕುಂಭದ ಗಾಲಿಗೆ ।
ಸ್ತಂಭದಂತೆ ನಿಲಿಸಿ ಸಂಭ್ರಮ ಪಡೆವರು ೧

ಮುಂಡ ಬೋಳವ ಮಾಡಿ ಕಂಡಲ್ಲನ್ನವನುಂಡು ।
ದಂಡ ಧರಿಸಿ ಮನ ದಂಡಿಸದಿರುವರು ೨

ಕದಲಿಸದೆ ಕಾಯಾ ಹದನದಿಂದಲಿರಿಸಿ ।
ವೇದದ ಮೊದಲೆಂದು ನಾದಕೆ ಬೆರೆವರು ೩

ಓದಿ ಆಗಮಗಳನು ಭೇದಿಸಿ ತಿಳಿಯದೆ ।
ಮೇದಿನಿಯೊಳಗೆಲ್ಲ ವಾದಿಸಿ ಮೆರೆವರು ೪

ಪಾಷಾಂಡ ಪಥ ಪಡೆದು ವೇಷ ಪಾಲಟ ಮಾಡಿ ।
ದೋಷಕಂಜದೆ ರುಕ್ಮ ಭೂಷಗೆ ಮರೆವರು ೫

## ೧೭೧

ತಪ್ಪು ಮಾಡುವದು ಮನುಜ ಧರ್ಮ ।
ನಮ್ಮದು ಬೇಡುವದು ಕಾಡುವದು ಪ

ನಡೆ ನುಡಿಗೆ ತಪ್ಪು ನೋಡುವದು ನ್ಯಾಯವೇ ನಿನಗೆ ॥
ಬಡವರಾಟಗಳೆಂದು ಸಲುಹಯ್ಯ । ಮಾಡಲಬೇಡ ತಡವ ।
ಕಡಿದ್ಹಾಕು ಕಮಳಲೋಚನಾ । ಎನ್ನ ನಿನ್ನಡಿಗೆ
ಸೇರಿಸು । ಕಡಲಶಯನ ಮೋಹನ್ನಾ ೧

ಮಡಹಿ ಮಲ್ಲನ ಕೆಡವಿ । ಜೋಡು ಮತ್ತಿಯ
ಮರವ ತಡವಿ । ಮಧು ಮೊದಲಾದವರನ್ನು ।
ಅಡವಿ ಕಿಚ್ಚವ ನುಂಗಿ । ಕಡುವಿ ಮಡುವ ಧುಮುಕಿ ।
ಬಡವಿ ಕುಬ್ಜಿಯ ಕೈಪಿಡಿದು ಯಶವ ಪಡೆದಿ ೨

ನಡೆವವನು ಎಡವುವನೆಂದು । ಅಪರಾಧಗಳನು
ಬಡಿದಾಡದೆ ಒಡಲೊಳಗೆ ಹಿಡಿವ । ಮಡದಿಯನು
ನಿಮ್ಮ ಜಡೆಯಲಿರಿಸಿದ ಮನೆಯಲಿ ಎನ್ನ ।
ಸಡಗರದ ರುಕ್ಮದಿಂದಿಡಿದು ಲಾಲಿಸು ೩

## ೧೭೨

ಮುಂದೆ ಗಾಣದೆ ದಾರಿ ಮುದಿಗೆ ಬಿದ್ದು । ಹಿಂದು ನೋಡದೆ
ಬಂದದ್ದು ಬರಲೆಂದು ತಾಳದೊ ಕಂದಗಳ ಪ್ಯಾಡುತಲಿ
ದಿನ ಸುಖವೆಂದೆಂದಿಗೂ ಬೇಕೆಂದು ಬೆಂದ ಭವ
ದಂದದಿಗೆ ನಾ ಕುಂದದೆ ನೊಂದೆ ನಿನಗೆ ವಂದಿಸದೆ ೧

ದೇವ ಕಾಯಯ್ಯ ಆವ ದೈವಕ ಬಾಹದೆ । ದಯಾ
ಭಾವಿಸಲ್ಯಾಕ ಭಾವಜಾನಯ್ಯ । ಕಾಮನ ಕಾಟಿಗೆ ಕಂಗೆಡಿಸುವ
ದುರ್ಭಾವಗಳನು ಪರಿಹರಿಸೈ । ಹಾವಿನ ಹಗಿಹಗಳಲಿ
ವಿಹರಿಸುತಿಹ ಜೀವದ ಜೀವನದೊಡೆಯ ೨

ಮೀರಿ ಬಂದದು ಮೋರಿ ದೋರದೆ ವಾರಿ ಆಟಾದು ಧರೆಗೆ
ಮಾತು ಸರಿಗೆ ಬಾರದು ಕರಿಹರಿಯನಳಾಪರಿ ।
ಬರಿ ಗಾಳಿಲಿ ಬರಹೇಳಿದರಂದಾರು ಶಿರಿವರ ರುಕ್ಮನ ಕರ
ವಿಡಿದಿಂದುದ್ಧಸದಿಹದು ಬಾಹಳರದು ೩

## ೧೭೩

ಕಳದೇವಲ್ಲ ಕೈಗೆ ನಿಲುಕಿದ ನಿಧಾನ ।
ತಿಳಿದು ಬಿಟ್ಟೆವಲ್ಲ ಸ್ವರ್ಗದ ಸೋಪಾನ ॥

ಅಳಿದೆವಲ್ಲ ಆತ್ಮಲೋಕದ ವಿಮಾನ ।
ಸಲೆಯೆಂಬ ಸಮಯ ತುಂಬಿತಲ್ಲಮಾನಾ ಪ

ಮದ್ದು ಮೇಯಿದಂತೆ ಚಿಂತೆಗಳಿದ್ದು ಸೊರಗಿ ।
ಕದ್ದು ಕಳ್ಳನಂತೆ ಲೋಕದೊಳು ತಿರುಗಿ
ಬಿದ್ದು ಬೈಸಿಕೊಂಡೆ ಧನಿಕರಲಿ ಮರುಗಿ ।
ಹದ್ದು ಕಾಗೆಯಂತೆ ಕೂಳ ತಿಂದು ಒರಗಿ ೧

ಜನದ ಮನದ ನಾಚಿಕೆಗಳೆಲ್ಲ ಬಿಟ್ಟು ।
ಕನಸಿನಂಥ ವಿಷಯ ಸವಿಗೆ ಸೋಂಕಿ ಕೆಟ್ಟು ।
ಜನಿಸಿದವರ ಕೂಡ ಮತ್ಸರವ ತೊಟ್ಟು ।
ಶುನಕನಂತೆ ಬೊಗಳಿ ಬೊಗಳಿ ಗೋಳಿಟ್ಟು ೨

ಉಕ್ಕಿ ಸೊಕ್ಕಿ ಸಾಧು ಸಜ್ಜನರ ದೂರಿ ।
ನಕ್ಕು ನುಡಿದು ಅವರ ದೋಷಗಳ ಬೀರಿ ।
ಝುಕ್ಕಿಸಲರಿಯಾದವರ ಮಾತುಗಳ ಮೀರಿ ।
ರುಕ್ಮದಾಶೆ ಹಿಡಿಯದೆ ಹೇಡಿತನವ ತೋರಿ ೩

## ೧೭೪

ಪುಂಡಲೀಕವರದನೇ । ಕುಂಡಲೀಶಯನನೇ ॥
ಗಂಡರಿಗೆ ಗಂಡನಾದ । ಪಾಂಡುರಂಗ ರಾಯನೇ ಪ

ಅಮ್ಮಾ ನಮ್ಮ ಒಡೆಯನೇ । ಬೊಮ್ಮಾದಿಕರ ವಂದ್ಯನೇ ॥
ಹಮ್ಮಿನವರ ಹಲ್ಲು ಮುರಿದು । ಸಮ್ಮತರ ಸಲಹುವನೇ ೧

ಕಾಲಕರ್ಮ ರಹಿತನೇ । ನೀಲಮೇಘಶ್ಯಾಮನೇ ॥
ಛಲನ ಮಾಡಿ ಬಲಿಯ ಗೆದ್ದ । ಚೆಲುವ ಪದ್ಮನಾಭನೇ ೨

ಅವ್ಯಯ ಸ್ವರೂಪನೇ । ಸವ್ಯಸಾಚಿ ಮಿತ್ರನೇ ॥
ಹವ್ಯಕವ್ಯ ಭೋಕ್ತನಾದ । ದಿವ್ಯ ರುಕ್ಮಭೂಷನೇ ೩

## ೧೭೫

ಸಕಲ ದಿವಿಜಾರಾಧ್ಯ ಚರಣ ಪ

ಕಂದರ್ಪ ಕೋಟಿ ಮೋಹನ್ನ ಕಾಯಾ ।
ಕಂಸ ಚಾಣೂರ ಮರ್ದನ .

ಕಾಲಿಯ ವಿಷಕಲಿಲ ಸಲಿಲಯಾನಕಲ
ಪ್ರಾಣ ಗೋಗೋಪ ಜೀವನಾ ।
ಈಯ್ಯಾ ಈಯ್ಯಾ ॥ ಗೋಕುಲದಿ
ಗೋಪಿಯರ ಮನೆಗಳಲಿ ಗೋರಸ ಚೌರ್ಯ ಸಂಪನ್ನಾ ।
ಮಧುರ ಮುರಲಿ ನಿನಾದದಿಂದ ಮೋಹಿಪ್ಪ ॥
ಮೌನಿಗಳ ಮಾನಸಗಳಲ್ಲಿ । ಸಸ ಸಾನಿಸಾನಿ ನಿಸನಿ ।
ನಿಸನಿ ಸಾಸನಿನಿ ಸರಿಗರಿ ಮಗಗರಿಸ ನಿಧನಿಧ ನಿಧಪಮ ॥

ಧಿಕ್ಕತಾ ಧಿಕ್ಕತಾ ಧಿಮಿ ಧಿಮಿಕಿತಾ
ಧಿಮಿಕಿತಾ ಗಿಕಿಟ ತೋಂ ।
ಗಿಕಿಟ ತೋಂ ಗಿದಿಗದಿಗ ಥೈಯಾ ಥೈಯಾ ॥

ಈ ಪರಿ ನಂದನಂಗಳದಲ್ಲಿ ಕುಣಿಕುಣಿದಾಡುವ ಶ್ರೀವಿಠ್ಠಲನ
ಪಾದಾಂಬುಜದ ಭಜನದಿಂದೆ ತರಿಸುವೆನೆಂದು ಪಾಡುವೆನು
ಗೀತ ಪ್ರಬಂಧ ಬರೆಹಗಾರ ರುಕ್ಮಾಂಗದನು ॥

## ೧೭೬

ಪರಮ ಪುರುಷನ ನೆನೆಯಿರೋ । ನರಕ ಭೀತ ಕಳ್ಳ
ನರರೇ ನೀವು ॥ ಶರಣಾಗತಾರ್ಥ ಪಾಲಕನೆಂಬ
ಬಿರುದು ಇವನಿಗಲ್ಲದಿನ್ನೊಬ್ಬಗುಂಟೇ ಪ

ಹರಿಯೆಂದು ಹೃದಯದಲಿ ಸ್ಮರಿಸಿ ಕರಿರಾಜ ಕರವೆತ್ತಿ
ಕರೆಯೆ । ಉರದಲೊರಗಿಹ ಸಿರಿಗೆ
ಸರಿಸಿ । ಸಾರಂಗರಿಯ ಧರಿಸಿ
ಗರುಡನ ಮರೆತು । ಬರಿ ಗಾಲಿಲೆ ಬರುವಾ ೧

ಮಂಗಳನು ಜರಿದು ಜಗವು ಕರುಣವಿಲ್ಲದೆ ।
ಕರಿಣಿಗಳುದಕದ ಹೊಲಸು ಹೇಸಿಕೆಗೆ ।

ಬೇಸರಗೊಳ್ಳದೆ ಬಂದವನ ಪುಷ್ಕರವೆತ್ತಿ ।
ಚಕ್ರದಿ ನಕ್ರನ ಮುಖ ಕಡಿವ ೨

ಮರಣಕ್ಯಾಕಂಜಿದೆಂತೆಂದು ಕರಿಯ । ಕಿರಿ ಬೆವರೊರಸಿ
ವರಿಸಿ ಕರದಿ ಸುರರು ಕಿನ್ನರರು ಬೆರಗು ಬೀರುತಲಿರಲು
ವರ ಚತುರ್ಭುಜ ರುಕ್ಮ ವಸನಗಳು ಕೊಡುವ ೩

## ೧೭೭

ಕಂಡ ದೈವಕ್ಕೆ ಕಂಗೆಟ್ಟು ಕೈ ಮುಗಿದು ।
ದಣಿದಿಯಾತಕೋ ಪ

ದಂಡವನು ಪಿಡಿದು ಮಡದಿ ಮಾರ್ಗವ ಮೆಟ್ಟಿ ।
ದಂಡಕಾರಣ್ಯದಿ ಚರಿಸುತ ಮುನಿಗಳ ಬಿನ್ನಪದಿಂದ ।
ದಂಡಕೋಣದ ಖಂಡಿಪ । ಚಂಡಕಿರಣ ಕುಲತಿಲಕನ
ಸೇರಿ ಬದುಕುವ ಶರಧಿ ಗರ್ವ ಪರಿಹರನ
ಸೇರಿ ಹೋದ ದಿವಿಜರ ಬಿಡಿಸಿ ಸಿರಿಯಿತ್ತು ಸಲಹಿದಾತನ ೧

ಮರಳು ಭಾವಕೆ ಮೆಚ್ಚಿ ತಾಂ ಶಬರಿಯ ಗುಡಿಸಲನೈದು ।
ಕಿರುಳ ಬೋರೆ ಹಣ್ಣು ಮೆದ್ದು ಪರಮ ಕರುಣದಿ ।
ಸರಳಾದ ವಿಮಾನದೊಳು ಕುಳ್ಳಿರಿಸಿ ಸುರರು ಪೊಗಳಲು ।
ಹುರುಳಿಲ್ಲದ ಭವವನಳಿದು ಪರಮ ಪದವಿಯನಿತ್ತನ ೨

ರಕ್ಕಸರರಸನ ಮನಿಯ ಪೊಕ್ಕು ಶಿಖಿಯನಿಕ್ಕಿ ।
ಶಿಖರವ ಮುಕ್ಕು ಮಾಡಿ ಬಂದ ಪವನ ತನಯಗೆ ಮೆಚ್ಚಿ ।
ತವಕದ ಜನ ಪದವ ಕೊಟ್ಟು ಮೊರೆಹೊಕ್ಕ ವೈರಿ ತಮ್ಮಗೆ ।
ರುಕ್ಮನಗರ ಧಾರೆಯೆರೆದ ಶ್ರೀ ರಾಮಚಂದ್ರನ ೩

## ೧೭೮

ಮದನನಯ್ಯಾ ಮೋಹನ್ನರಾಯಾ ನೀ ಬಾರೋ ।
ಹದನದಿಂದ ಹೇಳಿದಳು ಮದಗಜಗಾಮಿನಿ ಪ

ಕಾಣದೆ ನಿಲ್ಲಲಾರಳು । ಕನಸನಾದರೂ ಕಾಣಳು ।
ಗಾಢ ನಿದ್ರೆಯನರಿಯಳು । ಬೆಳಗಾದರೂ ಮರೆಯಳು ೧

ನಿನ್ನ ಮೊನ್ನ ಬರದೆ ಹೋಗಿ । ಭಿನ್ನನುಸರದೆ ಬೆರಗಿ ।
ಸೊನ್ನೆಗಳ ಮಿತವೆಂದು । ಎನ್ನ ಕೂಡನಾಡಿದಳು ೨

ಆವ ಮೋಹದ ಮಡದಿ । ನಿನ್ನಗಲಿಸಿದ್ದಾಳು ।
ರುಕ್ಮಭೂಷಾ ಆವಳಾಣೆಗಳ । ನಿನಗೆ ಹಾಕಿ ಹಿಡಿದಾಳು ೩

## ೧೭೯

ರಂಗ ನಿನ್ನ ಸಂಗ ಸೌಖ್ಯಕಾಗಿ ಕುರಂಗ ಲೋಚನೆಯು ತಾನು
ಭಂಗ ಬಡುವಳಂತರಂಗದಲ್ಲಿ ನಿನ್ನ ಅಂಗ
ತಂದು ತೋರೈ ಪ

ಮಸೆದ ಅಂಬುಗಳ ಮಿಸುನಿ ಬಣ್ಣದ ಮಲ್ಲಿಗಿ
ಎಸೆವನು ಮನಸಿಜನು । ಕುಸುಮ ಗಂಧಿಯು ತಾನು
ಹಸುಮಗಳಲ್ಲವೆ ಮೊಸತಾಪ ಕಾಯಲಿಲ್ಲವೆ ೧

ಕನ್ನೈದಿಲೆ ಸೌವಿಸು ಕಣ್ಣುಗಳಿಂದ ನಿನ್ನರ್ಚಿಸುವೆ ತವಕದಿ ।
ತನ್ನಾದ ಬೊಂಬೆ ತಾ ಎನ್ನ ನಿಮ್ಮ ಬಳಿಯಲಿ
ಮನ್ನಿಸಿ ಕಳುಹಿದಳೈ ೨

ಮುನಿದಗಲಿರುವದು ಮುನಿಜನ ವಂದ್ಯಗೆ ಮುನಿಗಳೊಪ್ಪರೀ ಮಾತನು
ಕನಸಿನೊಳವಳ ಕೂಡ ಅನುಭವಿಸುವಾತಂಗೆ
ಜನದ ನಾಚಿಕೆ ಯಾತಕ್ಕೆ ೩

ಅಂಚಗಮನಿ ತಾ ಮಿಂಚು ಮಂಚವ ಕಂಡು
ಸಂಚಿತವನು ನೆನೆವಳ ವಂಚನೆಯ ಬಿಟ್ಟು
ಮುಚ್ಚಾವಳ ಕೂಡ್ಯೆ ನೀ ಕೆಂಚಿಯರಸರೊಲ್ಲದು ೪

ಇಂದು ಮುಖಿಯು ತಾ ಕುಂದಿ । ಕುಂದದಳರವಿಂದ
ಸರಳ ತಾಪದಿ । ಮಂದರ ಧರನೀಗ ಬಂದು
ಸಂಮಿಸುವದು ರುಕ್ಮಕಂದನ ಸೊಲ್ಲಿಗೆ ೫

## ೧೮೦

ಅಂಗನೆ । ನಮ್ಮ ರಂಗನೆ ।
ಮುನಿದನ್ಯಾತಕೆ ಪ್ರಾಣಲಿಂಗನೆ ಪ

ನಿಜವಾದ ವಾಜಿಯ ಮಾಜುತ ಪೇಳಲು ।
ಸೋಜಿಗ ಮಾಡಲು ಮಂಗನೇನೆ ? ೧

ಕೊಳಲನೂದಲು ಬಳಲದೆ ಮನವಿಟ್ಟು ।
ಕೇಳಲು ಮರುಳ ಕುರಂಗನೇನೆ ? ೨

ಬಿಡದೆ ರಮಣಿಯನ್ನು ಎಡದಲ್ಲಿ ಬಿಡುವನು ।
ಮಡದಿ ಮಾರ್ಗದೊಳು ಹಂಗವೇನೆ ? ೩

ಕೈಯಲ್ಲಿ ನೆರೆಯದೆ ಮೈಯಲ್ಲಿ ತೋರದೆ ।
ಸುಯ್ಯಲು ಬಿಡಲು ಭುಜಂಗನೇನೆ ? ೪

ತಕ್ಕಾದ ನುಡಿಯನು ರುಕ್ಮೇಶನಾಡದೆ ।
ಅಕ್ಕ ಮಿಕ್ಕದ ವಿಹಂಗನೇನೆ ? ೫

## ೧೮೧

ದುರಿತಭಂಜನ ನರಹರಿಯೆ ।
ಪರಿಪರಿಯಿಂದ ಸಲಹು ಶ್ರೀವೈಕುಂಠ ದೊರೆಯೆ ಪ

ನಿನ್ನ ದಾಸರ ದಾಸ ನಾನು ।
ಎನ್ನವರು ದಾಸರ ದಾಸರಲ್ಲೇನು ॥
ಇನ್ನು ಒದಗದೆ ಇಹುದೇನು ।
ಉನ್ನತವಾದ ಬಿರುದಂಗಳ್ನಿನಗಿಲ್ಲವೇನು ? ೧

ತೊತ್ತು ಮೆರಿಸಿಕೊಂಡವನಲ್ಲ ।
ಹೆತ್ತವರ ಭಾವಗಳನೆಲ್ಲ ಮರೆವನಲ್ಲ ॥
ಒತ್ತಿ ಆಪತ್ತವು ಬರಲು । ಪೊತ್ತವರಿಗೆ
ಮೊರೆಯಿಡೆ ಕಡೆಗೆ ಬಿಡುವನಲ್ಲ ೨

ಬರುತಿಹುದು ಸಂಕಟವೆಂದು ।
ಹಿರಿಯರು ನಮ್ಮನೆಲ್ಲವನು ಮರೆದರಂದು ॥
ಮರೆಯದೆ ರುಕ್ಮಗಿನ್ನಿದು ।
ಮರೆ ಮಾಡುವ ಪೀತಾಂಬರದಿಂದ ಬಂದು ೩

## ೧೮೨

ಇನ್ನೂ ನೆಲೆಯ ನೋಡುವರೆ । ಮುನ್ನ ಮಾಡಿದ್ದಾಡುವರೇ ॥
ಉನ್ನತ ಮಹಿಮ ನಿನ್ನ ನಂಬಿದವರನು ಕಾಡುವರೇ ಪ

ಎತ್ತ ನೋಡಲು ಕತ್ತಲಿ । ಒತ್ತಿ ಕವಿಯಿತು ಸುತ್ತಲಿ ।
ಇತ್ತ ಬಾಯೆಂದು ಕರೆದಭಯ ಕರವ ನೀಡುತ ನೋಡುತಲಿ ೧

ರಾಸಿ ರೊಕ್ಕದಾಶೆಗಾಗಿ । ಘಾಸಿ ಆದೆ ಕಾಸಿಗಾಗಿ ।
ದಾಸ ಪಾಲಕ ಲಕ್ಷ್ಮೀಶ ತಪ್ಪದಿರೋ ಭಾಷೆಗಾಗಿ ೨

ಮನ್ನಿಸೆನ್ನ ಮಾತು ಹರಿಯೇ । ಇನ್ನು ಮಾತೊಂದು
ನಾನರಿಯೆ । ಬೆನ್ನು ಬಿದ್ದವರ ಕಾಯೋ
ರುಕ್ಮೇಶ ನಾರಾಯಣ ದೊರೆಯೇ ೩

## ೧೮೩

ನಾಳಿಗಿಲ್ಲವೆಂದು ವ್ಯರ್ಥ ಬಳಲ ಬೇಡಿರೋ ।
ಕಾಲ ಬೆಳಗು ನೆಚ್ಚಿ ಕೇಡು । ತಿಳಿದು ನೋಡಿರೋ ಪ

ಅಂದಿಗಿದ್ದವರಿಗೆ ಸಾವು । ಇಂದಿಗಿದ್ದವರಿಗೆ ಸಾವು ।
ಇಂದಿರೇಶನ ಭಕುತರೆಂದೆಂದಿಗೆ ಸಾಯರೋ ೧

ಆರಿಗಾರು ಕೊಡುವರಲ್ಲ । ಮೋರೆ ನೋಡಿ ನಗುವರಲ್ಲ ।
ಹರಿಗೆ ನಂಬಿದವರೇ ಪರಮ ಧೀರ ಧೂರ್ತರೋ ೨

ಹೆತ್ತ ತಾಯಿ ಗರ್ಭದಲ್ಲಿ । ಹತ್ತು ತಿಂಗಳನ್ನಪಾನ– ।
ವಿತ್ತ ರುಕ್ಮಭೂಷಗೇತಕ್ಕೆ ಮರೆತಿರೋ ೩

## ೧೮೪

ಹವಣಿಕಿಲಿ ನೀ ಮಾಡು ಸುವಿಚಾರ ಸಾಧನ ಪ

ಮಾಡಿ ನಿನ್ನ ಕಡಿ ಮೋಹ ಬೇಡಿ ಘನ
ಗೂಡನ ನಳಿವಗುಡಿ ಸರ್ಕನೆ ॥
ಪರಿಪರಿಯ ಜನ್ಮಗಳನು ಧರಿಸಿ ಬಟ್ಟೆ ಬಹುಕ್ಲೇಶವನು
ಪರಸಿ ಕುವರನ ಕರುಣಾ..........
ನಿನ್ನ ನೀನರಿತುಕೋ ...........

..................................

.......................................

ಶ್ವೇತಾ ವಿಮೋರ್ಭಿತಕಿನ್ನು
ನಿದ್ರಿತ ಕಿಮರ ಮಾತಾ
ಭೂಮಿ ನೀ ಪತಿತ ।
ರುಕ್ಮವಿಭೂಷಣ ರಹಿತ
ಶಾಂತಾ ದಾಂತವಿವಸ್ವಾಂತ
ಬೌದ್ಧೇಯ ಮುನಿಕಾಂತ ॥

## ೧೮೫

ಎಂದೆಂದಿಗೂ ಕುಂದದೆ ಸಲಹು ಎನ್ನ ಪ

ಮಂದರಧರಸುರ ನರ ಹರಿಯೇ
ಇಂದಿರೆಯರಸರವಿಂದ ಲೋಚನ
ಮಂದನು ನಾನೆಂದರಿಯೆ ಅ.ಪ

ಶಿರಿಗರುವದ ಭರದಿಂದ ಬರಸಿ ।
ಅನ್ಯರೊಳಿರಲು ಬಲು ನಾ ಚರಿಸಿ ।
ಶಿರಿಕರ ಕರಿವರ ವರದನ ವಿರುದ್ಧವ ।
ನಿರುವರ ನೆರೆಯಲಿ ಮೆರಿಸಿ ೧

ಕರುಣಾಘನ ಕರುಣಾಲಯ ವರ್ಣ ಸು – ।
ಪರ್ಣಯಾನ ಯದುಕುಲ ಮಣಿಯೇ ॥
ಶರಣಾಗತ ಪರಿಪಾಲಿಪನೆಂದು ।
ಪರಿಪರಿ ಪಾಡುತ ನಾ ದಣಿಯೆ ೨

ಬೇರಾಗಿರುವಾರರಿಗಳನಾರಿಸಿ ತರಿಸಿ ।
ಬಿರುಸುತನದಲಿ ಬಿಡಿಸಿ ॥

ನಾರಾಯಣ ಭವ ಭಯ ಮುರಿವದುಚಿತ ।
ಮರೆಯದೆ ರುಕ್ಮನ ಭವ ಬಿಡಿಸಿ ೩

## ೧೮೬

ಕಾಲ ಕರ್ಮ ಕಾಟಿಗಾಗಿ । ಮೇಲುಗಿರಿರಾಯ ನಿನ್ನ ॥
ಕಾಲಿಗೆನ್ನ ಶಿರವನಿಟ್ಟೆ । ಸಾಲ ಬೇಡುವವನಂತೆ ಪ

ದಡವ ಸೇರಿಸೆನ್ನ ದೈನ್ಯ । ನುಡುಗಿ ತಡೆಯದೆ ॥
ಬಡವನೆಂದುದಾಸೀನವ । ಮಾಡಿ ನೋಡದೆ ೧

ಹಲವು ದೇವಂಗಳಿಗೆ ನಾನು । ಹಲುಬಿ
ಬಳಲಿದೆನಯ್ಯ ಸ್ವಾಮಿ ॥ ಫಲವ ಗಾಣದೆ
ನೊಂದು ಬೆಂದು । ತಿಳಿಯದಾದೆ ತಪ್ಪು ಎಂದು ೨

ಪುಂಡಲೀಕ ವರದನಾಗಿ । ಪಾಂಡುರಂಗನೆನಿಸಿಕೊಂಡು ॥
ಗಂಡದೈವ ವೆಂಕಟೇಶ । ಭಂಡು ಮಾಡದೆ ರುಕ್ಮನಾ ೩

## ೧೮೭

ಎನ್ನನ್ನು ನೀ ಮರೆವರೆ । ಮೋಹನ್ನ
ದೈವತರನ್ನ ವಿಠಲರಾಯಾ ಪ

ಚಿನ್ನದಾಸೆಗೆ ತಿರುಗುವೆ । ನಿರಂತರ ನಿನ್ನ ಚರಣಕೆರಗುವೆ
ಮನ್ನಿಸೆನ್ನಯ ಬಿನ್ನಹವನ್ನು ದೇವಾ ೧

ಬಲ್ಲವರಿಗೆ ನಾನರಿಯೆನು ಪ್ರಭುವೆ । ನೀನಲ್ಲದನ್ಯರಿಗೆ
ಕರೆಯೆನು । ಇಲ್ಲಿದೆಲ್ಲ ಒಲ್ಲೆನಿಸೋ ದೇವಾ ೨

ತಂದೆ ತಾಯೆಂದು ನಂಬಿದೆ ರುಕ್ಮೇಶನ ಹೊಂದಿ ಮುದದಿಂದ
ತುಂಬಿದೆ । ಕಂದನೆಂದು ಬಂದು ಬಿಡಿಸೊ ದೇವಾ ೩

## ೧೮೮

ವೇಳೆಗೊದಗಯ್ಯ । ವೇಳೆ ಬಂದು
ಒದಗಿದೆ । ಪರಿಹರಿಸೊ ನೀ ಪ

ಬಳಗುಳ್ಳಿಭಕುತರು ಬಳಲು ತಿರುವದ ಕಂಡು ।
ಕಳವಳಿಕೆಯಿಲ್ಲದೆ ಕಳೆವರೆ ಕಾಲವ ೧

ಮಳಲು ಹಸಿಯನಗಲಿದಂತೆ ದಾಸರಿಗತಿಶಯವ ।
ದಣಿಸಿದರೆ ಬಳಿಕಾರುಳಿಸುವರೊ ? ೨

ಹಲವ ಹೆತ್ತ ತಾಯಿ ಮೊಲೆ ಹಾಲನುಣಿಸದೆ ।
ನೆಲೆಯ ದೋರಿ ನಿನ್ನಲಿ ನಿಲಿಸಯ್ಯ ರುಕ್ಮನ ೩

## ೧೮೯

ಹರಿಯೇ ಸರ್ವಸಾರವೆಂದು ಸಾರುವರು ।
ತೆರೆದು ಹೇಳಿ ತತ್ತ್ವವನು ತಾರಿಸುವರು ಪ

ಮೊರೆ ಹೊಕ್ಕವರ ಮನದ ಮಲಕು ಬಿಡಿಸುವರು ।
ಹರಿದು ಹೋಗುವವಗೆ ಕರೆದು ಕಡೆಗ್ಹಾಕುವರು ೧

ಧರೆಯೊಳವರೇ ಸಾಧು ಪುರುಷರೆನಿಸುವರು ।
ಸಿರಿಗೆ ಸೆರಗೊಡ್ಡಿ ಸಿರಬಾಗಿ ನಡಿಯದವರು ೨

ಬರಿಯ ತರ್ಕದಿಂದ ಖಂಡಿಸದವರು ।
ಸರಿಗೆ ಬಂದರೆ ಸುಮ್ಮನೆ ಸಹಿಸುವರು ೩

ಕಾಯ ಕದ್ದು ಕರ್ಮಪಾಶ ಕಳೆದವರು ।
ರಾಯ ರಂಕರಿಗೆ ಸರಿ ತಿಳಿದವರು ೪

ಮಾಯದ ಮೂಲವಾದ ಭೇದವಳಿದವರು ।
ಲಯದ ಮನೆಯ ಮೆಟ್ಟಿ ಭಯ ಮೀರಿದವರು ೫

ಅರಿತು ಅರಿಯದವರಂತೆ ತೋರುತಿಹರು ।
ಮರೆತು ಮರವಿಗೆ ತಾವೆ ಮರವಾಗಿಹರು ೬

ಗುರು ರುಕ್ಮಭೂಷಣನಂತ ತೋರಿಸುವರು ।
ತ್ವರಿತದಿ ತಮ್ಮ ನೆಲೆಯ ಕೊಡದವರು ೭

## ೧೯೦

ವಸ್ತು ತಾ ಬೇರೆ ಅದೆ ।
ನಿಜವಸ್ತು ಅರಿತವ ಬಲ್ಲಾ ಪ

ನೀರಲಿ ಮುಳುಗಿ ನೇಮ ಮಾಡುವದಲ್ಲ ।
ಕೈ ಮುಚ್ಚಿ ಮಣಿ ಎಣಿಸುವದಲ್ಲ ॥
ಹೊನ್ನು ಹೆಣ್ಣಿಗೆ ಮೆಚ್ಚಿ ಬಣ್ಣದ ಮಾತಾಡಿ ।
ಚೆನ್ನಿಗ ತನದಿಂದ ತಿರುಗುವದಲ್ಲ ೧

ಮಾನ ಮನ್ನಣೆಗಾಗಿ ಜ್ಞಾನದ ಮಾತುಗಳಾಡಿ ।
ಧ್ಯಾನ ಮೌನವನು ತೋರುವರು ।
ಮನ್ನಣೆಯಾಗದಿರೆ ಛಾನಸತನದಿಂದ ಜನರ ದೂರುವರಲ್ಲ ೨

ಮನವ ಸ್ವಸ್ಥವ ಮಾಡದೆ
ಅನೇಕ ವ್ಯಥೆ ಕೂಡಿ ಕನಕದಾಶೆಗಾಗಿ ಕೆಡಬೇಡ ।
ಬಲ್ಲ ರಾಯರ ಪ್ರಭು ರುಕ್ಮಭೂಷಣ ಕೂಡಿ
ಕ್ಷುಲ್ಲಕ ತನವ ಬಿಟ್ಟು ಸುಖಿಸಿರಯ್ಯ ೩

## ೯೯೧

ನಂದನಂದನನೆ ನಿರಾಮಯಾನಂದ ಚಿದ್ಘನನೆ ಶೌರ್ಯ-
ಮಂಡಣನೆ ಯಮ ದಮ ಶಮನನೆ...ಮದಹಾರನೆ
ನಗ ಯುಗ್ಮ ಮಥನನೆ ನಗವರ ಧರನೆ ನಾಗ
ಫಣಿ ವೀರ ನಟನನೆ ೧

ನೀಲ ಕಂದಲನೆ ನಿರಾಮಯ ತುಂದಿಲನೆ ।
ನೀ ಸೇವಿತ ಸುದಾಮನ ತಂದುಲನೆ ನಿರುಪಮ
ಲೀಲನೆ ನಿರ್ಮಲ ಶೀಲನೆ ನೀಷ । ಗೀರ್ಣಾನಲ
ಕೀಲನೆ ನೇಮಿತ ಕಾಲನೆ । ನೀರಜ ಮಾಲನೆ ನಿಜ
ರುಚಿ ನಿಕೃತ ಮಾಲನೆ ನಿರ್ಜಿತಾಸುರನೆ
ನಿವಾರಿತಾನೇಕರ ಜ್ವರನೆ ನಿಕುಂಜ ಭೂಮಂಡಲೇಶ್ವರನೆ ।
ನಿಃಸಂಸಾರನೆ ನಿರಹಂಕಾರನೆ ನಿರ್ಜರ ಕುಲ ಪರಿವಾರನೆ ।
ನಿಖಿಲಾಧಾರನೆ ನಿಗಮೋದ್ಧಾರನೆ ನಂದ ಸದಾ ರುಕ್ಮಜನೆ ೨

## ೯೯೨

ಕೈಯಲ್ಲಿ ಕಪಾಲ ಪಿಡಿವ ರೋಷದಿ ಬಂದು
ವಿಭೂತಿ ಮೈಯಲಿ ತುಂಬಿ ತಾಂಡುವರೇ ।
ಪ್ರೇತಗಳ ಹುಯ್ಯಲ್ಲಿ ಗೋ ಎಂದು ನಿಡಿದವರೇ
ಸುಯ್ಯಲ್ಲಿ ಸೋಂಕಲಿಸದೆ ಘನದ ಯೋಗದಲಿದ್ದು
ನೋಡ ಬಂದ ಕಂತುನ ನೋಡಿ ಬೂದಿ ಮಾಡುವರೇ ಪ

ಭಿಲ್ಲನಾಗಿ ಕುಲವ ಕಳೆವರೆ ।
ನರನ ಬಲವು ಮಲ್ಲಯುದ್ಧ ಮಾಡಿ ತಿರುವರೆ ।
ಬಲ್ಲಾತನಾಗಿ ಘುಲ್ಲನೇತ್ರಗೆ ರತಿ ಗೆಲುವರೆ ॥
ಸಲ್ಲದಂಗವ ತೋರಿ ನೀ ತಿರುಕನಾಗಿ ತಿರುಗುತ
ಮತ್ತೆಲ್ಲ ಮುನಿಗಳ ಸತಿಯರ ಧರ್ಮವನಳಿವರೆ ೧

ಕಣ್ಣೆಲಿ ಕಿಚ್ಚು ಗರೆವರೆ । ವರೇಣ್ಯನಾಗಿ
ಹೆಣ್ಣಿಗೆಯ ರಂಗ ಮಾರುವರೆ ಶ-
ರಣ್ಯನಾಗಿ ಸಣ್ಣವನ ಶಿರವ ತರುವರೆ ।
ಮಣ್ಣಿನ ಭಂಡಿಯನೇರಿ ಕಲ್ಲಿನ ಬಿಲ್ಲನೇರಿಸಿ ।
ಮುಪ್ಪುರಗಳ ಗೆಲಿದು ಸುಡುಗಾಡ ಸೇರುವರೆ ೨

ಬತ್ತಲೆ ಕುಣಿವುತಲಿರುವರೆ । ಸ್ಮೃತಿ
ಕತ್ತಿನಾಗಿ ಎತ್ತನೇರಿಕೊಂಡು ಮೆರೆವರೆ ।
ಪುಣ್ಯಾತ್ಮನಾಗಿ । ಸತ್ತನೀ ಚರ್ಮವ ಪೊರುವರೆ ।
ಉತ್ತಮ ರುಕ್ಮವರ್ಣದ ಜಡೆಯುಳ್ಳ ಸದಾಶಿವನ ।
ನಂಜಿಗಂಜದೆ ಸವಿಮಾಡಿ ಬಿಗಿಬಿಗಿ ಸುರಿವರೆ ೩

## ೧೯೩

ಭಜಿಸುವರು ಭಾಗ್ಯವಂತರು । ಭಾಗವತರು ಪ

ನಿಲುಕದೆಂದು ನಿಗಮಗಳು ನೆಲೆಗಾಣದೆ ನಿಲ್ಲಲು ।
ಮಲಕೀನ ಮಾತುಗಳಿಂದ ಜರಿದು ಕಲಕಾದ ಕರ್ಮ
ನೀರೆರೆದು ನಳಿನಾಕ್ಷ ವಲ್ಲಭ ನೀನೆಂದರಿತು ೧

ಅಳಿದುಳಿದೆಲ್ಲ ನೋಡುತಲಿ ತಳೆದು ಭವದ ಮೂಲವನು
ಕಳೆದು ಕಾಮಕ್ರೋಧಮದಗಳನು । ಬಳೆಸುತ ಮೈತ್ರಿ-
ಕರುಣಾಗಳನು । ಬಳೆಸುತ ಏಳು ಧರಣಿಗಳನು ೨

ಕಡಲೊಳೊರಗುವ ತೆರೆಯಂತೆ । ಒಡಲೊಳಗೆ ರುಕ್ಮ
ಕಡಗದಂತೆ ನೆಮ್ಮದೆ ಚಣಿಸಿ । ಪಡದ ರೂಪವನು
ಜಡವೆಂದೆನಿಸಿ ಕಡಿಗಾಗದಿರೆಂದು ಜಗವನೆನಿಸಿ ೩

## ೧೯೪

ಜಯಮಂಗಳಂ ಮಹಾ ಶುಭ ಮಂಗಲಂ ।
ಮಂಜುಕರ ಲಾಲಿತ ಕುರಂಗಗೆ ॥
ಮಂಗಲ ಮೌನಿ ಮಾನಸ ಸಂಗಗೆ ।
ಮಂಗಲಂ ಮಂದಿರೀಕೃತ ಶೈಲಶೃಂಗಗೆ
ಮಂಗಲಂ ಮಲ್ಲಿಕಾರ್ಜುನ ಲಿಂಗಗೆ ಪ

ಗರುಡಧ್ವಜಪ್ರಿಯಗೆ ಗಜಕೃತ್ತಿ ವಸನಗೆ ।
ಗಂಗಾ ತರಂಗ ಚಾರು ಕಪರ್ದಿಗೆ ಗುಹ
ಗಣಾಧಿಪ ಗುರುಗೆ । ಗೋರಾಜ ವಾಹನಗೆ ।
ಗಿರಿಜಾಂತರಂಗ ವಾರಿಜಭೃಂಗಗೆ ೧

ಕರ್ಪೂರ ಗೌರಗೆ ಕಲ್ಪಾಂತವೀರಗೆ ।
ಕಾಲಾಗ್ನಿ ಕಿಲಕಾಲಿತ ಮಾರಗೆ ।
ಕಾಕೋಲ ಕಂಧರಗೆ ಕಾಶೀ ವಿಹಾರಗೆ ।
ಕಾಕೋದರಾಭರಣ ಕಮನೀಯಗೆ ೨

ವಿಧು ಶಕಲಾಧಾರಿಗೆ ವಿಶ್ವಹಿತಕಾರಿಗೆ
ವಿಯದಟನ ವಿಕಟ ಪುರ ಸಂಹಾರಿಗೆ ।
ವಿಮಲ ವಿದ್ಯಾನಿಧಿಗೆ ।
ವಿಧಿವಂದ್ಯ ರುಕ್ಮ ಪಾದುಕ ಪಾದಗೆ ೩

ಮಂಗಲ ಮಹಿಮನು ಶೃಂಗಾರ ಮಾಧವ ।
ಮಂಗಳ ಕರತರಂಗನ ।
ಅರಿತತಿ ಭಂಗವ ಬಿಡಿಸುತ
ಕಂಗಳ ಸದೋದಿತ ರುಕ್ಮ ೪

## ೧೯೫

ಮಂಗಳಂ ಜಯ ಮಂಗಳಂ ಜಯ
ರುಕ್ಮ ಕಿರೀಟಿಗೆ ಮಂಗಳಂ ಪ

ಮುರಹರ ರಾಣಿಗೆ । ಸುಖಕರ ವಾಣಿಗೆ ।
ಮುಖರಿತ ವೇಣಿಗೆ ಮಂಗಳಂ ೧

ಕಿಸಲಯ ಪಾಣಿಗೆ । ರಸಲಯ ಜಾಣೆಗೆ ।
ಬಿಸರುಹ ಬಾಣಿಗೆ ಮಂಗಳಂ ೨

ಮಂದರ ಸದನಿಗೆ । ಕುಂದರ ರದನಿಗೆ ।
ಚಂದಿರ ವದನಿಗೆ ಮಂಗಳಂ ೩

ಸುರದರಶ ಮುನಿಗೆ । ಹರಗಿರ ಮುನಿಗೆ ।
ಕರಿವರ ಗಮನಿಗೆ ಮಂಗಳಂ ೪

ಕೃತಮತಿವಶಳಿಗೆ । ಶ್ರುತಿನುತಿ ಯಶಳಿಗೆ ।
ದ್ಯುತಿ ತತಿ ದಿಶಗಳಿಗೆ ಮಂಗಳಂ ೫

# ಅನುಬಂಧಗಳು

೧. ಕಠಿಣ ಶಬ್ದಗಳ ಅರ್ಥ

೨. ಟಿಪ್ಪಣಿಗಳು

೩. ಸಹಾಯಕ ಸಾಹಿತ್ಯ

೪. ಕೀರ್ತನೆಗಳ ಅಕಾರಾದಿ

# ಅನುಬಂಧ – ೧

## ಕಠಿಣ ಶಬ್ದಗಳ ಅರ್ಥ

(ಮ ಅಂದರೆ ಮರಾಠಿ ಶಬ್ದ ಎಂದು ತಿಳಿಯಬೇಕು)

### ಅ

| | |
|---|---|
| ಅಕ್ರಿತ (ಮರಾಠಿ) | – ಆಶ್ಚರ್ಯಕಾರಕ |
| ಅಗ್ಗಳ | – ದೊಡ್ಡವ, ಬಲಶಾಲಿ |
| ಅಘ | – ಪಾಪ |
| ಅಚಲಜಾವರ | – ಪಾರ್ವತಿಪತಿ, ಶಂಕರ |
| ಅಚಾಟ(ಮ) | – ಪ್ರಚಂಡ |
| ಅಂಚೆಗಮನಿ | – ಹಂಸದಂತೆ ನಡೆಯುವವಳು |
| ಅಂಚೆದುಪ್ಪಳ | – ಹಂಸದ ಮೆತ್ತನೆಯ ಕೂದಲು |
| ಅಡುವು | – ತಕ್ಕುದಾಗು, ಯೋಗ್ಯವೆನಿಸು |
| ಅತಿಕಾಯ | – ರಾವಣನ ಒಬ್ಬ ಮಗ |
| ಅಧಿಷ್ಠಾನ | – ಟಿಪ್ಪಣಿ ನೋಡಿ |
| ಅಧ್ಯಾರೋಪ | – ಟಿಪ್ಪಣಿ ನೋಡಿ |
| ಅನಾಹತನಾದ | – ಟಿಪ್ಪಣಿ ನೋಡಿ |
| ಅನುವರ | – ಕಾಳಗ |
| ಅಂತರನಾದೆ (ಮ) | – ದೂರಾದೆ |
| ಅಂದಣ | – ಪಲ್ಲಕ್ಕಿ |
| ಅನಂತರ | – ಭವಿಷ್ಯದಲ್ಲಿ |
| ಅಪೂಪ | – ಪಕ್ವಾನ್ನ |
| ಅಬ್ಬರಿಸು | – ಆರ್ಭಟಿಸು |
| ಅರಸು | – ಹುಡುಕು |
| ಅರಿ | – ನಾಶಮಾಡು |
| ಅವಚಿಕೊಳು | – ಒತ್ತಿ ಅಪ್ಪಿಕೊಳ್ಳು |
| ಅವಲೋಕನ – ಕೂರ್ಮದೃಷ್ಟಿ | ಆಮೆಯು ಕೇವಲ ತನ್ನ ದೃಷ್ಟಿಯಿಂದಲೇ ತನ್ನ ಮರಿಗಳನ್ನು ಪೋಷಣೆ ಮಾಡುತ್ತದೆಂದು ನಂಬಿಕೆ |

ಅಷ್ಟಕಂಬ – ಅಷ್ಟತನು (ಭೂಮಿ, ಅಪ್, ತೇಜ, ವಾಯು, ಆಕಾಶ, ಮನ, ಬುದ್ಧಿ, ಅಹಂಕಾರ)

ಅಷ್ಟತತ್ವ – ಅಷ್ಟಕಂಬ ನೋಡಿ

ಅಷ್ಟಸಿದ್ಧಿ – ಅಣಿಮಾ, ಲಘಿಮಾ, ಮಹಿಮಾ, ಪ್ರಾಪ್ತಿ, ಪ್ರಾಕಾಮ್ಯ, ವಶಿತ್ವ, ಕಾಮಾವಸಾಯಿತಾ, ಈಶಿತ್ವ.

ಅಸಿತ ಪ್ರಭ – ವಿಷ್ಣು

ಅಸಿಜ್ಞಪ್ತಿ – ಟಿಪ್ಪಣಿ ನೋಡಿ

ಅಸುರಾಪುರ – ಲಂಕೆ

## ಆ

ಆಗಮ – ಟಿಪ್ಪಣಿ ನೋಡಿ

ಆತ್ತ – ಕೈಕೊಂಡ, ಸ್ವೀಕರಿಸಿದ

ಆನತ – ನಮಸ್ಕರಿಸಿದ

ಆರಕೆ ಆರಿಟ್ಟು – ಟಿಪ್ಪಣಿ ನೋಡಿ

ಆರು ಕಟ್ಟಿನ್ನು – ಸಾಂಖ್ಯ, ಯೋಗ, ನ್ಯಾಯ, ವೈಶೇಷಿಕ, ಪೂರ್ವ–ಮೀಮಾಂಸಾ, ಉತ್ತರ–ಮೀಮಾಂಸಾ

ಆರುಕೋಣ – ಷಡ್ರಿಪು ನೋಡಿ

ಆರುಚಕ್ರ – ಷಟ್‌ಚಕ್ರ ಟಿಪ್ಪಣಿ ನೋಡಿ

ಆರು ನೆಲೆ – ಷಟ್‌ಚಕ್ರ ಟಿಪ್ಪಣಿ ನೋಡಿ

ಆರು ಮಂದಿ ನಾದಿನಿಯರು – ಷಡ್ರಿಪು ನೋಡಿ

ಆರು ಮನಿ – ಷಟ್ ಚಕ್ರ ಟಿಪ್ಪಣಿ ನೋಡಿ

ಆರೆರಡಾನೆ – ಅಷ್ಟಮದ (ದ್ರವ್ಯ,ಯೌವನ, ಸ್ತ್ರೀ, ವಿದ್ಯಾ, ಕುಲ, ರೂಪ, ಉದ್ಯೋಗ, ಅನ್ನ)

ಆರೊಳಗೆ ಬಿದ್ದು – ಷಡ್ರಿಪುಗಳಲ್ಲಿ ಬಿದ್ದು ; ಷಡ್ರಿಪು ನೋಡಿ

ಆಲಿ – ಕಣ್ಣು ಗುಡ್ಡೆ, ಸಮೂಹ

ಆವುಗೆ – ಪಾದುಕೆ

ಆಸಾರ – ವೈರಿಗಳನ್ನು ಮುತ್ತುವದು

ಆಳುವಾಡು ತಿನ್ನುವ ಮತ – ಕುಲಕರಣಿಯು ಉದ್ಯೋಗ

## ಇ

ಇಂದ್ರಾರತಿ – ಇಂದ್ರನನ್ನು ತಡೆಯುವವನು, ಇಂದ್ರಜಿತ ಇನಸಖ

ಭವಾದಿಕರು – ಬ್ರಹ್ಮಾದಿಕರು

ಇನಿತನು – ಮನೋಹರ, ಮಹತ್ವದ ಶರೀರ

ಇಪ್ಪತ್ತೈದು ತತ್ವ – ೫ಜ್ಞಾನೇಂದ್ರಿಯ, ೫ಕರ್ಮೇಂದ್ರಿಯ ೫ ತನ್ಮಾತ್ರೆ, ೫ ಮಹಾಭೂತ, ಪ್ರಕೃತಿ, ಮಹತ್, ಬುದ್ಧಿ, ಮನ, ಅಹಂಕಾರ

ಇಬ್ಬರು – ದ್ವೈತಬುದ್ಧಿ

ಇಳ್ಳಿ (ಇಳ್) – ಎಳಕೊಳ್ಳು

## ಈ

ಈಡಾಡು – ತೂರಿ ಒಗೆ, ಬೀಸಾಡು

## ಉ

ಉಚಂಬಿಳಿಸು (ಮ) – ಉಕ್ಕೇರು

ಉದವರು – ಜಯಘೋಷ ಮಾಡುವವರು

ಉದಿಸು – ಹುಟ್ಟು

ಉನ್ಮನಿ – ಪರಮಾತ್ಮನನ್ನು ಕಾಣಬೇಕೆಂದು ಅತ್ಯಂತ ಆತುರ ನಿರುವ ಜೀವಾತ್ಮನ ತಲ್ಲೀನ ಅವಸ್ಥೆ ; ಕೇವಲ ಪರಮಾನಂದ ಸ್ಥಿತಿ

ಉಲಗಡೆ (ಮ) – ಸ್ಪಷ್ಟತೆ

## ಎ

ಎಣೆ – ಸರಿ

ಎದ್ದು – ತೋಯಿಸು

ಎರಗು – ನಮಸ್ಕಾರ ಮಾಡು

ಎರಡಿನ್ನು ಸರಿಯಾಗೊ ತನಕ – ಪಾಪ ಪುಣ್ಯ ಎರಡೂ ಸರಿಯಾದ ಮೇಲೆಯೇ ನರಜನ್ಮ ಪ್ರಾಪ್ತಿ ಎಂದು ನಂಬಿಕೆ

ಎರಡು – ಭೇದಬುದ್ಧಿ

ಎರವು – ಅಪಾಯ

ಎರೆ – ಬೇಡು, ಪ್ರಾರ್ಥಿಸು

ಎಸೆ – ಬಾಣ ಬಿಡು, ಹೊಡೆ

## ಏ

ಏಕಪಂತರ
ಮನೆಯೊಳು - ಟಿಪ್ಪಣಿ ನೋಡಿ
ಏಳಲ - ನಿಂದೆ

## ಐ

ಐದಕ್ಕೈದು
ಕೂಡಿಬಂದು - ಟಿಪ್ಪಣಿ ನೋಡಿ
ಐದು - ಹೋಗು

## ಒ

ಒಡಗೂಡು - ಜೊತೆಯಾಗು, ಕೂಡಿಕೊಳ್ಳು
ಒಡ್ಡೋಲಗ - ತುಂಬಿದ ರಾಜಸಭೆ
ಒಬ್ಬ - ಒಂದೇ ಒಂದಾದ ಬ್ರಹ್ಮತತ್ತ್ವ
ಒಂಬತ್ತು ಛಿದ್ರ - ಟಿಪ್ಪಣಿ ನೋಡಿ
ಒಯ್ಯನೆ - ನೆಟ್ಟಗೆ, ವಿಚಾರ ಪೂರ್ವಕ
ಒರಲು - ಗೋಳಿಡು
ಒಲಬಲಗುಡು - ಅತಿಪ್ರೀತಿಮಾಡು

## ಔ

ಔಟಪೀಠ - ಷಟ್‌ಚಕ್ರ ಭೇದನ ಟಿಪ್ಪಣಿ ನೋಡಿ

## ಕ

ಕಡವಿ (ಕಡವು) - ಹೊಳೆ ದಾಟುವ ಸ್ಥಳ
ಕದ್ದಿಕಾರ - ಶೂರ
ಕಂಥೆ - ಹರಕುಮುರುಕು ಬಟ್ಟೆ
ಕಂದ - ಷಣ್ಮುಖ
ಕಂಧರ - ಕುತ್ತಿಗೆ
ಕಪರ್ದಿ - ಜಟಾಜೂಟ ವುಳ್ಳವ, ಶಿವ
ಕಪಾಲ - ತಲೆ ಬುರುಡೆ
ಕಬಂಧ - ತಲೆಯಿಲ್ಲದ ಶರೀರದ ಭಾಗ
ಕಮಠ - ಕೂರ್ಮ
ಕಮಲಜ - ಬ್ರಹ್ಮ
ಕರುಳು - ಮರುಕ, ಪ್ರೀತಿ
ಕಲಕಲ - ಗದ್ದಲ, ಚೀರಾಟ
ಕಲಕು - ಕೆಸರು
ಕಲಾಪ - ಜಗಳ
ಕವಿ - ಶುಕ್ರ
ಕಳೆ - ಸ್ವರೂಪ, ತೇಜ
ಕಾಕೋದರ - ಹಾವು
ಕಾಕೋ-
ದರಾಳಿಪತಿ - ಶೇಷ
ಕಾಕೋಲ-
ಕಂಧರ - ಸರ್ಪ ಅಥವಾ

|  |  |  |
|---|---|---|
|  |  | ವಿಷವನ್ನು ಧರಿಸಿದವ, ಶಿವ |
| ಕಾಪುರುಷ | – | ಕೆಟ್ಟ ಮನುಷ್ಯ, ಹೇಡಿ |
| ಕಾಮಲ | – | ಇಚ್ಛೆಯುಳ್ಳ |
| ಕಾಲಕರ್ಮ | – | ಟಿಪ್ಪಣಿ ನೋಡಿ |
| ಕಾಲು | – | ಮೂಲಾಧಾರ ಚಕ್ರ |
| ಕೀರ | – | ಗಿಳಿ |
| ಕೀಶ | – | ಹನುಮಂತನ ಒಡೆತನವುಳ್ಳ ಮಂಗಗಳ ಗುಂಪು |
| ಕುಂದ | – | ಮಲ್ಲಿಗೆ ಹೂ |
| ಕುಂಬಿನಿ | – | ನೆಲ, ಭೂಮಿ |
| ಕುಂಭನಿಕುಂಭ | – | ಕುಂಭಕರ್ಣನ ಮಕ್ಕಳು |
| ಕುಂಭಶ್ರವಣ | – | ರಾವಣನ ಒಬ್ಬ ಮಗ |
| ಕೂಳು | – | ಅನ್ನ, ಪಿಂಡದ ಆಹಾರ |
| ಕೇರು | – | ಸ್ವಚ್ಛಮಾಡು |
| ಕೇಸರ | – | ಸಿಂಹದ ಕುತ್ತಿಗೆಯ ಮೇಲಿನ ಕೂದಲು |
| ಕೊಂಕ | – | ಕಪಟ, ಕೀಳು, ಅಸತ್ಯ |
| ಕೋಟಲೆ | – | ತೊಂದರೆ |
| ಕೋಳ | – | ಬಂಧನ |

## ಖ

|  |  |  |
|---|---|---|
| ಖಂಮಗೆ | – | (ಮ.ಖಮಂಗ) ರುಚಿಕರ |
| ಖರೆ (ಮ) | – | ಸತ್ಯ |
| ಖುಲಾಸಾ (ಮ) | – | ಸ್ಪಷ್ಟೀಕರಣ |
| ಖೂನ | – | ಗುರುತು |
| ಖೈರು | – | ಒಳ್ಳೆಯದು |
| ಖೌಟ (ಮ. ಖವಟ) | – | ಕೆಟ್ಟ ವಾಸನೆಯ |

## ಗ

|  |  |  |
|---|---|---|
| ಗಡ | – | ಕಂಡೆಯಾ, ಸಹಜವಾಗಿ |
| ಗಂಧಮಾದನ | – | ಒಂದು ಪರ್ವತದ ಹೆಸರು, ಒಂದು ಕಪಿಯ ಹೆಸರು |
| ಗರುಡಾಂಕ | – | ಗರುಡಧ್ವಜ, ವಿಷ್ಣು |
| ಗರ್ಕ | – | ಮಗ್ನ |
| ಗಳ | – | ಕೊರಳು |
| ಗಾಢ | – | ಸುಷುಪ್ತಿ |
| ಗಾಂಡೂ | – | ಬುದ್ಧಿಯಿಲ್ಲದ ಟೊಣಪ |
| ಗಾಧಿ | – | ವಿಶ್ವಾಮಿತ್ರ ಋಷಿಯ ತಂದೆ |
| ಗಾಹು | – | ಮೋಸಗಾರಿಕೆ |
| ಗಾಳಿ | – | ಪಿಶಾಚಿ |

ಗಿರು - ತಿರುಗು, ಯೋಚಿಸು

ಗುಮಾನ - ಸೊಕ್ಕು, ಅಹಂಕಾರ

ಗೂಳಿ - ತಿಂದು ತಿರುಗುವ ಹೋರಿ, ದೇವರಿಗೆ ಬಿಟ್ಟ ಹೋರಿ

ಗೈಯಾಳಿತನ - ನಿರುದ್ಯೋಗಿತನ

ಗೊಗ್ಗಯ್ಯ - ಎಳೆ ಮಕ್ಕಳನ್ನು ಅಂಜಿಸುವ ಒಂದು ಆಕೃತಿ

ಗೋಲ್ಲಾಟ - ಷಟ್‌ಚಕ್ರಭೇದನ ಟಿಪ್ಪಣಿ ನೋಡಿ

## ಘ

ಘಟ - ದೇಹ

ಘಸಣಿ - ಚಿಂತೆ

ಘಾಸಿ ಆದೆ - ಕಷ್ಟಪಟ್ಟೆ

ಘಾ(ಗಾ)ಳಿಜ - ಹನುಮಂತ

ಘೇರಿ(ಮ) - ಮೂರ್ಛೆ

## ಚ

ಚಣಕ (ಮ, ಚಣೆ) - ಕಡಲೆ

ಚಣೆಸಿ - ತಿಳಿದು, ಬಲ್ಲವನಾಗಿ, ನಿಪುಣನಾಗಿ

ಚರ್ಯೆ - ನಡೆತೆ, ಆಚಾರ

ಚ(ಚೌ)ಹಡಿ (ಚಾಡಿ) - ನಿಂದೆ

ಚುದಕ - ನಿಂದೆ

ಚೂಕರ (ಮ. ಚುಕಾರ) - ಕೆಲಸ ತಪ್ಪಿಸುವವನು

ಚೂಡ - ನವಿಲಿನ ಶಿಖೆ

ಚೂಳಯ - ಬೈತಲೆಯ ಮುತ್ತಿನ ತೊಡವು

ಚೂಳಿ - ಆರಂಭ, ಸೈನ್ಯದ ಮುಂಭಾಗ

ಚೋದ್ಯ - ಆಶ್ಚರ್ಯ

## ಛ

ಛಂದ - ಆನಂದ, ಸಂತೋಷ

ಛಲ - ಹಟಮಾರಿತನ, ದುರಾಗ್ರಹ, ದುಷ್ಟತನ

ಛವಿ - ಕಾಂತಿ, ಪ್ರಕಾಶ

ಛಾನ (ಮ) - ಡೌಲು

ಛಾನಸತನ - ಬಾಹ್ಯಾಡಂಬರ

ಛುಲಕ - ಕ್ಷುಲ್ಲಕ

ಛೇಕರ - ಧೂರ್ತತನ, ಜಾಣತನ

## ಜ

ಜಗಜನನಕೆ

ಜನಕ – ಬ್ರಹ್ಮ

ಜನಕಂಗೆ–

ಜನಕ – ವಿಷ್ಣು

ಜವ – ಯಮ

ಜಾಡೆ – ಹಾಸಿಗೆ

ಜಾಯಪತಿ – ಸತಿ ಪತಿ

ಜುಣುಗು – ಕುಗ್ಗು

ಜೋತೆ(ಮ) – ಮೇಲು ಮಂಟಪ, ಪೀಠ

## ಝ

ಝುಕ್ಕಿಸು – ಅನಿವಾರ್ಯವಾಗಿ ಮಾಡು, ಸೋಲಿಸು, ಕೀಳಾಗು

ಝಾಡನೆಯ(ಮ) – ಎಲ್ಲರನ್ನೂ; ಯಾರನ್ನೂ ಬಿಡದೆ

ಝೋಲಿಸು – ಹಿಡಿದುಕೊಳ್ಳು

## ಟ

ಟಂಕ – ಮುದ್ರೆ ಹಾಕಿಸುವ ನಾಣ್ಯ, ಬೆಳ್ಳಿ ಇಲ್ಲವೆ ಹಿತ್ತಾಳಿಯ ಬೆಸುಗೆ

ಟಾಹಬಡೆ(ಮ)– ದೈನ್ಯದಿಂದ ಒದರು

ಟಾಳಿ (ಮ) – ಚಪ್ಪಾಳಿ

ಟೂಕ (ಮ) – ಅತಿ ಲಕ್ಷಪೂರ್ವಕ

ಟೇಕ (ಮ) – ಗುಡ್ಡ

ಟೌಕರ (ಮ) – ದಿಟ್ಟಿಸಿ ನೋಡು

## ಠ

ಠಮಕ (ಮ) – ಡೌಲು

ಠವಲಾ (ಮ) – ಬೀಸುವ ಕಲ್ಲಿನ ಮಧ್ಯದಲ್ಲಿರುವ ಗೂಟ

ಠೇವು (ಮ) – ನಿಧಿ

ಠೋಕರ (ಮ) – ಎಡವುವದು

ಠೌಳಿ – ವಂಚನೆ, ಮೋಸ

## ಡ

ಡುಲಕಿಸು (ಮ)– ತೂಕಡಿಸು

ಡೇಗ (ಮ) – ಆಧಾರ

ಡೇಗೆ – ಒಂದುಜಾತಿಯ ಬೇಟೆ ಆಡುವ ಪಕ್ಷಿ

## ಢ

ಢಗಳ – ಸಡಿಲವಾದ

ಢಾಣಕ (ಮ) - ಆಡಳಿತಗಾರ, ವ್ಯವಸ್ಥಾಪಕ

ಢೇಕರ (ಮ) - ತೃಪ್ತಿಯ ತೇಗು

ಢೇಗು (ಮ) - ಗುಂಪು

## ತ

ತಗ್ಗು - ಬಾಗು, ನಮ್ರನಾಗು, ಮುಳುಗು

ತತ್ತ್ವಮಸಿ - ನೀನೆ ಬ್ರಹ್ಮನಿರುವಿ

ತಂತ್ರ - ರಹಸ್ಯಮಯ ವಿದ್ಯೆ, ಇಂದ್ರಜಾಲ

ತಂತ್ರಿ - ವೀಣೆ, ತಂಬೂರಿ ಮುಂತಾದ ತಂತಿಯನ್ನು ಉಪಯೋಗಿಸುವ ವಾದ್ಯ

ತಂತುಪುಳು - ರೇಶಿಮೆಯ ಹುಳ

ತನುವೆಂಬ ಅಷ್ಟಕಂಬ - ಅಷ್ಟಕಂಬ ನೋಡಿ

ತರಣಿ - ಸೂರ್ಯ

ತರಿ - ಕತ್ತರಿಸು

ತಾಂಡು - ಒಂದು ಬಗೆಯ ನೃತ್ಯ

ತಾಪತ್ರಯ - ಆಧಿಭೌತಿಕ, ಆಧ್ಯಾತ್ಮಿಕ ಹಾಗೂ ಆಧಿದೈವಿಕ ಈ ಪ್ರಕಾರದ ೩ ದುಃಖಗಳು

ತಾಮರಸ ಭೂಮಿ - ಬಂಗಾರದ ಭೂಮಿ, ಲಂಕೆ

ತಾರಿಸು - ಉದ್ಧಾರಮಾಡು, ಪಾರಗಾಣಿಸು

ತಾಸು - ವಾದ್ಯಗಳ ಸಪ್ಪಳ

ತಿಂತಿಣಿ - ಸಮೂಹ

ತಿಸರ - ಒಬ್ಬ ರಾಕ್ಷಸ

ತೀವಿಸು - ಹರಡು, ವಿಸ್ತಾರಮಾಡು

ತುಚ್ಚಕ - ಕೀಳ, ಹೀನ

ತುರ್ಯಾವಸ್ಥೆ - ಆತ್ಮನ ಎಲ್ಲಕ್ಕೂ ಮೀರಿದ ಶುದ್ಧ ಅವಸ್ಥೆ

ತೆರವು - ಬಿಡುವು

ತೇಗು - ತೃಪ್ತಿಯ ಉಸಿರಾಟ

ತೊರಹು - ಸೆಲೆ

ತ್ರಯಪದ - ಅಗ್ನಿ

ತ್ರಿಕೂಟ - ಷಟ್‌ಚಕ್ರಭೇದನ ಟಿಪ್ಪಣಿ ನೋಡಿ

ತ್ರಿಣಿಯರು - ಬ್ರಹ್ಮಾ, ವಿಷ್ಣು, ಮಹೇಶ ಈ ೩ ದೇವತೆಗಳು

ತ್ರಿಪದ – ಅಗ್ನಿ

## ಥ

ಥಡಿ – ದಂಡೆ

## ದ

ದಗಿ
(ಮ ದಗಾ) – ವಿಶ್ವಾಸಘಾತ

ದಂಡಕ – ನಿಯಮ

ದಂದದಿ
(ದಂದಲೆ) – ತಲೆಹರಟೆ, ಪೀಡೆ, ತಂಟೆ

ದಂದುಗ – ತ್ರಾಸ

ದರ ದರ – ಸಣ್ಣ ಸಣ್ಣ

ದಲಿಸು – ಒಡೆಯಲ್ಪಡು

ದಶಮದ್ವಾರ – ಷಟ್‌ಚಕ್ರಭೇದನ ಟಿಪ್ಪಣಿ ನೋಡಿ

ದಶವಾಯು – ೫ ಪ್ರಾಣ (ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ) ಹಾಗೂ ೫ ಉಪ ಪ್ರಾಣಗಳು (ನಾಗ, ಕೂರ್ಮ, ಕೃಕಲ, ದೇವದತ್ತ, ಧನಂಜಯ)

ದಹಕರ – ಕಪಟ

ದಾಂತ – ನಿಗ್ರಹವುಳ್ಳ, ಸಂಯಮವುಳ್ಳ

ದಿಮ್ಮನೆ – ಬಲವಾಗಿ, ತಟ್ಟನೆ

ದಿವಿಜ (ದ್ವಿಜ)– ಬ್ರಾಹ್ಮಣ (ಶ್ರೀರಾಮಚಂದ್ರ ಚರಿತ್ರಾನು– ಸಂಧಾನದ ಸಂದರ್ಭದಲ್ಲಿ ರಾವಣ)

ದೇವಾಂತಕ – ರಾವಣನ ಮಗ

ದೇಶಿಕ – ಆಚಾರ್ಯ, ಗುರು

ದ್ವಿಜಗಾಮಿನಿ – ಹಂಸಗಾಮಿನಿ

ದ್ವಿಜಪತಿ – ಚಂದ್ರ

ದ್ವಿಜರಾಜ – ಚಂದ್ರ

## ಧ

ಧಕ್ಕೆ – ಪೆಟ್ಟು, ಗಾಯ

ಧಡಾಧಡಾ – ಧಡ್ ಎಂದು ಸದ್ದಾಗು

ಧಾಕ (ಮ) – ಅಂಜಿಕೆ

ಧೂರ್ಜಟಿ – ಶಿವ

## ನ

ನಗ – ಬಳ್ಳಿ, ಮರ

ನಗಕನಕ – ರೋಖ ನಾಣ್ಯ

ನಕ್ಷತ್ರ ಪತಿ – ಚಂದ್ರ

ನಂದಿ – ಒಬ್ಬ ಕಪಿ (ಶ್ರೀರಾಮಚಂದ್ರ

ಚರಿತ್ರಾನು–
ಸಂಧಾನದ
ಸಂದರ್ಭದಲ್ಲಿ)

ನಾಕು ಕಾಯ – ಟಿಪ್ಪಣಿ ನೋಡಿ

ನಾಗ ಗಮನೆ – ಗಜ ಗಮನೆ

ನಾಡಿಸ್ಥಿತಿ (ಮ) – ಯೋಗ್ಯತೆ

ನಾಕು ಪಾತ್ರೆ – ಜಾಗ್ರತ್, ಸ್ವಪ್ನ, ಸುಷುಪ್ತಿ, ತುರ್ಯಾ

ನಾದ ಬಿಂದು
ಕಲಾತೀತ – ಟಿಪ್ಪಣಿ ನೋಡಿ

ನಾಮ ರೂಪ
ವರ್ಣ ಕ್ರಿಯಾ – ಟಿಪ್ಪಣಿ ನೋಡಿ

ನಾರಾಂತಕ – ರಾವಣನ ಮಗ

ನಾಲ್ಕುಗುಣ – ಭಕ್ತಿ, ಜ್ಞಾನ, ಕರ್ಮ, ಯೋಗ ಈ ೪ ಹಾದಿಗಳು. ಇದಕ್ಕೆ ಪಂಥರಾಜ ವೆನ್ನುತ್ತಾರೆ.

ನಿಕಾಯ – ಸಮೂಹ

ನಿಬ್ಬರ – ವೇಗ, ತ್ವರೆ

ನಿರಸ – ನಿಃಸತ್ವ

ನಿರೋಪ – ಅಪ್ಪಣೆ

ನಿರ್ಜರಪತಿ
ಶತ್ರುಸತಿ – ಇಂದ್ರಜಿತನ ಹೆಂಡತಿ, ಸುಲೋಚನೆ

ನೀರೆ – ಚೆಲುವೆ

ನೀಲ ನಳ – ವಾನರ ವೀರರು

ನೀವರ – ವ್ಯಾಪಾರ

ನೀಸು – ಕೊನೆಗಾಣಿಸು

ನೆಲಕಲ – ಲೋಭಿ, ಕೃಪಣ

ನೇಣ – ಹಗ್ಗ

ನೇತಿ ನೇತಿ – ಬ್ರಹ್ಮತತ್ತ್ವವು ವರ್ಣನಾತೀತವು

ನ್ಯಾಸ – ಟಿಪ್ಪಣಿ ನೋಡಿ

## ಪ

ಪಂಚಕೋಶ – ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ ಮತ್ತು ಆನಂದಮಯ. ಈ ಕೋಶಗಳಲ್ಲಿ ಆತ್ಮನು ಸಂಚರಿಸು–ತ್ತಿರುವನು, ಇವುಗಳನ್ನು ದಾಟಿ ಹೋಗುವದೇ ಮುಕ್ತಿ.

ಪಂಚಾಕರಣಿ – ಕುಲಕರಣಿ ಉದ್ಯೋಗ

ಪಡಿಪಾಟ – ದುಃಖ

ಪತಿಕರಿಸು – ಅನುಗ್ರಹಿಸು

ಪದ್ದು – ಹದ್ದು

ಪನಿವಾರ – ಹಣ್ಣಿನ ನೈವೇದ್ಯ

ಪನ್ನಗೇಂದ್ರ – ಆದಿಶೇಷ

ಪರಪುರುಷ – ಪರಮಾತ್ಮಾ

ಪಾಕಶಾಸನ – ಇಂದ್ರ

ಪಾಜಿ – ಕೀಳು ಮನುಷ್ಯ

ಪಾಲಟ – ಬದಲು

ಪಾಷಂಡ ಮತ – ವೇದ ವಿರೋಧಿ ಮತ

ಪಿಕ – ಕೋಕಿಲೆ

ಪಿಂತೆ – ಹಿಂದೆ

ಪುಟ – (ಮತ್ತೊಂದು ಲೋಹದ ವಸ್ತುವಿಗೆ ಚಿನ್ನ ಇಲ್ಲವೆ ತವರದ) ಲೇಪ

ಪುಡಿಸಿಯಲು – ಮಣ್ಣುಗೂಡಿಸಲು

ಪೊರಮಡಿಸು – ಹೊರಡಿಸು

ಪ್ರತೀತಿ – ನಿಶ್ಚಿತ ಜ್ಞಾನ

ಪ್ರಹಸ್ತ – ರಾವಣನ ಮಂತ್ರಿ

**ಫ**

ಫಾಕಿಸು (ಮ) – ತೇಜವನ್ನು ವ್ಯಾಪಿಸು

ಫಾರ (ಮ) – ಬಹಳ, ದೊಡ್ಡ

ಫಿತವಿ (ಮ) – ಭೇದಬುದ್ಧಿ

ಫುಂದು – ಸಾವಕಾಶವಾಗಿ ಅನ್ನು

ಫೇಡಣೆ (ಮ)– ಸೇಡು ತೀರಿಸಿಕೊಳ್ಳು

ಫೋಡಣಿ (ಮ)– ಒಗ್ಗರಣೆ

**ಬ**

ಬಣಗು – ಕೀಳ, ಅಲ್ಪ

ಬಂದಿ ಜನ – ಸ್ತುತಿಪಾಠಕರು

ಬಂದು ಹೋದುದೆಲ್ಲ – ಹುಟ್ಟು ಸಾವು ಗಳೆಲ್ಲ

ಬಲಗೊಳ್ಳು – ಪ್ರದಕ್ಷಿಣೆ ಮಾಡು

ಬವರ – ಕಾಳಗ

ಬಹಳಕಂಠಾರಿ– ದಶಕಂಠ ರಾವಣನ ಶತ್ರು, ರಾಮ

ಬಳಗುಳ್ಳಿ (ಬಳಕು) – ಹೊಯ್ದಾಡುವ, ಅತ್ತಿತ್ತ ಅಲೆದಾಡುವ

ಬಾನ – ಆಕಾಶ

ಬಾಲಾರಿ – ರಾವಣನ ಮಗನಾದ ಇಂದ್ರಜಿತನ ಶತ್ರು, ಲಕ್ಷ್ಮಣ

ಬಿಕನಾಸಿ – ತಿರುಕ, ಗತಿಗೇಡಿ

ಬಿನುಗು – ಕ್ಷುಲ್ಲಕ, ಹೀನ, ಕ್ಷುದ್ರ

ಬ್ರಹ್ಮರಂಧ್ರ – ಷಟ್‌ಚಕ್ರಭೇದನ ಟಿಪ್ಪಣಿ ನೋಡಿ

ಬ್ರಹ್ಮಸುತ – ನಾರದ

## ಭ

ಭಂಡ – ನಾಚಿಕೆಗೇಡಿ

ಭಾರಿ – ಗೌರವವುಳ್ಳ

ಭೃಕುಟಿ – ಹುಬ್ಬು

ಭ್ರಮರ
ಗುಂಫಾ – ಷಟ್‌ಚಕ್ರಭೇದನ ಟಿಪ್ಪಣಿ ನೋಡಿ

ಭ್ರಾತಾ – ಅಣ್ಣ ಅಥವಾ ತಮ್ಮ, ಶ್ರೀರಾಮ ಚಂದ್ರಚರಿತ್ರಾನು ಸಂಧಾನದ ಸಂದರ್ಭದಲ್ಲಿ, ವಿಭೀಷಣ

## ಮ

ಮಚ್ಚೆ – ಮೈಮೇಲೆ ಇರುವ ಕಲೆ

ಮಣಿ – ನಮಸ್ಕಾರ ಮಾಡು

ಮಥಿಸು – ತಿಕ್ಕು, ಚರ್ಚಿಸು

ಮದುರಿಂಬೆ – ಮದುಗುಣಿಕೆ

ಮಯಜಾ – ಮಂಡೋದರಿ

ಮರುಗ – ಒಂದು ಬಗೆಯ ಸುವಾಸನೆಯ ವನಸ್ಪತಿ

ಮಲಕು – ತೊಡಕು

ಮಹೋರವ – ಮಾಹೂರ (ತಾ. ಕಿನವಟ, ಜಿ. ನಾಂದೇಡ ; ಇದು ಒಂದು ಮಹತ್ವದ ದತ್ತಾತ್ರೇಯನ ಸ್ಥಾನ)

ಮಾಜು – ತೊಡೆದುಹಾಕು, ಅಳುಕಿಸು, ವಂಚಿಸು

ಮಾದಿನ – ಗರ್ವಿಷ್ಠ

ಮಾರ – ಹೊಡೆತ, ಕೊಲ್ಲುವಿಕೆ

ಮಾರು – ಎದುರಿಸು, ಅಡ್ಡಿಮಾಡು

ಮಿತ್ರ – ಸೂರ್ಯ

ಮಿತ್ರತನುಜ – ಸೂರ್ಯನ ಮಗ : ಶ್ರೀರಾಮಚಂದ್ರ ಚರಿತ್ರಾನು– ಸಂಧಾನದ ಸಂದರ್ಭದಲ್ಲಿ ಸುಗ್ರೀವ

ಮಿಥ್ಯೆ – ಅಸತ್ಯ, ಸುಳ್ಳು

ಮಿರಾಶಿ – ಅಧಿಕಾರ, ವೈಭವ

ಮಿಸುನಿ – ಬಂಗಾರ

ಮುಗ್ಗು – ಹಳಸಲು ವಾಸನೆ, ಕೆಟ್ಟ ವಾಸನೆ

ಮುಂಗಾವಳ – ರಾತ್ರಿ

ಮುಚ್ಚಾವಳ (ಮುಚ್ಚಾಳ) – ಕಳ್ಳ, ತುಡುಗ, ಮರೆಯಲ್ಲಿರುವವ

ಮುಡಚಟ್ಟು – ಮೈಲಿಗೆ

ಮುಂಡಾಯಿತು– ವೈರಾಗ್ಯ ಪ್ರಾಪ್ತವಾಯಿತು

ಮುದಿ – ಮುಪ್ಪಾದ

ಮುದ್ರೆ – ಟಿಪ್ಪಣಿ ನೋಡಿ

ಮುಪ್ಪುರ – ತ್ರಿಪುರ, ಆಕಾಶದಲ್ಲಿ ತ್ರಿಪುರಾಸುರರು ಕಟ್ಟಿದ ೩ ಪಟ್ಟಣಗಳು

ಮೂರರನೆನಿಸಿ– ೩ ಗುಣ (ಸತ್ವ, ರಜ, ತಮ ಅಥವಾ ಹೆಣ್ಣು, ಹೊನ್ನು, ಮಣ್ಣು) ಇವು ಹಾನಿಕಾರಕ ವೆಂದು ವಿಚಾರ ಮಾಡಿ.

ಮೂರು ಆಶೆ – ಲೋಕೈಷಣ, ವಿತ್ತೈಷಣ, ಪುತ್ರೈಷಣ

ಮೂರು ಕೋಣೆ– ಇಡಾ, ಪಿಂಗಳಾ ಸುಷುಮ್ನಾ ಈ ನಾಡಿಗಳ ಸಂಗಮ ; ಭ್ರೂಮಧ್ಯ ದೃಷ್ಟಿ

ಮೂರು ದೇಹ – ಸ್ಥೂಲ, ಸೂಕ್ಷ್ಮ, ಕಾರಣ ದೇಹ. ವಿವರಣೆಗಾಗಿ ನಾಕು ದೇಹ ಟಿಪ್ಪಣಿ ನೋಡಿ

ಮೂರು ಮನೆ – ತ್ರಿಗುಣ ( ಸತ್ವ ರಜ ತಮ)

ಮೂರು ಮಲ– ಮಾಯಾಮಲ, ಕರ್ಮಮಲ, ಆಣವಮಲ

ಮೂಲೈದು – ಮೂಲಾಧಾರ ಹಾಗೂ ಉಳಿದ ೫ ಚಕ್ರಗಳು ಷಟ್ ಚಕ್ರ ಟಿಪ್ಪಣಿ ನೋಡಿ

ಮೃಡ ಗದರ – ಶಿವನ ಗರ್ಜನೆ

ಮೃಷಾ – ವ್ಯರ್ಥ

ಮೇಲ್ಕಟ್ಟು – ಗುಬ್ಬಿ ಚಟ್ಟು

ಮೋತಿ - ಮೋರೆ, ಮುಖ

## ಯ

ಯಾಜಕ - ದೀಕ್ಷಿತ

## ರ

ರಕ್ತಪ್ರಭ - ಬ್ರಹ್ಮ

ರಟ್ಟು - ರಟ್ಟೆ, ಮೊಳಕೈ

ರದನ - ಆನೆ

ರವಿಜ - ಮಿತ್ರ-ತನುಜ ನೋಡಿ

ರವಿಸುತ - ಮಿತ್ರ-ತನುಜ ನೋಡಿ

ರಾಹಣ (ಮ) - ಸಾಧನ, ಆಶಯ, ಪಿಶಾಚಿಯು ಪ್ರವೇಶಿಸುವ ಸ್ಥಾನ

ರುದ್ರಜಮುನಿ - ಕಾರ್ತಿಕೇಯ ಸ್ವಾಮಿ

ರುಮಾ - ಸುಗ್ರೀವನ ಹೆಂಡತಿ

ರುಪ್ಪಿ - ಕಾಸು

ರುಕ್ಷಮೌಳಿ - ಕರಡಿಗಳ ಅಧಿಪತಿ, ಜಾಂಬವಂತ

## ಲ

ಲಕ್ಷ್ಯಾರ್ಥ - ಶಬ್ದದ ರೂಢಾರ್ಥ ದಿಂದ ಬೇರೆಯಾದ ಅರ್ಥ

ಲಾವ (ಮ) - ಒಂದು ಪ್ರಕಾರದ ಭೂತ

ಲೇಪ - ಕೌದಿ

ಲೇಪ ತೀವಿಸಿ - ಶ್ರೀಗಂಧ ಹಚ್ಚಿ

## ವ

ವಣ (ಮ) - ಕಲಂಕ

ವಮನ - ಓಕರಿಕೆ

ವರ್ತನ - ರೀತಿ, ನಡೆವಳಿಕೆ

ವರ್ಮ - ಹಗೆತನ, ಅಪಕಾರಕ ಬುದ್ಧಿ

ವಾಚ್ಯಾರ್ಥ - ಶಬ್ದಗಳ ಸರಳವಾದ ಅರ್ಥ, ರೂಢಾರ್ಥ

ವಾಜ - ಯಜ್ಞದ ಕೊನೆಯಲ್ಲಿ ಹೇಳುವ ಮಂತ್ರ

ವಾಜಿ - ಬಲವುಳ್ಳದ್ದು

ವಾಲ - ಇಳಿದುಬಿಟ್ಟ ಜಡೆ, ಬಳೆ, ಉಂಗುರ

ವಾಲಿಜ - ಅಂಗದ

ವಾವಿ - ಪ್ರೇಮ, ನಂಟು, ಸಂಬಂಧ

ವಿಧಿ - ಬ್ರಹ್ಮ

ವಿವಸ್ವಂತ - ಸೂರ್ಯ

ವೈಯಾರ - ಬೆಡಗು, ವಿಲಾಸ

ವೋಹಳ

ಸೋಹಳ (ಮ)- ಮಡಿ ಮೈಲಿಗೆ

ವ್ಯಾಪ – ವಿಸ್ತಾರ, ಕಾಟ, ಸಂಸರ್ಗ, ಹೊಣೆಗಾರಿಕೆ

## ಶ

ಶಠ – ನೀಚ, ಉದ್ಧಟ

ಶಮ – ಸುಖ,ಸಂತೋಷ

ಶರ್ವ – ಶಿವ

ಶುಚಿಸುತ – ದುಃಖ ಪಡುತ್ತ

ಶೇಡೋರ್ಮಿ – ಷಡ್ರಿಪು ನೋಡಿ

ಶ್ರೀಹಾಟ – ಷಟ್‌ಚಕ್ರಭೇದನ ಟಿಪ್ಪಣಿ ನೋಡಿ

## ಷ

ಷಟ್ ಚಕ್ರ – ಟಿಪ್ಪಣಿ ನೋಡಿ

ಷಟ್ ಚಕ್ರ ಬೇಧನ – ಟಿಪ್ಪಣಿ ನೋಡಿ

ಷಡ್ರಿಪು – ಕಾಮ, ಕ್ರೋಧ, ಮೋಹ, ಮದ, ಮತ್ಸರ, ಅಹಂಕಾರ

ಷೋಡ–ಶೋಪಚಾರ – ಟಿಪ್ಪಣಿ ನೋಡಿ

## ಸ

ಸಂಗಡೆ (ಮ) – ಗೆಳತಿಯೆ

ಸಂಚಿತ, ಪ್ರಾರಬ್ಧ ಕ್ರಿಯಮಾಣ – ಟಿಪ್ಪಣಿ ನೋಡಿ

ಸತ್ತಿಗೆ – ಕೊಡೆ, ಛತ್ರಿ

ಸವ್ಯಸಾಚಿ – ಎಡಗೈಯಿಂದಲೂ ಬಾಣ ಬಿಡುವವ, ಅರ್ಜುನ

ಸವ್ಯಾಪಸವ್ಯ – (ರೂಢಾರ್ಥದಲ್ಲಿ) ನಿರರ್ಥಕ ಕ್ರಿಯೆಗಳು

ಸಹಸ್ರಾರ ಚಕ್ರ – ಷಟ್‌ಚಕ್ರಭೇದನ ಟಿಪ್ಪಣಿ ನೋಡಿ

ಸಾರಾಯ – ಮುಖ್ಯಾಂಶ, ತಾತ್ಪರ್ಯ

ಸಿತಾಂಗ ಪ್ರಭ – ಶಿವ

ಸಿಂಧುಸುತೆ – ಲಕ್ಷ್ಮಿ

ಸುಪಾಣಿ – ಹೊಳೆಯುವ, ತೇಜಸ್ವಿ

ಸುಮನ – ಏಕಾಗ್ರ, ನಿರ್ವಿಕಾರ ಮನ

ಸುಯಿಧಾನ – ರಕ್ಷಣೆ

ಸುಯ್ಯಲ್ಲಿ (ಸುಯ್ಯಲು) – ಗಾಳಿ, ಉಸಿರು

ಸೂಡು – ಹೂ ಮುಡಿಸು

ಸೂತ್ರ – ಶ್ವಾಸ

ಸೂಸು – ಹರಿದಾಡು, ಚಲಿಸು

ಸೇದೆ – ಬಳಲಿಕೆ, ದಣಿವು

ಸೈರಾವೈರಾ – ದಿಕ್ಕಿಲ್ಲದೆ

ಸೊಡರು – ದೀಪ

ಸೊಂಟ – ನಡು ಡೊಂಕಾದವ, ಅವಯವ ಹೀನ

ಸೊನಿ – ವನಸ್ಪತಿಗಳಿಂದ ಒಸರುವ ರಸ

ಸೋಗು – ಕಪಟ ವೇಷ
ಸ್ಫುಲಿಂಗ – ಸೂರ್ಯ
ಸ್ಯಂದನ – ನದಿ, ಹೊಳೆ

## ಹ

ಹಂಗು – ದಾಕ್ಷಿಣ್ಯ, ಉಪಕಾರ
ಹತ್ತು ಮಂದಿ – ಐದು ಜ್ಞಾನೇಂದ್ರಿಯಗಳು ೫ಕರ್ಮೇಂದ್ರಿಯಗಳು
ಹದಚಿ – ಅಗಿದು
ಹಮ್ಮು – ಅಹಂಕಾರ
ಹಂಸ ಪರಮರ – ಜೀವಶಿವರ, ಜೀವಾತ್ಮ ಪರಮಾತ್ಮರ
ಹಂಸೋಹಂ – ನಾನೇ (ನಿತ್ಯ ಬುದ್ಧ ಶುದ್ಧ ಮುಕ್ತ) ಆತ್ಮನು
ಹರಿ – ಕುದುರೆ
ಹರಿಜಾ – ಗಂಗಾನದಿ
ಹರಿಪತಿ – ವಾನರಾಧಿಪತಿ, ಸುಗ್ರೀವ
ಹರಿವೀರರು – ಶೂರ ಕಪಿಗಳು
ಹರಿಹಯವೈರಿ – ಇಂದ್ರನ ಶತ್ರು, ಇಂದ್ರಜಿತ
ಹವಣಿಕಿ – ಹಂಚಿಕೆ, ಆಲೋಚನೆ
ಹವ್ಯಕವ್ಯ – ದೇವತೆಗಳಿಗೆ ಹಾಗೂ ಸತ್ತ ಪಿತೃಗಳಿಗೆ ಅರ್ಪಿಸುವ ಅನ್ನ
ಹಾಟಕ – ಬಂಗಾರ
ಹಿರಣ್ಯನಯನ– ಹಿರಣ್ಯಾಕ್ಷ, ಒಬ್ಬ ರಾಕ್ಷಸ
ಹುಗಿಲು – ಬಾಗಿಲು
ಹುಯ್ಯಲ್ಲಿ (ಹುಯ್ಯಲು) – ಕೂಗಾಟ, ಪೆಟ್ಟು
ಹೂಜಿ – ನೀರು ತುಂಬುವ ಪಾತ್ರೆ
ಹೆಡಗುಡಿ ಕಟ್ಟು – ಕೈಗಳನ್ನು ಬೆನ್ನಹಿಂದೆ ಕಟ್ಟು
ಹೆಳವ – ಕುಂಟ, ಕಾಲಿಲ್ಲದವ
ಹೇಮ – ಬಂಗಾರ
ಹೇಯಾಕಾಕ್ಷರ– ತುಚ್ಛ, ಕೀಳ

## ಕ್ಷ

ಕ್ಷಾಲ – ತೊಳೆಯುವದು
ಕ್ಷೇತ್ರ – ಶರೀರ

## ಜ್ಞ

ಜ್ಞಪ್ತಿ – ಅಸಿಜ್ಞಪ್ತಿ ಟಿಪ್ಪಣಿ ನೋಡಿ

# ಅನುಬಂಧ – ೨

## ಟಿಪ್ಪಣಿಗಳು

### ಕೀರ್ತನೆ ೧

**ಅಧಿಷ್ಠಾನ** – ಅಧಿಷ್ಠಾನವೆಂದರೆ ಯಾವದಾದರೊಂದು ವಸ್ತುವಿನ ಆಧಾರ ತತ್ತ್ವ, ಅಥವಾ ಆಶ್ರಯ ತತ್ತ್ವ. ಈ ಆಧಾರ ತತ್ತ್ವವು ವಸ್ತುವಿನ ಕಾರಣವಾಗಲಾರದು. ಯಾಕಂದರೆ ಕಾರಣ ಸಿದ್ಧಾಂತದಲ್ಲಿ, ಒಂದು ಘಟನೆ ಮೊದಲು (ಅಂದರೆ ಕಾರಣ), ಆ ಮೇಲೆ ಮತ್ತೊಂದು ಘಟನೆ (ಅಂದರೆ ಕಾರ್ಯ), ಹೀಗೆ ಕಾರಣ ಸಿದ್ಧಾಂತದಲ್ಲಿ ಕಾಲ ಅಂದರೆ, 'ಮೊದಲು', 'ನಂತರ' ಈ ಕಲ್ಪನೆಗಳು ಅಂತಭೂರ್ತವಾಗಿವೆ. ಆದರೆ ಅಧಿಷ್ಠಾನ ಸಿದ್ಧಾಂತವು ಕಾಲ ನಿರಪೇಕ್ಷವಿದೆ. ಇದರಲ್ಲಿ ಒಂದು ಘಟನೆ ಮೊದಲು, ಆ ಮೇಲೆ ಮತ್ತೊಂದು ಘಟನೆ, ಈ ವಿಚಾರಗಳು ಬರುವದಿಲ್ಲ. ಉದಾಹರಣೆಯೆಂದರೆ, ರಜ್ಜು (ಹಗ್ಗ) ಸರ್ಪ (ಹಾವು)ದ ಆಭಾಸದಲ್ಲಿ, ರಜ್ಜುವು ಸರ್ಪದ ಕಾರಣವಲ್ಲ. ಅದು ಸರ್ಪದ ಅಧಿಷ್ಠಾನ. ರಜ್ಜುವಿದ್ದಲ್ಲಿ ಸರ್ಪದ ಆಭಾಸವಾಗಲೇ ಬೇಕಂತಲ್ಲ ; ಆದರೆ ಸರ್ಪದ ಆಭಾಸವಿದ್ದಲ್ಲಿ ಅದರ ಆಶ್ರಯ ಸ್ಥಾನ ಅಂದರೆ ರಜ್ಜು ಇರಲೇ ಬೇಕು. ದೃಶ್ಯವಿಶ್ವವು ಆಭಾಸ ; ಬ್ರಹ್ಮತತ್ತ್ವವು ಅದರ ಅಧಿಷ್ಠಾನ. ಹೀಗೆ ಅದ್ವೈತ ವೇದಾಂತದ ಸಿದ್ಧಾಂತವಿದೆ. ಒಟ್ಟಿನಲ್ಲಿ, ಬ್ರಹ್ಮ ಒಂದೇ ಸತ್ತತ್ತ್ವ ; ದೃಶ್ಯವಿಶ್ವವೆಲ್ಲ ಆಭಾಸ ಅಂದರೆ ತೋರಿಕೆ ಮಾತ್ರ.

### ಕೀರ್ತನೆ ೨

**ಅಧ್ಯಾರೋಪ-ಅಪವಾದ.** ಅಧ್ಯಾರೋಪವೆಂದರೆ ಒಂದು ವಸ್ತುವಿನ ಮೇಲೆ ಮತ್ತೊಂದನ್ನು ಆರೋಪಿಸುವದು, ಅಂದರೆ ಹೊರಿಸುವದು. ಉದಾಹರಣೆಯೆಂದರೆ, ಶುಕ್ತಿಕಾ (ಸಿಂಪು) ಇದು ರಜತ (ಬೆಳ್ಳಿ)ದಂತೆ ತೋರುತ್ತದೆ. ಇಲ್ಲಿ ಸಿಂಪಿನ ಮೇಲೆ ಬೆಳ್ಳಿಯನ್ನು ಆರೋಪಿಸುತ್ತೇವೆ. ಮೂಲವಸ್ತು ಸಿಂಪು ಇದ್ದಲ್ಲಿ, ಅದನ್ನು ಬೆಳ್ಳಿಯೆಂದು ಭಾವಿಸುತ್ತೇವೆ. ಇದು ಅಧ್ಯಾರೋಪ. ನಿತ್ಯವಾದ, ಅಚಲವಾದ ಮತ್ತು ಆನಂದಮಯವಾದ ಬ್ರಹ್ಮ ತತ್ತ್ವದ ಮೇಲೆ, ಅನಿತ್ಯವಾದ, ಕ್ಷಣಭಂಗುರವಾದ, ನಿರಂತರ ವ್ಯತ್ಯಾಸ ಹೊಂದುವ ಹಾಗೂ ದುಃಖಮಯವಾದ ಪ್ರಪಂಚವನ್ನು ಆರೋಪಿಸುತ್ತೇವೆ. ಅಪವಾದವೆಂದರೆ ಅಲ್ಲಗಳೆಯುವದು. ಶುಕ್ತಿಕಾ-ರಜತ ಆಭಾಸದಲ್ಲಿ (ಸಿಂಪು ಬೆಳ್ಳಿಯಂತೆ ಕಾಣುವ ಆಭಾಸದಲ್ಲಿ), ರಜತ ಅಂದರೆ ಬೆಳ್ಳಿಯನ್ನು ಅಲ್ಲಗಳೆದರೆ ಶುಕ್ತಿಕಾ (ಸಿಂಪು), ಮಾತ್ರ ಉಳಿಯುತ್ತದೆ. ಅದರಂತೆ ಅಶಾಶ್ವತವಾದ ಪ್ರಪಂಚವನ್ನು ಅಲ್ಲಗಳೆದರೆ, ಶಾಶ್ವತ ಬ್ರಹ್ಮತತ್ತ್ವ ಒಂದೇ ಉಳಿಯುತ್ತದೆ.

## ಕೀರ್ತನೆ ೩

**ಅನಾಹತ ನಾದ** – ಬಾಹ್ಯವಸ್ತುಗಳ ಕಿವಿಗಳ ಮೇಲೆ ಆಘಾತವಿಲ್ಲದೆ, ಸಾಧಕನಿಗೆ ಧ್ಯಾನಾವಸ್ಥೆಯಲ್ಲಿ ಅಂತಃಸ್ಫೂರ್ತವಾಗುವ ನಾದ ಎಂದರೆ ಅನಾಹತ ನಾದ. ಇದು ಅತೀಂದ್ರಿಯ ನಾದ. ಇದಕ್ಕೆ ಶ್ರವಣೇಂದ್ರಿಯದ ಅವಶ್ಯಕತೆಯಿಲ್ಲ. ಚಿದಾನಂದಾವಧೂತರು ತಮ್ಮ 'ದಶವಿಧನಾದವು ಭಕ್ತರಿಗೆ ಕೇಳುತ್ತದೆ', ಈ ಗೀತದಲ್ಲಿ ಹತ್ತು ನಾದಗಳನ್ನು ವಿವರಿಸಿದ್ದಾರೆ. ಕಾಖಂಡಕಿ ಮಹಿಪತಿದಾಸರು, 'ಇಂಥಾದೆಲ್ಲಿದೆ ತಾ ನೋಡಿ' ಈ ಗೀತದಲ್ಲಿ 'ಒಂದೊಂದು ಪರಿ ಕೇಳಿಸುವ ಹನ್ನೊಂದರ ಮೇಲಿನ್ನೊಂದರ ಘೋಷ' ಹೀಗೆ ಹನ್ನೆರಡು ನಾದಗಳ ಬಗ್ಗೆ ಹೇಳುತ್ತಾರೆ. ಹಠ ರತ್ನಾವಲಿಯಲ್ಲಿ (೪. ೧೦.೧೧) ೧೨ ನಾದಗಳ ವಿವರಣೆಯಿದೆ. 'ಆದೌ ಜಲಧಿ, ಜೀಮೂತ, ಭೇರೀ, ನಿರ್ಝರಸಂಭವಾಃ । ಮಧ್ಯೇ ಮರ್ದಲ ಶಂಖೋತ್ಥಾ ಘಂಟಾ ಕಾಹಲಕಾಸ್ತಥಾ । ಅಂತ್ಯೇ ತು ಕಿಂಕಿಣೀ, ವಂಶ, ವೀಣಾ, ಭ್ರಮರ ನಿಃಸ್ವನಾಃ ॥ ಇಷ್ಟೇ ನಿಶ್ಚಿತವಾದ ನಾದಗಳು ಎಂದು ಹೇಳಲಿಕ್ಕಾಗುವದಿಲ್ಲ. ನಾನಾ ವಿಧಾಃ ಈ ಶಬ್ದ ಪ್ರಯೋಗದಿಂದ ಅನೇಕ ಪ್ರಕಾರದ ನಾದಗಳಿವೆ, ಎಂದು ಸೂಚಿತವಾಗುತ್ತದೆ. ಹತ್ತೇ ಅಥವಾ ಹನ್ನೆರಡೇ ನಾದಗಳಿವೆ ಎಂದು ಹೇಳಲಾಗದು. ಹೆಚ್ಚೂ ಇರಬಹುದು ಅದರಂತೆ ಅನಾಹತ ನಾದದ ಪ್ರಾರಂಭವು ಸಮುದ್ರದ ಆರ್ಭಟದಿಂದ, ಕೊನೆಯು ಭೃಂಗ ನಾದದಿಂದ ಆಗಬೇಕು – ಈ ಕ್ರಮವೂ ಇಲ್ಲ. Who can set a limit to the order and acme of spiritual experience ? ಹೀಗೆ ಗುರುದೇವ ರಾ.ದ. ರಾನಡೆಯವರ ಈ ವಿಷಯದಲ್ಲಿ ಸ್ಪಷ್ಟ ವಿಚಾರವಿದೆ (Pathway to God in Hindi Literature, Gurudev Ranade Samadhi Trust, Nimbal R.S. Pin ; 586211. 3rd Edition, 1998, P. 244).

## ಕೀರ್ತನೆ ೪

**ಅಸಿಜ್ಞಪ್ತಿ** – ಇಲ್ಲಿ ಶುದ್ಧ ಚೈತನ್ಯ ತತ್ತ್ವದ ಅಸ್ತಿತ್ವ ಮಾತ್ರ ಅಭಿಪ್ರೇತವಿದೆ. ಅಪರೋಕ್ಷಾನುಭೂತಿಯಲ್ಲಿ, ತತ್ (ಬ್ರಹ್ಮತತ್ತ್ವ) ತ್ವಮ್ (ನೀನು) ಈ ಪ್ರಕಾರದ ಭೇದಜ್ಞಾನವು ಇರುವದಿಲ್ಲ. ಇದು ಅಭೇದಜ್ಞಾನ. ಈ ಅತೀಂದ್ರಿಯ ಅನುಭವದಲ್ಲಿ ಪರಮಾತ್ಮ-ಜೀವಾತ್ಮ ಹೀಗೆ ಭೇದವೇ ಉಳಿಯುವದಿಲ್ಲ. ಇದಕ್ಕೆ ಉಪನಿಷತ್ಕಾರರು ವಿಜ್ಞಾನಘನ ಎಂದು ಕರೆಯುತ್ತಾರೆ. ಜ್ಞಾತಾ, ಜ್ಞೇಯ, ಜ್ಞಾನಗಳಲ್ಲಿ, ಜ್ಞಾತಾ (ತಿಳಿದುಕೊಳ್ಳುವವ), ಜ್ಞೇಯ (ತಿಳಿಯಲ್ಪಟ್ಟ ವಸ್ತು) ಇವೆರಡುಗಳು ಹೋಗಿ ಕೇವಲ ಜ್ಞಾನ ಮಾತ್ರ ಉಳಿಯುತ್ತದೆ. ಬ್ರಹ್ಮತತ್ತ್ವದಲ್ಲಿ ಅಂದರೆ ಶುದ್ಧ ಚೈತನ್ಯತತ್ತ್ವದಲ್ಲಿ ಸಜಾತೀಯ, ವಿಜಾತೀಯ ಹಾಗೂ ಸ್ವಗತ ಹೀಗೆ ಯಾವ ಪ್ರಕಾರದ ಭೇದವೂ ಇಲ್ಲ. 'ಅಸಿ' ಎಂದರೆ (ನೀನು ಬ್ರಹ್ಮನೇ) ಇರುವಿ ಈ ಅತೀಂದ್ರಿಯ ಅನುಭವಕ್ಕೆ ಅಥವಾ ಅಪರೋಕ್ಷಾನು ಭೂತಿಗೆ ಜ್ಞಪ್ತಿ ಎನ್ನುತ್ತಾರೆ. ಇಲ್ಲಿ ತ್ರಿಪುಟಿಲಯವಾಗುತ್ತದೆ.

## ಕೀರ್ತನೆ ೫

**ಆಗಮ** – ಸಾಮಾನ್ಯವಾಗಿ ಆಗಮ ಮತ್ತು ನಿಗಮ ಈ ಎರಡೂ ಶಬ್ದಗಳ ಅರ್ಥವನ್ನು ವೇದವೆಂದೇ ಮಾಡುತ್ತಾರೆ. ಆದರೂ ಅವುಗಳಲ್ಲಿ ಭೇದವಿದೆ. ನಿಗಮವೆಂದರೆ ವೈದಿಕ ಮತ. ಆಗಮವೆಂದರೆ ಪುರಾಣಗಳಲ್ಲಿ ಹಾಗೂ ತಂತ್ರಶಾಸ್ತ್ರಗಳಲ್ಲಿ ವಿವರಿಸಿದ ಮತ. ವೇದಾಂತಕ್ಕೆ ನಿಗಮ ವಿದ್ಯೆ ಎನ್ನುವರು. ಆಗಮ ಈ ಶಬ್ದದಲ್ಲಿ ಧ್ಯಾನ, ವಿಧಿ, ಯೋಗ ಮತ್ತು ಪೂಜಾ ತಂತ್ರಗಳ ಅಂತರ್ಭಾವವಿದೆ. ನಿಗಮಗಳ ಸಂಬಂಧ ಮುಖ್ಯವಾಗಿ ಋಗ್ವೇದ, ಯಜುರ್ವೇದ ಮತ್ತು ಸಾಮವೇದಗಳೊಡನೆ ಇದೆ. ಆಗಮಗಳ ಸಂಬಂಧ ಅಥರ್ವ ವೇದದೊಡನೆ ಇದೆ. ಆಗಮಗಳನ್ನು ಪ್ರತ್ಯಕ್ಷ ಶಿವನೇ ದೂರ್ವಾಸ ಋಷಿಗೆ ಹೇಳಿದನೆಂದು ನಂಬಿಕೆ ಇದೆ, ಆದ್ದರಿಂದ ಶೈವ ಪಂಥದಲ್ಲಿ ಆಗಮಗಳನ್ನು ಪ್ರಮಾಣವೆಂದು ತಿಳಿಯುತ್ತಾರೆ.

## ಕೀರ್ತನೆ ೬

**ಆರಕ್ಕೆ ಆರಿಟ್ಟು ಆರಳಿದು** – ಇಲ್ಲಿ ಆರಕ್ಕೆ ಆರು ಅಂದರೆ ೩೬ ಶರೀರದ ತತ್ತ್ವಗಳ ಸಂದರ್ಭವಿದ್ದಂತೆ ಕಾಣುತ್ತದೆ. ೩೬ ತತ್ತ್ವಗಳು ಯಾವವೆಂದರೆ, ೫ ಮಹಾಭೂತಗಳು : ಮನ, ಅಹಂಕಾರ, ಬುದ್ಧಿ, ಅವ್ಯಕ್ತ (ಅಂದರೆ ಪ್ರಕೃತಿ) : ೧೦ ಇಂದ್ರಿಯಗಳು : ಈ ೧೦ ಇಂದ್ರಿಯಗಳ ೧೦ ವಿಷಯಗಳು ; ಕೊನೆಗೆ ಇಚ್ಛಾ, ದ್ವೇಷ, ಸುಖ, ದುಃಖ, ಚೇತನಾ, ಧೃತಿ ಮತ್ತು ಸಂಘಾತ. ಈ ಎಲ್ಲ ಶಾರೀರಕ, ಮಾನಸಿಕ ಅಂಶಗಳನ್ನು ದಾಟಬೇಕು.

## ಕೀರ್ತನೆ ೭

**ಏಕಪಂತರ ಮನಿಯೊಳು ನೀರ ತಂದೆ** – ಇಲ್ಲಿ ಮಹಾರಾಷ್ಟ್ರದ ಸುಪ್ರಸಿದ್ಧ ಸಂತ ಏಕನಾಥರ ಸಂದರ್ಭವಿದೆ. ಶ್ರೀಕೃಷ್ಣನು ಏಕನಾಥರ ಭಕ್ತಿಗೆ ಮೆಚ್ಚಿ, ಶ್ರೀಖಂಡ್ಯಾನ ರೂಪದಲ್ಲಿ ಅವರ ಮನೆಯಲ್ಲಿ ನೀರು ಹೊರುವ ಊಳಿಗ ಮಾಡುತ್ತಿದ್ದನೆಂದು ಕಥೆ ಇದೆ.

## ಕೀರ್ತನೆ ೮

**ಐದಕ್ಕೈದು ಕೂಡಿ ಬಂದು** – ಸಾಂಖ್ಯ ದರ್ಶನದ ಪ್ರಕಾರ ವಿಶ್ವದಲ್ಲಿ ೨೫ ತತ್ತ್ವಗಳಿವೆ. ಅವು ಯಾವವೆಂದರೆ– ಪ್ರಕೃತಿ, ಮಹತ್, ಅಹಂಕಾರ, ಮನ, ೫ ಜ್ಞಾನೇಂದ್ರಿಯಗಳು, ೫ ಕರ್ಮೇಂದ್ರಿಯಗಳು, ೫ ತನ್ಮಾತ್ರೆಗಳು ಹಾಗೂ ೫ ಮಹಾ ಭೂತಗಳು ಹೀಗೆ ೨೪ ತತ್ತ್ವಗಳು. ಪುರುಷ ಅಥವಾ ಆತ್ಮತತ್ತ್ವ ಇವಕ್ಕೆ ಜೋಡಿಸಿದರೆ ೨೫ ತತ್ತ್ವಗಳಾಗುವವು. ಈ ೨೪ ತತ್ತ್ವಗಳೆಂದರೆ ಪ್ರಕೃತಿ, ಪ್ರಕೃತಿ–ವಿಕೃತಿ ಮತ್ತು ವಿಕಾರಗಳು. ಈ ತತ್ತ್ವಗಳ ಮನೆ (ಕ್ಷೇತ್ರ ಇಲ್ಲವೆ ಶರೀರ)ಯಲ್ಲಿ ೨೫ ನೆಯ ತತ್ತ್ವ ಅಂದರೆ ಪುರುಷ ಬಂದು ನೆಲೆಸಿದನು. ವಿವೇಕ ಅಥವಾ ಆತ್ಮಜ್ಞಾನವಾದ ಮೇಲೆ ಈ ೨೪ ತತ್ತ್ವಗಳು ಪ್ರಕೃತಿಯ ವಿಕಾರಗಳಿದ್ದು, ಪುರುಷನು ಕೇವಲ, ಅಲಿಪ್ತ, ಚೈತನ್ಯ ಮಾತ್ರನೆಂದು ಪ್ರತೀತಿಯಾಗುತ್ತದೆ. ಇದಕ್ಕೆ ಸಾಂಖ್ಯಶಾಸ್ತ್ರದಲ್ಲಿ

ಕೈವಲ್ಯವೆನ್ನುತ್ತಾರೆ. ಅಂದರೆ ಪುರುಷನು ಪ್ರಕೃತಿಯ ಬಂಧನದಲ್ಲಿ ಸಿಗಬಾರದು, ಬಂಧನದಿಂದ ಬಿಡುಗಡೆಯಾಗುವುದೇ ಮುಕ್ತಿ.

## ಕೀರ್ತನೆ ೯

**ಒಂಭತ್ತು ಛಿದ್ರಗಳು** – ಶರೀರಕ್ಕೆ ೯ ಛಿದ್ರಗಳು ಅಂದರೆ ಬಾಗಿಲುಗಳು ಇರುತ್ತವೆ, ಇವುಗಳಿಗೆ ನವದ್ವಾರವೆಂದು ಅನ್ನುತ್ತಾರೆ. ಇವು ಯಾವವೆಂದರೆ – ಬಾಯಿ, ಎರಡು ಕಣ್ಣುಗಳು, ಎರಡು ಕಿವಿಗಳು, ಎರಡು ಮೂಗಿನ ಹೊರಳೆಗಳು, ಗುದ ಹಾಗೂ ಜನನೇಂದ್ರಿಯ. ಈ ಇಂದ್ರಿಯಗಳು ಬಹಿರ್ಗಾಮಿ ಇದ್ದು ಅವುಗಳು ಹೊರಗಿನ ವಿಷಯಗಳನ್ನೇ ಬಯಸಿ ಅವುಗಳ ಉಪಭೋಗಕ್ಕಾಗಿ ಚಟಪಟಿಸುತ್ತವೆ. ಈ ಇಂದ್ರಿಯಗಳನ್ನು ಅಂತರ್ಮುಖ ಮಾಡಿ ಅವುಗಳನ್ನು ಪರಮಾತ್ಮನೆಡೆಗೆ ಹಚ್ಚುವದು ಸಾಧಕನ ಕರ್ತವ್ಯ. ಈ ಪ್ರಕ್ರಿಯೆಗೆ ಯೋಗಶಾಸ್ತ್ರದಲ್ಲಿ ಪ್ರತ್ಯಾಹಾರ ಎಂಬ ಪಾರಿಭಾಷಿಕ ಶಬ್ದವಿದೆ.

## ಕೀರ್ತನೆ ೧೦

**ಕಾಲಕರ್ಮ** – ಮೊದಲು ಕರ್ಮ ಶಬ್ದದ ವಿವರಣೆ ಮಾಡೋಣ. ಕರ್ಮವು ಬಂಧನಕಾರಕವಿದೆ. ಯಾಕೆಂದರೆ ಅದರ ಫಲವನ್ನು ಭೋಗಿಸಲೇ ಬೇಕು. ಆದ್ದರಿಂದ ಕರ್ಮಾತೀತನಾಗುವದು ಸಾಧಕನ ಧ್ಯೇಯ. ಫಲದ ಆಶೆ ಬಿಟ್ಟು ಕೇವಲ ಕರ್ತವ್ಯ ಬುದ್ಧಿಯಿಂದ ಕರ್ಮ ಮಾಡುವದೇ ನಿಷ್ಕಾಮ ಕರ್ಮ. ಈ ನೈಷ್ಕರ್ಮ್ಯಸಿದ್ಧಿಗಾಗಿ ಸಾಧಕನ ಸತತ ಪ್ರಯತ್ನ ನಡೆಯುತ್ತದೆ. (ಕರ್ಮದ ಮೂರು ಪ್ರಕಾರದ ವಿವೇಚನಕ್ಕಾಗಿ ಸಂಚಿತ, ಪ್ರಾರಬ್ಧ, ಕ್ರಿಯಮಾಣ ಈ ಟಿಪ್ಪಣಿ ನೋಡಿ).

ಕಾಲ ಇದೂ ಬಂಧನ ಕಾರಕವಿದೆ. ಕಾಲವು ಅತೃಪ್ತ ಇಚ್ಛೆಯ ದ್ಯೋತಕವು. ಹಿಂದೆ ಈ ಇಚ್ಛೆ ಪೂರ್ತಿಯಾಗಲಿಲ್ಲ : ಇಂದು ಕೂಡ ಆ ಇಚ್ಛೆಯ ತೃಪ್ತಿಯಿಲ್ಲ, ಅದು ನಾಳೆ ಅಥವಾ ಮುಂದೆ ಎಂದಾದರೂ ತೃಪ್ತವಾಗಬಹುದು, ಈ ಹಂಬಲವು ಮನಸ್ಸಿನ ಸ್ವಾಭಾವಿಕ ಪ್ರವೃತ್ತಿಯು. ಹಿಂದೆ, ಇಂದು, ಮುಂದೆ ಇವೆಲ್ಲ ಕಾಲವಾಚಕಗಳು. ಎಲ್ಲಿಯವರೆಗೆ ಇಚ್ಛಾ–ತೃಪ್ತಿಯಿಲ್ಲವೋ ಅಲ್ಲಿಯವರೆಗೆ ಮನಸ್ಸಿನ ಕಾಟ ತಪ್ಪಿದ್ದಲ್ಲ. ಎಲ್ಲಕ್ಕಿಂತ ಶ್ರೇಷ್ಠ ಇಚ್ಛೆ ತೃಪ್ತವಾದ ಮೇಲೆ ಅಂದರೆ ವಾಸನಾ ರಹಿತ, ಕಾಮನಾರಹಿತ ಅವಸ್ಥೆ ಪ್ರಾಪ್ತವಾದ ಮೇಲೆ 'ಕಾಲ', ಈ ಶಬ್ದವೇ ಉಳಿಯುವುದಿಲ್ಲ. ಆಗ ಸಾಧಕನು ಕಾಲಾತೀತನಾಗುತ್ತಾನೆ. ಎಲ್ಲಕ್ಕಿಂತ ಶ್ರೇಷ್ಠ ಇಚ್ಛೆ ಎಂದರೆ ಆತ್ಮಪ್ರಾಪ್ತಿ ಅಥವಾ ಆತ್ಮ–ಸಾಕ್ಷಾತ್ಕಾರ. ಇನ್ನೊಂದು ದೃಷ್ಟಿಯಿಂದ ನೋಡಿದರೆ, ಕಾಲ ಶಬ್ದದ ಅರ್ಥ ಮೃತ್ಯು ಎಂದು ಇದೆ. ಮೃತ್ಯು ಅಥವಾ ಸಾವು ತಪ್ಪಿದ್ದಲ್ಲ. ಆದರೆ, ಆತ್ಮಾನುಭೂತಿಯಿಂದ ಮೃತ್ಯುವಿನ ಭಯ ಹೋಗುತ್ತದೆ. ಸದೈವ ಪರಮಾತ್ಮನ ಸಾನ್ನಿಧ್ಯವಿದ್ದದ್ದರಿಂದ ಸಾಧಕನು ಜೀವನ್ಮುಕ್ತನಾಗುತ್ತಾನೆ. ಹೀಗಾಯಿತೆಂದರೆ, ಸಾಧಕನು ಮೃತ್ಯುವನ್ನು ಅಂದರೆ ಕಾಲವನ್ನು ಗೆದ್ದಂತೆಯೇ. ಈ ಅವಸ್ಥೆಗೆ ಉಪನಿಷತ್ತುಗಳಲ್ಲಿ 'ಮೃತ್ಯುಂ ತೀರ್ತ್ವಾ' (ಈಶ. ೧೧) ಅಂದರೆ ಮೃತ್ಯುವನ್ನು

ದಾಟಿ ಅಥವಾ 'ಅತಿಮೃತ್ಯುಮೇತಿ' (ಶ್ವೇತಾಶ್ವತರ ೬. ೧೫) ಅಂದರೆ ಮೃತ್ಯುವನ್ನು ದಾಟಿ ಹೋಗುತ್ತಾನೆ ಎಂದು ವರ್ಣನೆಯಿದೆ.

## ಕೀರ್ತನೆ ೧೧

**ನಾಕು ಕಾಯ** – ಸ್ಥೂಲ, ಸೂಕ್ಷ್ಮ, ಕಾರಣ ಮತ್ತು ಮಹಾ ಕಾರಣ ಹೀಗೆ ೪ ದೇಹಗಳು. ಪಾಂಚಭೌತಿಕ ದೇಹವು ಸ್ಥೂಲದೇಹವು (ಜಾಗ್ರತ್ ಅವಸ್ಥೆ). ಸತ್ತ ಮೇಲೆ ಉಳಿಯುವ ವಾಸನಾಮಯ ದೇಹವು ಸೂಕ್ಷ್ಮ ದೇಹವು (ಸ್ವಪ್ನಾವಸ್ಥೆ). ಇದಕ್ಕೆ ಲಿಂಗದೇಹವೆಂದೂ ಕರೆಯುತ್ತಾರೆ. ಸ್ಥೂಲ, ಸೂಕ್ಷ್ಮ ದೇಹಗಳೇ ನಿಜವೆಂದು ತಿಳಿಯುವದು ಅಜ್ಞಾನ. ಈ ಅಜ್ಞಾನವೇ ಕಾರಣ ಶರೀರ (ಸುಷುಪ್ತಿ ಅವಸ್ಥೆ). ನಾನು ಅಂದರೆ ಆತ್ಮತತ್ತ್ವವು ಅದು ಸ್ವಸಂವೇದ್ಯ ಮತ್ತು ಪರಿಪೂರ್ಣವಿದೆ ಎಂಬ ಅಪರೋಕ್ಷಾನುಭೂತಿಯೇ ಮಹಾಕಾರಣ (ತುರ್ಯಾವಸ್ಥೆ). ಕೆಲವರು ತುರ್ಯಾತೀತ ಅವಸ್ಥೆಯೊಂದು ಇದೆ ಎಂದು ಕಲ್ಪಿಸಿ ಅದಕ್ಕೆ ಉನ್ಮನಿ ಅವಸ್ಥೆಯೆಂದು ಕರೆಯುತ್ತಾರೆ. ಹೀಗೆ ಹೆಚ್ಚಿನ ಅವಸ್ಥೆಯನ್ನು ಎಣಿಸುವದು ಸರಿಯಲ್ಲ. ಯಾಕೆಂದರೆ, ಬೇರೆ ಕೆಲವರು ಉನ್ಮನೀತೀತ ಅವಸ್ಥೆ ಯೊಂದನ್ನು ಕಲ್ಪಿಸಬಹುದು. ಅವಸ್ಥೆಗಳನ್ನು ಹೆಚ್ಚು ಮಾಡುತ್ತ ಹೋದರೆ ಅನವಸ್ಥಾ ಪ್ರಸಂಗ ಎಂಬ ದೋಷ ಬರುವದು. ಆದ್ದರಿಂದ ತುರ್ಯಾವಸ್ಥೆಯೇ ಕೊನೆಯ ಅವಸ್ಥೆ : ಅದಕ್ಕೆ ಉನ್ಮನಿ ಅವಸ್ಥೆ ಎನ್ನಬಹುದು.

## ಕೀರ್ತನೆ ೧೨

**ನಾಮರೂಪ ವರ್ಣಕ್ರಿಯಾ** – ನಾಮರೂಪ ಇವು ಬೌದ್ಧ ತತ್ತ್ವ ಜ್ಞಾನದಲ್ಲಿಯ ಪಾರಿಭಾಷಿಕ ಶಬ್ದಗಳು. ಈ ತತ್ತ್ವಜ್ಞಾನದ ಪ್ರಕಾರ, ನಾಮ ರೂಪಗಳೇ ಸತ್ಯವಾದವುಗಳು, ಅವೇ ಸದ್ವಸ್ತುಗಳು. ಆದರೆ ಅದ್ವೈತವೇದಾಂತದ ಪ್ರಕಾರ ನಾಮರೂಪಗಳು ಸುಳ್ಳು, ಆಭಾಸಮಯವಾದವುಗಳು. ಬ್ರಹ್ಮತತ್ತ್ವ ಒಂದನ್ನು ಬಿಟ್ಟು ಉಳಿದ ಎಲ್ಲವೂ ಮಿಥ್ಯೆ. ವರ್ಣ, ಕ್ರಿಯಾ ಇವು ನ್ಯಾಯ ದರ್ಶನದಲ್ಲಿಯ ಪಾರಿಭಾಷಿಕ ಪದಗಳು. ನ್ಯಾಯದರ್ಶನವು ವರ್ಣ, ಕ್ರಿಯಾ ಸತ್ಯವೆಂದು ಪ್ರತಿಪಾದಿಸುತ್ತದೆ. ಆದರೆ ಅದ್ವೈತ ವೇದಾಂತವು ಇವನ್ನು ಅಲ್ಲಗಳೆಯುತ್ತದೆ. ಒಟ್ಟಿನಲ್ಲಿ, ನಾಮ, ರೂಪ, ವರ್ಣ, ಕ್ರಿಯಾ ಇವುಗಳು ಬ್ರಹ್ಮತತ್ತ್ವಕ್ಕೆ ಅನ್ವಯಿಸಲಾರವು, ಎಂದು ಅದ್ವೈತ ವೇದಾಂತದ ಮತ.

## ಕೀರ್ತನೆ ೧೩

**ನಾದಬಿಂದುಕಲಾತೀತ** – ಕುಂಡಲಿನಿ ಶಕ್ತಿಯು ನಾಭಿ ಕಮಲಕ್ಕೆ ಮುಟ್ಟಿದ ಮೇಲೆ ಕೇಳ ಬರುವ ಅನಾಹತ ಧ್ವನಿಯೆಂದರೆ ನಾದ. ಈ ಶಕ್ತಿಯು ಹೃತ್ಕಮಲಕ್ಕೆ ಮುಟ್ಟಿದ ಮೇಲೆ ಬಿಂದುವಿನ ಅನುಭವವಾಗುತ್ತದೆ. ಅದು ವಿಶುದ್ಧ ಚಕ್ರ ಮುಟ್ಟಿದ ಮೇಲೆ ಕಲಾ ಅಂದರೆ ಜ್ಯೋತಿಯ ಅನುಭವವಾಗುತ್ತದೆ. ಈ ಮೂರೂ ದಾಟಿ ಕುಂಡಲಿನಿ ಶಕ್ತಿಯು ಸಹಸ್ರಾರ

ಚಕ್ರ ಮುಟ್ಟಲು ಆಗುವ ಅನುಭವ ನಾದಬಿಂದುಕಲಾತೀತ ಅವಸ್ಥೆ. ಪರಾತ್ಪರ ವಸ್ತುವು ನಾದಬಿಂದುಕಲಾತೀತ ಅಂದರೆ ಎಲ್ಲವನ್ನೂ ಮೀರಿದ್ದು.

## ಕೀರ್ತನೆ ೧೪

**ನ್ಯಾಸ** – ನ್ಯಾಸವೆಂದರೆ ಶರೀರದಲ್ಲಿ, ಮಂತ್ರೋಚ್ಚಾರದಿಂದ ದೇವತಾ ಪ್ರತಿಷ್ಠಾಪನೆ ಮಾಡಿಕೊಳ್ಳುವದು. ಜಪ ಪ್ರಾರಂಭಿಸುವ ಮೊದಲು ಆಯಾ ಮಂತ್ರಗಳನ್ನು ಹೇಳುತ್ತ ದೇಹದ ವಿವಿಧ ಭಾಗಗಳನ್ನು ಸ್ಪರ್ಶಿಸುವದರಿಂದ ಆ ಆ ಭಾಗಗಳಲ್ಲಿ ಆ ಆ ದೇವತೆಯ ಪ್ರತಿಷ್ಠಾಪನೆ ಆಗುತ್ತದೆ, ಈ ಪ್ರಕ್ರಿಯೆಗೆ ನ್ಯಾಸವೆನ್ನುತ್ತಾರೆ.

## ಕೀರ್ತನೆ ೧೫

**ಮುದ್ರೆ** – ದೇವತೆಗಳನ್ನು ಪ್ರಸನ್ನಗೊಳಿಸಲು ಕೈಯಿಂದ ಹಾಗೂ ಬೆರಳುಗಳಿಂದ ವಿಶಿಷ್ಟ ಆಕೃತಿ ಮಾಡಿ ತೋರಿಸುವ ಪ್ರಕ್ರಿಯೆಗೆ ಮುದ್ರೆ ಎನ್ನುತ್ತಾರೆ. ಧ್ಯಾನದ ದೃಷ್ಟಿಯಿಂದ, ಮನದ ಏಕಾಗ್ರತೆಗೆ ಹಾಗೂ ದೃಷ್ಟಿಯ ಸ್ಥಿರತೆಗೆ ಅನುಕೂಲವಾದ ಭಂಗಿ ಎಂದರೆ ಮುದ್ರೆ.

## ಕೀರ್ತನೆ ೧೬

**ಷಟ್-ಚಕ್ರ** – ಚಕ್ರ ಎಂದರೆ ಮಿದುಳಿನಲ್ಲಿಯ ಹಾಗೂ ಮಿದುಳು ಬಳ್ಳಿಯಲ್ಲಿಯ ಕೇಂದ್ರ. ಆರು ಚಕ್ರಗಳೆಂದರೆ – ಮೂಲಾಧಾರ, ಸ್ವಾಧಿಷ್ಠಾನ, ಮಣಿಪೂರ, ಅನಾಹತ, ವಿಶುದ್ಧ ಮತ್ತು ಆಜ್ಞಾ (ಇಲ್ಲವೇ ಅಗ್ನಿ). (೧) ಮೂಲಾಧಾರ (Pelvic Plexus). ಈ ಚಕ್ರವು ಕಟಿ ಪ್ರದೇಶದಲ್ಲಿ, ಬೆನ್ನು ಮೂಳೆಯ ಕೊನೆಯಲ್ಲಿಯ ತ್ರಿಕೋಣ ಎಲುಬಿನ ಹತ್ತಿರ ಇರುವದು, ಇದಕ್ಕೆ ನಾಲ್ಕು ದಳಗಳು. ಈ ಚಕ್ರದ ಅಧಿಷ್ಠಾತ್ರೀ ದೇವತೆಯೆಂದರೆ ಗಣಪತಿ. ಈ ಚಕ್ರದಲ್ಲಿ ಕುಂಡಲಿನಿ ಶಕ್ತಿಯು ಸುಪ್ತಾವಸ್ಥೆಯಲ್ಲಿರುತ್ತದೆ. ಕುಂಡಲಿನಿ ಅಂದರೆ ಮನುಷ್ಯ ನಲ್ಲಿಯ ಸೂಕ್ಷ್ಮ ಶಕ್ತಿ. (೨) ಸ್ವಾಧಿಷ್ಠಾನ (Aortic Plexus). ಈ ಚಕ್ರವು ಜನನೇಂದ್ರಿಯದ ಸಮತಲ ರೇಷೆಯ ಮೇಲೆ ಬೆನ್ನೆಲುಬಿನ ಮುಂದಿನ ಭಾಗದಲ್ಲಿ ಇರುವದು. ಇದಕ್ಕೆ ೬ ದಳಗಳು. ಬ್ರಹ್ಮಾ ಇದರ ಅಧಿಷ್ಠಾತ್ರೀ ದೇವತೆ (೩) ಮಣಿಪೂರ (Solar Plexus). ಇದು ಹೊಕ್ಕಳದ ಸಮೀಪದಲ್ಲಿರುವದು. ಇದಕ್ಕೆ ಹತ್ತು ದಳಗಳು. ವಿಷ್ಣು ಇದರ ಅಧಿಷ್ಠಾತ್ರೀ ದೇವತೆ (೪) ಅನಾಹತ (Cardiac Plexus). ಈ ಚಕ್ರವು ಹೃದಯದ ಸಮೀಪದಲ್ಲಿರುವದು. ಇದಕ್ಕೆ ೧೨ ದಳಗಳು. ಇದರ ಅಧಿಷ್ಠಾತ್ರೀ ದೇವತೆ ಎಂದರೆ ಶಂಕರ (೫) ವಿಶುದ್ಧ (Cervical Plexus). ಈ ಚಕ್ರವು ಕಂಠಸ್ಥಾನದಲ್ಲಿರುತ್ತದೆ. ಇದಕ್ಕೆ ೧೬ ದಳಗಳು. ಜೀವಾತ್ಮಾ ಇದರ ಅಧಿಷ್ಠಾತ್ರೀ ದೇವತೆ. (೬) ಆಜ್ಞಾ ಚಕ್ರ (Optic Thalamus). ಭ್ರೂಮಧ್ಯದಲ್ಲಿ ಇದು ಇರುವದು. ಇದಕ್ಕೆ ೨ ದಳಗಳು. ಪರಮಾತ್ಮಾ ಈ ಚಕ್ರದ ಅಧಿಷ್ಠಾತ್ರೀ ದೇವತೆ.

## ಕೀರ್ತನೆ ೧೭

**ಷಟ್-ಚಕ್ರ-ಭೇದನ** – ಷಟ್‌ಚಕ್ರಭೇದನವೆಂದರೆ ಆರೂ ಚಕ್ರಗಳನ್ನು ಮೀರುವದು, ಅಂದರೆ ದಾಟುವದು. ಈ ಭೇದನದ ೨ ಮಾರ್ಗಗಳಿವೆ. ಒಂದು ಪೂರ್ವ ಮಾರ್ಗ, ಇನ್ನೊಂದು ಪಶ್ಚಿಮ ಮಾರ್ಗ. ಪೂರ್ವ ಮಾರ್ಗದಲ್ಲಿ ಕುಂಡಲಿನಿಯು ಅಂದರೆ ಪ್ರಾಣಶಕ್ತಿಯು ಮೂಲಾಧಾರದಿಂದ ಸ್ವಾಧಿಷ್ಠಾನ, ಮಣಿಪೂರ ಇತ್ಯಾದಿ ಆರೂ ಚಕ್ರಗಳನ್ನು ದಾಟಿ ನೇರವಾಗಿ ಸಹಸ್ರಾರ ಚಕ್ರಕ್ಕೆ ಹೋಗುವುದು. ಪಶ್ಚಿಮ ಮಾರ್ಗದಲ್ಲಿ ತ್ರಿಕೂಟ, ಶ್ರೀಹಾಟ, ಗೋಲ್ಹಾಟ ಔಟಪೀಠ ಭ್ರಮರ (ವೇಣು) ಗುಂಫಾ ಹೀಗೆ ಹೆಚ್ಚಿನ ಚಕ್ರಗಳನ್ನು ಎಣಿಸುತ್ತಾರೆ. ಈ ಹೆಚ್ಚಿನ ಚಕ್ರಗಳು ವಿಶುದ್ಧ ಹಾಗೂ ಆಜ್ಞಾಚಕ್ರಗಳ ನಡುವೆ ಇರುತ್ತವೆ. ಮುಖದಲ್ಲಿ ತ್ರಿಕೂಟ, ನಾಲಿಗೆಯ ಹತ್ತರ ಶ್ರೀಹಾಟ, ಕಣ್ಣಿನ ಹತ್ತರ ಗೋಲ್ಹಾಟ, ಈ ಮೂರು ಸಂಧಿಗಳು ಕೂಡುವಲ್ಲಿ ಔಟಪೀಠ, ಶ್ರೋತ್ರ ಸ್ಥಾನದಲ್ಲಿ ಭ್ರಮರ ಗುಂಫಾ ಹೀಗೆ ಇರುತ್ತವೆ. ರಾಜಯೋಗವನ್ನು ಅವಲಂಬಿಸುವವರ ಕುಂಡಲಿನಿ ಶಕ್ತಿಯು ವಿಶುದ್ಧ ಚಕ್ರದಿಂದ, ಪೂರ್ವ ಮಾರ್ಗ ಹಿಡಿದು, ಸರಳವಾಗಿ ಆಜ್ಞಾಚಕ್ರಕ್ಕೆ ಬರುವದು. ಹಠಯೋಗವನ್ನು ಅವಲಂಬಿಸುವವರ ಕುಂಡಲಿನಿ ಶಕ್ತಿಯು ವಿಶುದ್ಧ ಚಕ್ರದಿಂದ ಪಶ್ಚಿಮ ಮಾರ್ಗ ಹಿಡಿದು ಆಜ್ಞಾಚಕ್ರಕ್ಕೆ ಬಳಸಾಗಿ ಹೋಗುವದು. ಮೂಲಾಧಾರದಿಂದ ವಿಶುದ್ಧದವರೆಗಿನ ಮಾರ್ಗ, ಹಾಗೂ ಆಜ್ಞಾ ಚಕ್ರದಿಂದ ಬ್ರಹ್ಮರಂಧ್ರ ಇಲ್ಲವೆ ಸಹಸ್ರಾರ ಚಕ್ರದ ವರೆಗಿನ ಮಾರ್ಗ ಎರಡೂ ಮಾರ್ಗದವರಿಗೆ ಸಮಾನವಾದುದು. ಎರಡೂ ಮಾರ್ಗಗಳಲ್ಲಿಯ ಭೇದವೆಂದರೆ – ಪ್ರಾಣ ಶಕ್ತಿಯ ವಿಶುದ್ಧ ಚಕ್ರದಿಂದ ಆಜ್ಞಾಚಕ್ರದವರೆಗಿನ ಪ್ರವಾಸ. ಈ ಪ್ರವಾಸ ಪೂರ್ವ ಮಾರ್ಗದಿಂದಲೋ ಅಥವಾ ಪಶ್ಚಿಮ ಮಾರ್ಗದಿಂದಲೋ ಇಷ್ಟೇ ಭೇದ. ಬ್ರಹ್ಮ ರಂಧ್ರ ಇದು ಮಿದುಳಿನಲ್ಲಿಯ ಒಂದು ವಿವರ. ಅದರೊಳಗಿಂದ ಹಾಯ್ದು ಜೀವಾತ್ಮನು ದೇಹದಲ್ಲಿಯ ಪರಮಾತ್ಮನ ಉಚ್ಚತಮ ನೆಲೆಯನ್ನು ಸೇರುವನೆಂದು ನಂಬಿಕೆ. ಬ್ರಹ್ಮರಂಧ್ರಕ್ಕೆ, ದಶಮ ದ್ವಾರವೆನ್ನುವರು. ಷಟ್‌ಚಕ್ರಗಳನ್ನೂ ಭೇದಿಸಿ ಕುಂಡಲಿನಿ ಶಕ್ತಿಯು ಸಹಸ್ರಾರ ಚಕ್ರಕ್ಕೆ (ಸಹಸ್ರಾರ ಕಮಲಕ್ಕೆ) ಮುಟ್ಟುತ್ತದೆ. ಸಹಸ್ರಾರ ಚಕ್ರವು ಮಿದುಳಿನಲ್ಲಿಯ ಅತಿ ಶ್ರೇಷ್ಠವಾದ ಪಾರಮಾರ್ಥಿಕ ಪ್ರಜ್ಞೆಯ ಕೇಂದ್ರ. ಇದಕ್ಕೆ ಶಿವಸ್ಥಾನವೆನ್ನುತ್ತಾರೆ. ಊರ್ಧ್ವಗಿರಿ, ಋಷಿಗಿರಿ, ಮೇಲು ಮಂಟಪ, ಕಮಲ ಸಿಂಹಾಸನ, ಶೂನ್ಯ ಸಿಂಹಾಸನವೆಂದೂ ಇದನ್ನು ಕರೆಯುವರು. ಇದು ಪರಮಾನಂದದ ಅವಸ್ಥೆ. ಕುಂಡಲಿನಿ ಶಕ್ತಿಯು ಸಹಸ್ರಾರ ಚಕ್ರಕ್ಕೆ ಮುಟ್ಟುವ ಮೊದಲು ಅದಕ್ಕೆ ನಾಲ್ಕು ಬೀದಿಗಳು ಒತ್ತಟ್ಟಿಗೆ ಕೂಡುವ ಒಂದು ಚೌಕು ಹತ್ತುತ್ತದೆ. ಈ ಚೌಕಿಗೆ ಶೃಂಗಾಟಕ, ವೇದಿಕೆ, ಪೀಠ, ಪೀಠಿಕೆ ಸದರ (ರು), ಅವನಿ ಎಂದು ಕರೆಯುತ್ತಾರೆ. ಸುಷುಮ್ನಾ ಅಂದರೆ ಯಾವ ನಾಡಿಯಲ್ಲಿ ಪ್ರಾಣವು ಸ್ಥಿರವಾಗಿ ಬ್ರಹ್ಮನೆಡೆಗೆ ಹೋಗುವದೋ ಆ ನಾಡಿಯು. ಇಡಾ. ಪಿಂಗಳಾ ಇವು ಸುಷುಮ್ನೆಯ ಎಡಬಲದ ಎರಡು ನಾಡಿಗಳು.

## ಕೀರ್ತನೆ ೧೮

**ಷೋಡಶೋಪಚಾರ** – ಮುಂದಿನ ಶ್ಲೋಕವು ಇವುಗಳನ್ನು ವಿವರಿಸುತ್ತದೆ. ಆಸನಂ

ಸ್ವಾಗತಂ ಪಾದ್ಯಂ ಅರ್ಘ್ಯಂ ಆಚಮನೀಯಕಮ್ । ಮಧುಪರ್ಕಾಚಮಸ್ನಾನಂ ವಸನಾಭರಣಾನಿ ಚ । ಗಂಧ ಪುಷ್ಪೇ ಧೂಪ ದೀಪೌ ನೈವೇದ್ಯಂ ವಂದನಂ ತಥಾ ॥

## ಕೀರ್ತನೆ ೧೯

**ಸಂಚಿತ, ಪ್ರಾರಬ್ಧ, ಕ್ರಿಯಮಾಣ** – ಇವು ಕರ್ಮದ ಪ್ರಕಾರಗಳು. ಹಿಂದಿನ ಜನ್ಮದಲ್ಲಿ, ಹಾಗೂ ಇದೇ ಜನ್ಮದಲ್ಲಿ ಈ ಕ್ಷಣದ ವರೆಗೆ, ಮಾಡಿದ ಕರ್ಮ ಸಂಗ್ರಹವೇ ಸಂಚಿತ. ಇದಕ್ಕೆ ನ್ಯಾಯದರ್ಶನದಲ್ಲಿ ಅದೃಷ್ಟವೆಂದು, ಪೂರ್ವ ಮೀಮಾಂಸಾ ದರ್ಶನದಲ್ಲಿ ಅಪೂರ್ವವೆಂದು ಹೆಸರು. ಈ ಎಲ್ಲ ಸಂಚಿತ ಅಂದರೆ ಕೂಡಿ ಹಾಕಲ್ಪಟ್ಟ ಕರ್ಮದ ಫಲವನ್ನು ಒಮ್ಮೆಲೆ ಭೋಗಿಸುವದು ಸಾಧ್ಯವಿಲ್ಲ. ಸಂಚಿತ ಕರ್ಮದ ಯಾವ ಭಾಗದ ಫಲ ಭೋಗಿಸುವದು ಸುರುವಾಗಿದೆಯೋ ಅದು ಪ್ರಾರಬ್ಧ : ಅಂದರೆ ಸುರುವಾದ, ಆರಂಭಿಸಲ್ಪಟ್ಟ ಸಂಚಿತವೇ ಪ್ರಾರಬ್ಧ. ಈಗ ಹಾಗೂ ಇನ್ನು ಮುಂದೆ ಮಾಡುವ ಕರ್ಮ ಎಂದರೆ ಕ್ರಿಯಮಾಣ.

# ಅನುಬಂಧ – ೩

## ಸಹಾಯಕ ಸಾಹಿತ್ಯ


೧. ರಾಮಲಿಂಗ ವಿರಚಿತ ಶ್ರೀ ಭೀಮಾಶಂಕರರ ಚರಿತ್ರೆ (ಅಪ್ರಕಾಶಿತ ಹಸ್ತಲಿಖಿತ).

೨. ಶ್ರೀ ಸದ್ಗುರು ಭೀಮಾಶಂಕರ ಮಠ, ಸಿಂಧಾಪುರ ನಿತ್ಯ ಭಜನ ಮಾಲಾ ಸಂಗ್ರಹ ; ಸಂಗ್ರಾಪಕರು – ಮಲ್ಹಾರ ವೆಂಕಟೇಶ ಸೊಲ್ಲಾಪುರಕರ ; ಪ್ರಕಾಶಕರು – ಶ್ರೀಸದ್ಗುರು ದತ್ತಪ್ಪಯ್ಯ ಮಹಾರಾಜ, ಭೀಮಾಶಂಕರ ಮಠ, ಸಿಂದಗಿ, ೧೯೬೯.

೩. ಸಿಂದಗಿಯ ಬಿಂದಗಿ, ಡಾ. ಕೃಷ್ಣ ಕೊಲ್ಹಾರ ಕುಲಕರ್ಣಿ ; ಪ್ರಕಾಶಕ – ಶ್ರೀ ಭೀಮಾ ಶಂಕರ ಮಠ, ಸಿಂದಗಿ ೧೯೮೭.

೪. ಶ್ರೀ ಗುರು ಭಜನ ಮಾಲಾಸಂಗ್ರಹ ಮತ್ತು ಶಿವಮಹಿಮ್ನ ಸ್ತೋತ್ರ : ಪ್ರಕಾಶಕರು, ಕಬೀರನಾಥ ಸ್ವಾಮೀಜಿ, ಬ್ರಹ್ಮ ವಿದ್ಯಾಶ್ರಮ, ಕೆಂಪೇಗೌಡ ರೋಡ್ ಬಡಾವಣೆ, ಬೆಂಗಳೂರ ನಗರ ೧೯೬೪.

೫. ಶ್ರೀ ಗುರು ತತ್ತ್ವಮಾಲಾ ; ಸಂಪಾದಕರು – ಶಂಕರಾನಂದ ಸ್ವಾಮಿಗಳು, ಸಗರ ವಾ.ಸಂ. ಸುರಪುರ ; ಪ್ರಕಾಶಕ ಡಾ॥ ಸಿ. ಡಿ. ಹುಗ್ಗಿ, ರಘವೀರ ಡಿಸ್ಪೆನ್ಸರಿ. ಆಜಾದ ರೋಡ್, ವಿಜಾಪುರ.

೬. ಶ್ರೀ ತ್ರಿವಿಕ್ರಮಾನಂದ ಚರಿತ್ರಾಮೃತ : ಜಿ. ಕೆ. ಜೋಶಿ ; ಪ್ರಕಾಶಕ – ಶ್ರೀ ಶಂಕರಾನಂದ ಸ್ವಾಮಿಗಳು ಸುರಪುರ, ೧೯೭೧.

೭. ಅಮೃತ – ಧಾರ್ಮಿಕ ಲೇಖನಗಳ ಸಂಗ್ರಹ ; ಸಂಪಾದಕರು –

ಬಿ. ಆರ್. ನಾಡಗೌಡ ಮತ್ತು ಕೆ. ಬಿ. ಕುಲಕರ್ಣಿ : ಪ್ರಕಾಶಕ – ಭಾರತೀಯ ಸಂಸ್ಕೃತಿ ಪ್ರಸಾರ ಮಂಡಳ, ಸಿಂದಗಿ ೧೯೮೦.

೮. ಭವತಾರಕರ ಗೀತಗಳು : ಸಂಗ್ರಾಹಕ, ಶ್ರೀ ವಿಶ್ವನಾಥ ಶಾಸ್ತ್ರಿ ತಿ. ನರಗುಂದ : ಪ್ರಕಾಶಕ–ತಾಪಸ ಕೃಷ್ಣರಾಯರು, ಸುಧಾ ಮುದ್ರಣಾಲಯ, ಹುಬ್ಬಳ್ಳಿ, ೧೯೫೭.

९. गुरुमालिका, संपादक, द.वें. केतकर, प्रकाशक, श्री रुक्मांगद देवस्थान समिती, विजापूर, १९५४.

೧೦. ಶ್ರೀ ರುಕ್ಮಾಂಗದ ಚರಿತ್ರೆ, ವಿದ್ವಾನ್ ಭೀಮಾಚಾರ್ಯ ಅ. ಗುಡಿ, ಪ್ರಕಾಶಕ, ಶ್ರೀ ಗುರು ರುಕ್ಮಾಂಗದ ದೇವಸ್ಥಾನ ಸಮಿತಿ, ವಿಜಾಪುರ.

೧೧. ಶ್ರೀ ರುಕ್ಮಾಂಗದ ಚರಿತ್ರೆ, ಶಾಮರಾವ ರೋಹಿಡೇಕರ : ಪ್ರಕಾಶಕ, ಶ್ರೀ ರುಕ್ಮಾಂಗದ ದೇವಸ್ಥಾನ ಸಮಿತಿ, ವಿಜಾಪುರ, ೧೯೮೪.

೧೨. ಭವರೋಗ ವೈದ್ಯ ಶ್ರೀ ರುಕ್ಮಾಂಗದ ಪಂಡಿತರು : ಪ್ರೊಫೆಸರ್ ಎನ್. ವ್ಹಿ. ಘೊಬ್ಬಿ, ಪ್ರಕಾಶಕ, ಪ್ರೊಫೆಸರ ಎನ್. ವ್ಹಿ. ಘೊಬ್ಬಿ, 'ಆಶೀರ್ವಾದ', ದಿವಟಗೇರಿ ಗಲ್ಲಿ, ವಿಜಾಪುರ, ಎರಡನೆಯ ಆವೃತ್ತಿ, ೧೯೯೬.

೧೩. ಶ್ರೀ ಸದ್ಗುರು ರುಕ್ಮಾಂಗದ ಪಂಡಿತರಿಂದ ರಚಿತವಾದ ಕನ್ನಡ ಪದಗಳು : ಪ್ರಕಾಶಕ, ರುಕ್ಮಾಂಗದ ದೇವಸ್ಥಾನ ಸಂಸ್ಥೆ : ಎರಡನೆಯ ಆವೃತ್ತಿ, ೧೯೬೩

೧೪. ಶ್ರೀ ಗುರು ರುಕ್ಮಾಂಗದ ಪಂಡಿತರ ಸಂಕ್ಷಿಪ್ತ ಚರಿತ್ರೆ : ಸಂಗ್ರಾಹಕರು, ವಿದ್ವಾನ್ ಬಿ.ಎ. ಗುಡಿ. ಪ್ರಕಾಶಕರು, ಶ್ರೀ ರುಕ್ಮಾಂಗದ ದೇವಸ್ಥಾನ ಸಂಸ್ಥೆ, ವಿಜಾಪುರ, ಎರಡನೆಯ ಆವೃತ್ತಿ, ೧೯೭೨.

೧೫. ಶ್ರೀ ರುಕ್ಮವಾಣಿ, ಸಂಪಾದಕರು, ಪ್ರೊ. ಎನ್. ವ್ಹಿ. ಘೊಬ್ಬಿ : ಪ್ರಕಾಶಕರು, ಶ್ರೀ ರುಕ್ಮಾಂಗದ ಆರಾಧನಾ ಸಮಿತಿ, ವಿಜಾಪುರ, ಎರಡನೆಯ ಆವೃತ್ತಿ, ೧೯೯೪.

೧೬. Thus spake Shri Rukmangad ; English version of Kannada Book, Rukmavani, Prof.N.V. Thobbi ; Publisher, Ramakrishna Academy of Education and Culture, Bijapur 1993.

೧೭. Mysticism in Maharashtra, Prof. R.D. Ranade ; Publisher, Aryabhushan Press, Poona, First Edition 1933.

೧೮. Pathway to God in Hindi Literature ; Prof. R.D. Ranade, Shri Gurudev Ranade Samadhi Trust, Nimbal R.S. P.N : 586 211, Third Edition 1997.

೧೯. श्रीमद्भगवद्गीतारहस्य : बाळ गंगाधर टिळक, प्रकाशक, ज.श्री. टिळक, ५६८ नारायण पेठ, लो. टिळक मंदिर, पुणे, आवृत्ती ७ वी, १९५६.

೨೦. परमार्थमंदिर, संकलनकार, रा.द. रानडे, संपादक, न.ग. दामले, वा.त्र्यं. आपटे, प्रकाशक, वा. त्र्यं. आपटे, श्री. गुरुदेव परमार्थ मंदिर, जमखंडि, १९६३.

೨೧. कन्नड परमार्थसोपान, अनुवादिका, सौ. पद्मा कुलकर्णी, प्रकाशक, भारतीय विद्या भवन, मुंबई, १९९२.

# ಅನುಬಂಧ - ೪

## ಕೀರ್ತನೆಗಳ ಅಕಾರಾದಿ

## ಹ

ಕನ್ನಡ ಸಾಹಿತ್ಯದ ಇತಿಹಾಸದಲ್ಲಿ
ಹರಿದಾಸ ಸಾಹಿತ್ಯ ಒಂದು ಪ್ರಮುಖ ಮಜಲು.
ಹರಿದಾಸರು ರಚಿಸಿರುವ ವಿಪುಲ ಕೀರ್ತನೆಗಳು
ಕರ್ನಾಟಕ ಸಾಂಸ್ಕೃತಿಕ ತವನಿಧಿಗಳಾಗಿವೆ.
ದಾಸ ಸಾಹಿತ್ಯದಲ್ಲಿ ಕಂಡುಬರುವ
ಭಾಷಿಕ ಹಾಗೂ ಸಾಹಿತ್ಯಕ ಸೊಬಗು,
ಆಧ್ಯಾತ್ಮಿಕ ಬೆಡಗು, ಸಂಗೀತದ ಮೆರುಗು ಅನನ್ಯ.
ದಾಸ ಸಾಹಿತ್ಯವು ಜ್ಞಾನ, ಮನೋಲ್ಲಾಸ
ಮತ್ತು ಜೀವ ಸಂಸ್ಕಾರಗಳ ತ್ರಿವೇಣಿ ಸಂಗಮ.
ಇಂಥ ದಾಸ ಸಾಹಿತ್ಯವನ್ನು
ಸಮಗ್ರವಾಗಿ ಸಂಗ್ರಹಿಸಿ, ಸಂಪಾದಿಸಿ,
ಬಹುಮಾಧ್ಯಮದಲ್ಲಿ ಹಾಗೂ ಸುಲಭ ಬೆಲೆಯಲ್ಲಿ
ಕನ್ನಡ ಜನತೆಗೆ ನೀಡುವ ಮಹತ್ವದ ಆಶಯವೇ
**ಸಮಗ್ರ ದಾಸ ಸಾಹಿತ್ಯ ಯೋಜನೆ.**



ಕರ್ನಾಟಕ ಸರ್ಕಾರ
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ
ಕನ್ನಡ ಭವನ, ಜೆ.ಸಿ. ರಸ್ತೆ
ಬೆಂಗಳೂರು